# ಶಾಸನ ಸಾಹಿತ್ಯ ಸಂಚಯ

ಸಂಪಾದಕರು

**ಎ. ಎಮ್. ಅಣ್ಣಿಗೇರಿ,** ಎಮ್. ಎ.,

ಕ್ಯೂರೇಟರ ಆಫ್ ದಿ ಮ್ಯೂಝಿಯಂ

**ಮೋವುಂಡಿ ಮಲ್ಲಾರಿ**

ಕನ್ನಡ ಸಂಶೋಧನ ಸಂಸ್ಥೆ

ಮುನ್ನುಡಿಕಾರರು

**ಡಾ. ಬಿ. ಎ. ಸಾಲೆತ್ತೂರ**

ಪಿಎಚ್. ಡಿ., ಡಿ. ಫಿಲ್

ಡಾಯರೆಕ್ಟರ, ಕನ್ನಡ ಸಂಶೋಧನ ಸಂಸ್ಥೆ

**ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ**

# ಶಾಸನ ಸಾಹಿತ್ಯ ಸಂಚಯ


ಸಂಪಾದಕರು :

**ಎ. ಎಮ್. ಅಣ್ಣಿಗೇರಿ,** ಎಮ್. ಎ.,

ಕ್ಯೂರೇಟರ ಆಫ್ ದಿ ಮ್ಯೂಝಿಯಂ

**ಮೇವುಂಡಿ ಮಲ್ಲಾರಿ**

ಕನ್ನಡ ಸಂಶೋಧನ ಸಂಸ್ಥೆ

ಮುನ್ನುಡಿಕಾರರು :

**ಡಾ. ಬಿ. ಎ. ಸಾಲೆತ್ತೂರ**

ಪಿಎಚ್. ಡಿ., ಡಿ. ಫಿಲ್.

ಡಾಯರೆಕ್ಟರ, ಕನ್ನಡ ಸಂಶೋಧನ ಸಂಸ್ಥೆ



**ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ**

೧೯೬೦

# ಮುನ್ನುಡಿ

ಕರ್ನಾಟಕದಲ್ಲಿ ನೂರಾರು ಘನತೆವೆತ್ತ ದೇವಾಲಯಗಳು, ಸಾವಿರಾರು ಮೂರ್ತಿಗಳು ಮತ್ತು ಇತರ ಕಲಾಕೃತಿಗಳು, ಕೋಟೆ-ಕೊತ್ತಳಗಳು, ಅನೇಕಾನೇಕ ನಾಣ್ಯಗಳು, ಸಾಹಿತ್ಯ ಗ್ರಂಥ ಮುಂತಾದವುಗಳು ನಮ್ಮ ದೇಶದ ಚರಿತ್ರೆ, ಸಂಸ್ಕೃತಿಯನ್ನು ತಿಳುಹಿಸಿಕೊಡುವಂತೆ ಕಲ್ಲು, ತಾಮ್ರಪಟಗಳ ಮೇಲಿನ ಶಾಸನಗಳೂ ಸಹ ಪೂರ್ವಚರಿತ್ರೆಯನ್ನು ತಿಳಿಸುವ ಅತ್ಯುಪಯುಕ್ತ ಸಾಧನಗಳಾಗಿವೆ. ಇಂಥ ಶಾಸನ-ಗಲ್ಲುಗಳು ಈ ನಾಡಿನ ಪ್ರತಿ ಊರಲ್ಲಿಯೂ ಇವೆ ಎನ್ನಬಹುದು ಇವೆಲ್ಲವುಗಳನ್ನು ಅಭ್ಯಸಿಸಿ ತೀವ್ರವಾಗಿ ಪ್ರಕಟಿಸುವದು ಅವಶ್ಯ.

ಶಾಸನವೆಂದರೆ ರಾಜಾಜ್ಞೆ. ರಾಜನು ತಾನು ಅಥವಾ ಬೇರೆ ರಾಜರು ಕೊಟ್ಟ ದತ್ತಿಯನ್ನು ಯಾರೂ ನಾಶಮಾಡಬಾರದೆಂದೂ ಅದನ್ನು ತನ್ನ ಕೆಳಗಿನ ಅಧಿಕಾರಿಗಳು ನಡಿಸಿಕೊಂಡುಹೋಗಬೇಕೆಂದೂ ವಿಧಿಸುತ್ತಿದ್ದನು. ತನ್ನ ಆಜ್ಞೆ-ಯನ್ನು ಜನರಿಗೆ ತಿಳಿಯಪಡಿಸಲು ಹಾಸುಗಲ್ಲುಗಳ ಮೇಲೆ ಅಥವಾ ತಾಮ್ರಪಟ್ಟಿಕೆಗಳ ಮೇಲೆ ಬರೆಯಿಸುತ್ತಿದ್ದನು. ಈ ಶಾಸನಗಳನ್ನು ಬರೆಯಲು ದೊಡ್ಡವರ್ಗದ ಒಬ್ಬ ಅಧಿಕಾರಿಯನ್ನಿಟ್ಟುಕೊಳ್ಳುತ್ತಿದ್ದರು. ಸೇನಬೋವರೂ ಶಾಸನಗಳನ್ನು ರಚಿಸಿದ್ದಾರೆ.

ಪ್ರಾಚೀನ ಶಾಸನಗಳಲ್ಲಿ ರಾಜಮನೆತನ, ರಾಜನ ಹೆಸರು, ದತ್ತಿಯ ಕಾಲ, ದತ್ತಿಯ ವಿವರ ಮಾತ್ರವನ್ನಷ್ಟೆ ಬರೆಯುತ್ತಿದ್ದರು. ಬರಬರುತ್ತ ಶಾಸನ-ಕಾರರು ಹೆಚ್ಚಿನ ವಿಷಯವನ್ನು ಅದರಲ್ಲಿ ಉಲ್ಲೇಖಿಸಹತ್ತಿದರು. ದೇವತಾಸ್ತುತಿ, ದೇಶದ ವರ್ಣನೆ, ಅದರ ರಾಜ, ಅವನ ಅಧಿಕಾರಿಗಳು, ಅದರ ಕಾಲ, ದಾನವನ್ನು ಸ್ವೀಕರಿಸುವವನ ಪಾಂಡಿತ್ಯ, ಜನರ ನೀತಿಯ ಮಟ್ಟ, ಆದರ್ಶ, ಬುದ್ಧಿವಂತಿಕೆ ಇತ್ಯಾದಿ ವಿಷಯಗಳನ್ನು ಶಾಸನಗಳಲ್ಲಿ ಬರೆಯತೊಡಗಿದರು. ಕೆಲವು ಶಾಸನ-ಗಳಂತೂ ಉತ್ತಮ ಸಾಹಿತ್ಯ ಗುಣದಿಂದ ಕೂಡಿದವುಗಳಾಗಿವೆ. ಅಭಿನವಪಂಪ ಮೊದಲಾದ ಉತ್ತಮ ಸಾಹಿತಿಗಳು ಶಾಸನಗಳನ್ನು ರಚಿಸಿದ್ದಾರೆ. ಈ ಶಾಸನ ಸಾಹಿತ್ಯದಲ್ಲಿ ಬಂದ ಅಬಲೂರು (**ನಂ. ೯೯**), ಕುರುಗೋಡು (**ನಂ. ೮೨**), ಹಿರೇ-ಹಳ್ಳಿ (**ನಂ. ೩೮**) ಮುಂತಾದ ಹಲವು ಶಾಸನಗಳಲ್ಲಿ ಉತ್ತಮ ಕಾವ್ಯಗುಣ ಹೊರಹೊಮ್ಮಿದೆ. ರಾಜರ ಶೌರ್ಯ, ರಾಜ್ಯಾಡಳಿತ ಚತುರತೆ, ನಾಡಿನ ಸೃಷ್ಟಿಯ ಸೊಬಗು, ಜನರ ರೀತಿ-ನೀತಿ, ಸಾಮಾಜಿಕ-ಧಾರ್ಮಿಕ ಜೀವನ, ಸಂಪತ್ತು ಮುಂತಾದ ಅನೇಕ ವಿಷಯಗಳನ್ನು ಮಾರ್ಮಿಕವಾಗಿ ವರ್ಣಿಸಿದ ಶಾಸನ ಭಾಗ-ಗಳನ್ನೂ ನಮ್ಮ ದೇಶದ ಚರಿತ್ರೆ ಮತ್ತು ಸಾಹಿತ್ಯವನ್ನೂ ಅಭ್ಯಾಸ ಮಾಡುವುದರ ಸಲುವಾಗಿ ಈ ಶಾಸನಸಾಹಿತ್ಯ ಸಂಚಯದ ಸಂಪಾದಕರು ನಾವಿರಾರು ಶಾಸನಗಳನ್ನು ನೋಡಿ ಅಪೌಲ್ಯವಾದ ಕೆಲವು ಗದ್ಯ-ಪದ್ಯಭಾಗಗಳನ್ನಷ್ಟೇ-ಅಲ್ಲಲ್ಲಿ ಹರಡಿದ ಕನ್ನಡ

ಶಾಸನ ಸಾಹಿತ್ಯ ಮಧುವನ್ನು–ಸಂಚಯಿಸಿ ಕನ್ನಡ ಸಾರಸ್ವತ ಲಕ್ಷ್ಮಿಗೆ ಮುಡುಪಾಗಿರಿಸಿ-ದ್ದಾರೆ. ಈ ಗ್ರಂಥದ ಉಪಯುಕ್ತತೆಯನ್ನು ಹೆಚ್ಚಿಸಲು ಸಂಪಾದಕರಾದ ಶ್ರೀ. ಎ. ಎಂ. ಅಣ್ಣೀಗೇರಿ ಎಂ. ಎ. ಮತ್ತು ಶ್ರೀ. ಮೇವುಂಡಿ ಮಲ್ಲಾರಿ ಅವರು, ಆಯ್ದ ಶಾಸನ ಭಾಗಗಳಿಗೆ ವಿವರಣೆಕೊಟ್ಟು, ಅರ್ಥಹೇಳಿ, ಸಮಾಲೋಚನೆ ಮಾಡಿದ್ದಾರೆ. ಭಾಷೆಯ ಬೆಳವಣಿಗೆಯ ಕಲ್ಪನೆ ಬರಬೇಕೆಂದು ಶಾಸನ ಭಾಗಗಳನ್ನು ಕಾಲಾನು-ಕ್ರಮವಾಗಿ ಕೊಟ್ಟಿದೆ. ದಿ. ಮಹಾಮಹೋಪಾಧ್ಯಾಯ, ಪ್ರಾಕ್ತನ ವಿಮರ್ಶ ವಿಚಕ್ಷಣ ಆರ್. ನರಸಿಂಹಾಚಾರ್ಯರ **'ಶಾಸನಪದ್ಯ ಮಂಜರಿ'** ಯನ್ನು ಪ್ರಕಟಿಸಿದ ತರುವಾಯ ಸಮಗ್ರ ಶಾಸನಗಳ ಸೊಬಗನ್ನು ಸಂಗ್ರಹರೂಪದಲ್ಲಿ ಕೊಟ್ಟಿರುವ ಗ್ರಂಥವೆಂದರೆ ಇದೇ ಎರಡನೆಯದೆಂದು ಹೇಳಬಹುದು. ಅವರು ತಮ್ಮ ಗ್ರಂಥದಲ್ಲಿ ಹೆಚ್ಚಾಗಿ ಹಳೇ ಮೈಸೂರಿನ ಶಾಸನಗಳನ್ನು ಸಂಗ್ರಹಿಸಿದ್ದಾರೆ. ಈ ಸಂಚಯದಲ್ಲಿ ವಿಶೇಷವಾಗಿ ಉತ್ತರ ಕರ್ನಾಟಕದ ವಿವಿಧ ಭಾಗಗಳಿಂದ ಶಾಸನದ ಅವತರಣಿಕೆಗಳನ್ನು ಆಯ್ದುಕೊಂಡಿದೆ. ಈ ಶಾಸನ ಭಾಗಗಳು ಹಿಂದಿನ ಕಾಲದ-ವಿದ್ದರೂ ಅವುಗಳಲ್ಲಿಯ ಪ್ರತಿಭೆಯಿಂದ ನಿತ್ಯ ನೂತನವಾಗಿವೆ. ಶಾಸನ ಕವಿಗಳು ವಾಗ್ದೇವತೆಯ ಭಾಂಡಾರವಸೂಡೆದು ನಾನಾ ಬಗೆಯ ಉಕ್ತಿಚಮತ್ಕೃತಿಗಳಿಂದ, ಬೆಡಗು ಬಿನ್ನಾಣಗಳಿಂದ, ಭಾವ-ರಸ-ಬಂಧಗಳಿಂದ, ರಸಮೊಸರ್ವಂತೆ ಬಣ್ಣಿಸಿದ್ದನ್ನೆ ಇಲ್ಲಿ ಶೇಖರಿಸಿದೆ. ಈ ಸಂಚಯವನ್ನು ಸ್ವತಃ ಓದಿಯೆ ರಸಾಸ್ವಾದವನ್ನನುಭವಿಸ-ಬೇಕು. ಈ **'ಶಾಸನ ಸಾಹಿತ್ಯ ಸಂಚಯ'** ಮೆದುಳಿಗೆ ಆಹಾರ, ಮನಕ್ಕೆ ಆನಂದ, ಸುವಿಚಾರವನ್ನು ಕೊಟ್ಟು ನಮ್ಮ ದೇಶದ ಉದಾತ್ತ ಚರಿತ್ರೆ ಮತ್ತು ಸಾಹಿತ್ಯ ನಿಧಿಯಲ್ಲಿ ಜನರಿಗೆ ಆಸಕ್ತಿ ಉಂಟುಮಾಡುವದೆಂದು ನಂಬಿದ್ದೇವೆ.

ಕನ್ನಡ ಸಂಶೋಧನ ಸಂಸ್ಥೆ,
ಧಾರವಾಡ, ತಾ. ೨೫–೬–೧೯೬೧

**ಬಿ. ಎ. ಸಾಲೆತ್ತೂರ,**
ಡಾಯರೆಕ್ಟರ.

# ಸಂಚಯದ ಸಮಾಲೋಚನ

ಕನ್ನಡ ಶಾಸನವಾಙ್ಮಯ ನಿಧಿ ಮಹಾಸಾಗರೋಪಾದಿಯಲ್ಲಿ ಅಪಾರ ವಾಗಿದೆ. ಸರಕಾರದ ಪ್ರಾಚ್ಯಸಂಶೋಧನ ಶಾಖೆಯವರ ಹಲವಾರು ಸಂಪುಟ ಗಳಲ್ಲಿಯೂ ಬೇರೆ ಕೆಲವು ಗ್ರಂಥಗಳಲ್ಲಿಯೂ ಕರ್ನಾಟಕದ ಅಸಂಖ್ಯ ಕನ್ನಡ ಶಾಸನಗಳು ಪ್ರಕಟವಾಗಿದ್ದರೂ ಇನ್ನೂ ಸಂಶೋಧಿತವಾಗಿ ಬೆಳಕಿಗೆ ಬಾರದೆ ಉಳಿ ದಿರುವ ಶಾಸನಗಳ ಸಂಖ್ಯೆಯೂ ಸಣ್ಣದಿಲ್ಲ. ಇವೆಲ್ಲ ಅಪರಿಮಿತ ಶಾಸನಗಳಲ್ಲಿ ಎಷ್ಟೋ ಸಾಹಿತ್ಯಿಕಗುಣದಿಂದ ಅತ್ಯುತ್ತಮವಾದ ಸರಸಕಾವ್ಯಕೃತಿಗಳಿವೆ; ಎಷ್ಟೋ ನಮ್ಮ ನಾಡಿನ ಹಿಂದಿನ ಜನರ ಉದಾತ್ತ ಚರಿತವನ್ನು ನಮಗೆ ಹೇಳುತ್ತಿವೆ; ಎಷ್ಟೋ ನಮ್ಮ ಜನತೆಯ ಪ್ರಾಚೀನ ಸಂಸ್ಕೃತಿಯ ಬಗೆಗೆ ತಿಳಿವಳಿಕೆಯನ್ನು ನೀಡುತ್ತಿವೆ; ಇನ್ನೆಷ್ಟೋ ನಮ್ಮ ಪೂರ್ವಜರ ದಿವ್ಯ ಮತ್ತು ರಮಣೀಯವಾದ ಭಾವನೆಗಳನ್ನು, ಕಲ್ಪನೆಗಳನ್ನು, ವಿಚಾರಗಳನ್ನು ಹೇಳುತ್ತಿವೆ. ಹೀಗೆ ನಾನಾ ರೀತಿಯಲ್ಲಿ ಬೆಲೆ ಬಾಳುವ ಸಾಹಿತ್ಯವು ಶಾಸನಗಳಲ್ಲಿ ಸಮೃದ್ಧವಾಗಿ ದೊರೆಯುತ್ತದೆ. ಅಲ್ಲೊಂದು, ಇಲ್ಲೆರಡು ಹೀಗೆ ಎಲ್ಲೆಲ್ಲಿಯೊ ಹಲವು ಕಡೆಗಳಲ್ಲಿ ಪ್ರಕಟವಾಗಿದ್ದ ಆ ಶಾಸನಸಾಹಿತ್ಯ ವನ್ನು ವಿವಿಧ ದೃಷ್ಟಿಕೋನಗಳಿಂದ ಪರಿಶೀಲಿಸಿ, ಒಳ್ಳೆಯ ಆಣಿಮುತ್ತುಗಳಂತಹ ಗದ್ಯ-ಪದ್ಯ ಭಾಗಗಳನ್ನು ಆಯ್ದು ಸಾಹಿತ್ಯಾಭಿರುಚಿಯುಳ್ಳ ರಸಿಕರ, ಪೂರ್ವಜರ ಪರಿಚಯ ಮಾಡಿಕೊಳ್ಳಬೇಕೆಂಬ ಕುತೂಹಲಿಗಳ, ಕನ್ನಡ ಸಾಹಿತ್ಯ ಸಂಸ್ಕೃತಿಗಳ ಅಭ್ಯಾಸೇಚ್ಛುಗಳ ಕೈಗೆ ಕೊಡುವುದು ಅಗತ್ಯದ ಕೆಲಸವಾಗಿತ್ತು. ಆ ದಿಸೆಯಲ್ಲಿ ಸಾಧ್ಯವಿದ್ದಷ್ಟು ಸಮಗ್ರವಾಗಿ, ಶ್ರಮಪೂರ್ವಕ ಸಂಗ್ರಹಿಸಿ ಈ ಶಾಸನ ಸಾಹಿತ್ಯ ಸಂಚಯವನ್ನು ರೂಪಿಸಲಾಗಿದೆ.

ಪ್ರಾಕ್ತನ ವಿಮರ್ಶವಿಚಕ್ಷಣರಾಗಿದ್ದ ದಿವಂಗತ ಆರ್. ನರಸಿಂಹಾಚಾರ್ಯರು ಪ್ರಥಮತಃ ಈ ದೃಷ್ಟಿಯನ್ನಿಟ್ಟುಕೊಂಡು 'ಕರ್ಣಾಟಕ ಶಾಸನಪದ್ಯಮಂಜರಿ' ಯನ್ನು ಸಂಕಲಿಸಿಕೊಟ್ಟು ಶಾಸನ ಸಾಹಿತ್ಯದ ಸವಿಯೂಟವನ್ನು ಕನ್ನಡ ಜನಕ್ಕೆ ಮಾಡಿ ಸಿದ್ದರು. ಅವರ ಆ ಸಂಸ್ಮರಣೀಯ ಕಾರ್ಯವೇ ನಮಗೊಂದು ಮಾದರಿಯಾಗಿದ್ದರೂ ಪ್ರಾದೇಶಿಕ ವೈಶಾಲ್ಯ, ವಿಷಯ ವೈವಿಧ್ಯ ಇತ್ಯಾದಿ ದೃಷ್ಟಿಗಳಿಂದ ಈ ಸಂಚಯವು ಕೆಲಮಟ್ಟಿಗಾದರೂ ಪರಿಪೂರ್ಣವೂ ವಿಶಿಷ್ಟವೂ ಆಗುವಂತೆ ಹವಣಿಸಲಾಗಿದೆ. 'ಕರ್ಣಾಟಕ ಶಾಸನ ಪದ್ಯ ಮಂಜರಿ' ಹೆಚ್ಚಾಗಿ ಹಳೆಯ ಮೈಸೂರು ರಾಜ್ಯದಲ್ಲಿಯ ಶಾಸನಗಳಿಂದಾಯ್ದ ಪದ್ಯಗಳನ್ನೊಳಗೊಂಡಿದೆ. ಈ 'ಸಂಚಯ' ದಲ್ಲಿ ಹೆಚ್ಚಾಗಿ ಹಳೆಯ ಮೈಸೂರು ರಾಜ್ಯೇತರ ಕನ್ನಡ ಪ್ರದೇಶಗಳಲ್ಲಿಯ ಶಾಸನಗಳ ಸಾಹಿತ್ಯವನ್ನು ಸಂಗ್ರಹಿಸಿದೆ; ಅಲ್ಲದೆ ಹುರುಳುಳ್ಳ ಒಳ್ಳೆಯ ಶಾಸನ ಗದ್ಯಭಾಗಗಳನ್ನೂ ಆಯ್ದು

ಕೊಟ್ಟಿದೆ. ಸಾಮಾನ್ಯ ವಾಚಕರಿಗೂ ಅಭ್ಯಾಸಿಗಳಿಗೂ ಅನುಕೂಲವಾಗಲೆಂಬ ಉದ್ದೇಶದಿಂದ, ಅಲ್ಲಲ್ಲಿ ಅಗತ್ಯವೆಂದು ತೋರಿದೆಡೆಗಳಲ್ಲಿ ಆಯ್ದ ಗದ್ಯಪದ್ಯಗಳಲ್ಲಿಯ ತಿರುಳಿನ ಕಡೆಗೆ, ಸ್ವಾರಸ್ಯದ ಕಡೆಗೆ, ಭಾವನೆ ಕಲ್ಪನೆ ವಿಚಾರಗಳ ಕಡೆಗೆ ಓದುಗರ ದೃಷ್ಟಿಯನ್ನು ಸೆಳೆಯುವುದಕ್ಕೆಂದು ಆ ಆ ಶಾಸನ ಭಾಗಗಳಿಗೆ ಟಿಪ್ಪಣಿ ಬರೆದಿದೆ. ಶಾಸನ ಮೂಲಗಳನ್ನು ಕೊಡುವಲ್ಲಿ ನಾವು ಅನುಸರಿಸಿದ ಕ್ರಮದ ಬಗೆಗೂ ಇಲ್ಲಿ ಒಂದು ಮಾತು ಹೇಳುವುದು ಅಗತ್ಯವೆಂದೆನಿಸುವುದು. ಶಾಸನಗಳ ಮೂಲ ಲೇಖನದಲ್ಲಿ ಅಥವಾ ಕಂಡರಣೆಯಲ್ಲಿ ಆದ ಛಂದೋದೋಷಗಳಿಂದ ಪದ್ಯಗಳನ್ನು ಓದುವುದಕ್ಕೆ ಅಡೆತಡೆಯಾಗಿ ರಸಭಂಗವಾಗಬಾರದೆಂದು ತಿದ್ದಿ ಸರಿಪಡಿಸಿಕೊಟ್ಟು, ಅದರ ಮೂಲದ ರೂಪಗಳನ್ನು ಅಡಿ ಟಿಪ್ಪಣಿಯಲ್ಲಿ ಕೊಟ್ಟಿದೆ. ಆದರೆ ಮೂಲದಲ್ಲಿದ್ದ ಒಳು ಎಂಬುದನ್ನು ಒಳ್ ಎಂದು ತಿದ್ದಿ ಛಂದಸ್ಸಿಗೆ ಸರಿಪಡಿಸಿಕೊಂಡಲ್ಲಿ ಅಡಿ ಟಿಪ್ಪಣಿಯಲ್ಲಿ ಮೂಲವನ್ನು ಕೊಡುವುದು ಸಾಧ್ಯವಾಗಲಿಲ್ಲ. ಏಕೆಂದರೆ ವ್ಯಂಜನಾಂತವನ್ನು ಉಕಾರಾಂತವಾಗಿ ಬರೆದುದು ಬಹುಶಃ ಎಲ್ಲ ಶಾಸನಗಳಲ್ಲಿ ಸಾಮಾನ್ಯವಾಗಿರುವುದರಿಂದ ಅಂತಹ ದೋಷಗಳು ಬಹಳವಾಗಿವೆ.

ಕರ್ನಾಟಕದಲ್ಲಿ ಕನ್ನಡ, ಸಂಸ್ಕೃತ, ಪ್ರಾಕೃತ, ತೆಲಗು, ತಮಿಳು ಭಾಷೆಗಳಲ್ಲಿ ಬರೆದ ಶಾಸನಗಳು ದೊರೆತಿವೆ. ಅವುಗಳಲ್ಲಿ ಕನ್ನಡ ಶಾಸನಗಳನ್ನು ಮಾತ್ರ ಇಲ್ಲಿ ಆಯ್ದುಕೊಂಡಿದೆ. ಈವರೆಗೆ ದೊರೆತ ಕನ್ನಡ ಶಾಸನಗಳಲ್ಲಿ ತೀರ ಹಳೆಯದಾದ ಹಲ್ಮಿಡಿಯ ಶಾಸನ (ಕ್ರಿ. ವ. ಸು. ೪೫೦)ದಿಂದ ಪ್ರಾರಂಭಮಾಡಿ ೧೫ ನೆಯ ಶತಮಾನದ ಕೊನೆಯ ಭಾಗದ ಹೊಗೇಕೆರೆ ಶಾಸನ (ಕ್ರಿ ವ. ೧೪೮೭)ದ ವರೆಗೆ ೧೧೪ ಕನ್ನಡ ಶಾಸನಗಳಿಂದ ಆಯ್ದ ಗದ್ಯಪದ್ಯ ಭಾಗಗಳು ಈ ಗ್ರಂಥದಲ್ಲಿ ಸಂಚಯಿಸಲ್ಪಟ್ಟಿವೆ. ಹಲ್ಮಿಡಿ ಶಾಸನವು (ನಂ. ೧) ಕನ್ನಡ ಶಾಸನಗಳಲ್ಲಿಯೇ ಎಲ್ಲಕ್ಕೂ ಮೊದಲನೆಯದೆಂಬುದರಿಂದ ಮಾತ್ರವಲ್ಲ, ಒಳ್ಳೆಯ ಗದ್ಯದ ಮಾದರಿಯೆಂದೂ ಕನ್ನಡ ನುಡಿಗಟ್ಟಿನ ಮೊದಮೊದಲಿನ ರೂಪಗಳನ್ನು ತೋರಿಸುವುದರಿಂದಲೂ ಅಭ್ಯಾಸಿಗಳಿಗೆ ಮಹತ್ತ್ವದ್ದಾಗಿದೆ. ಮುಂದೆ ೯ ನೆಯ ಶತಮಾನದ ವರೆಗೆ ಹುಟ್ಟಿದ ಶಾಸನಗಳು ವಿರಳವಾಗಿ ದೊರೆತಿರುವುದರಿಂದ ನಾಲ್ಕೈದು ಶಾಸನಗಳನ್ನು ಮಾತ್ರ ಆಯ್ದುಕೊಂಡಿದೆ. ಆದರೂ ಇವು ೫ ರಿಂದ ೯ ನೆಯ ಶತಮಾನದ ವರೆಗಿನ ಕಾಲಾವಧಿಯಲ್ಲಿ ಕನ್ನಡದ ಶೈಲಿ-ಭಾಷೆಗಳಲ್ಲಿ ಆದ ವ್ಯತ್ಯಾಸವನ್ನು ತೋರಿಸುವ ಮೈಲುಗಲ್ಲುಗಳಂತಿವೆ. ಮಾನವೇ ಪ್ರಾಣವಾಗಿದ್ದ ಕಪ್ಪೆಅರಭಟ್ಟನ ವ್ಯಕ್ತಿತ್ವವನ್ನು ಬಾದಾಮಿ ಶಾಸನವು (ಕ್ರಿ. ವ. ಸು. ೭೦೦) ಚಿಕ್ಕ ತ್ರಿಪದಿಗಳಲ್ಲಿ ಬಲು ಸೊಗಸಾಗಿ ಬಣ್ಣಿಸುತ್ತದೆ (ನಂ. ೨). ಇದುವರೆಗೆ ದೊರೆತ ತ್ರಿಪದಿಗಳಲ್ಲಿ ಇವೇ ಮೊದಲಿನವು. ಈ ಶಾಸನದಲ್ಲಿಯೂ ಇದೇ ಸುಮಾರಿನ (ಕ್ರಿ. ವ. ಸು. ೭೩೩) ಮಹಾಕೂಟ ಶಾಸನದಲ್ಲಿಯೂ (ನಂ. ೩) ವರ್ಗಾಕ್ಷರದೊಡನೆ ಬರುವ ಅನುನಾಸಿಕದ ಸ್ಥಳದಲ್ಲಿ ಅನುಸ್ವಾರ [ಂ]ವು ತಲೆಯೆತ್ತಿದುದು ಕಂಡುಬರುತ್ತದೆ (ಜ್ಗೆ : ಂಗೆ, ನ್ದು: ಂದು ಇ.). ಸಿಗ್ಗಾವೀ

ಶಾಸನವು (ನಂ. ೪) ೯ ನೆಯ ಶತಮಾನದ ಮಧ್ಯಕಾಲದ ವ್ಯಾವಹಾರಿಕ ಗದ್ಯದ ದರ್ಶನ ಮಾಡಿಸುತ್ತದೆ. (ಈ ಶಾಸನದಲ್ಲಿ ವ್ಯಾಕರಣಕ್ಕೆ ಸಂಬಂಧಪಟ್ಟ ಇನ್ನೊಂದು ವ್ಯತ್ಯಾಸವು ಎದ್ದು ತೋರುತ್ತದೆ. ಅದೇನೆಂದರೆ, ಹಳಗನ್ನಡದ ದ್ವಿತೀಯಾ ವಿಭಕ್ತಿ ಪ್ರತ್ಯಯದ ಮ್ರುಕಾರಕ್ಕೆ ವ್ರಕಾರಾದೇಶವಾದುದರ ಉಲ್ಲೇಖ ಇಲ್ಲಿದೆ)( ಸ್ಥಾನಮುಮಂ= ಸ್ಥಾನವುವ, ಧರ್ಮ್ಮವುಂ=ಧರ್ಮವಂ). ಬೆಳ್ವಲ-೩೦೦ ನ್ನು ಆಳುತ್ತಿದ್ದ ದೇವಣ ಯ್ಯನು (ಕ್ರಿ. ವ. ೮೭೨) ಚಂದ್ರಗ್ರಹಣ ಕಾಲದಲ್ಲಿ ದೇಶದ ನಾನಾ ತೀರ್ಥಗಳಿಂದ ಸಂಗ್ರಹಿಸಿದ ಜಲದಿಂದ ಸ್ನಾನಮಾಡಿ ಪವಿತ್ರನಾಗಿ ಸಿಸುವಿನಹಳ್ಳಿಯ ತುಪ್ಪದ ಸುಂಕವನ್ನು ಬ್ರಾಹ್ಮಣರಿಗೆ ಬಿಟ್ಟನೆಂಬ ಮಾತು (ನಂ. ೫) ವ್ರತನಿಯಮಗಳನ್ನು ಶಾಸ್ತ್ರೋಕ್ತವಾಗಿ ಆಚರಿಸುವ ಬಗೆಗೆ ಆಗಿನವರಲ್ಲಿದ್ದ ಶ್ರದ್ಧೆಯ ದ್ಯೋತಕವಾಗಿದೆ. ೯ನೆಯ ಶತಮಾನದ ಬೇಗೂರು ಶಾಸನದಲ್ಲಿ (ನಂ. ೬) ಗಂಗವಾಡಿಯನ್ನು ಏಕ-ಚ್ಛತ್ರದಿಂದ ಆಳುತ್ತಿದ್ದ ಎಱೆಯಪ್ಪರಸನು ಇರುಗನಿಗೆ ನಾಗತ್ತರ ಪಟ್ಟಣವನ್ನು ಕಟ್ಟಿ ಬೆಂಪೂರು-೧೨ನ್ನು ಕೊಟ್ಟು ಪುರಸ್ಕರಿದ ಸಂಗತಿ ಶಾಸನಬದ್ಧವಾಗಿದೆ. ಒಟ್ಟಾರೆ, ಆರಂಭದ ಈ ಆರು ಶಾಸನಗಳು ಹೇಳಬೇಕಾದುದನ್ನು ಕಿರಿದರಲ್ಲಿ ಹೇಳುವ ಚಿಕ್ಕ ಶಾಸನಗಳು ಅಂತೆಯೆ ಇವುಗಳ ಶೈಲಿಯಲ್ಲಿ ಒಂದು ರೀತಿಯ ಬಿಗುವು, ಕಟ್ಟು ನಿಟ್ಟು ಮತ್ತು ರಾಜರ ಆಳಿಕೆಯನ್ನು ಉಲ್ಲೇಖಿಸುವಾಗ ಕೂಡ ವಿಶೇಷಣ ಬಿರುದಾವಳಿಗಳ ಸುದೀರ್ಘಮಾಲಿಕೆಯಿಲ್ಲದ ನಿರಾಡಂಬರತೆ ಕಂಡುಬರುತ್ತದೆ. ಇದೊಂದು ಆ ಶತಮಾನಗಳ ಶಾಸನ ಲೇಖನದ ವೈಶಿಷ್ಟ್ಯವೆಂದು ಸಾಮಾನ್ಯವಾಗಿ ಹೇಳಬಹುದು.

(ಮುಂದಿನ ನಂ. ೬ ರಿಂದ ೧೧೪ ರ ವರೆಗಿನ ಶಾಸನಗಳಲ್ಲಿ, ೧೦ ನೆಯ ಶತಮಾನದಿಂದ ೧೫ ನೆಯ ಶತಮಾನದವರೆಗಿನ ಎಲ್ಲ ಶತಮಾನಗಳ ಶಾಸನಗಳ ಲಾಕ್ಷಣಿಕ (rcpresentative) ಅವತರಣಿಕೆಗಳೂ ಬರುವಂತೆ ಲಕ್ಷ್ಯ ಪೂರಯಿಸಿದ್ದರೂ ಸಾಹಿತ್ಯಿಕ ಮೌಲ್ಯವುಳ್ಳ ಶಾಸನಗಳು ವಿಪುಲವಾಗಿ ಹುಟ್ಟಿದ ೧೧-೧೨ನೆಯ ಶತಮಾನಗಳ ಶಾಸನಗಳ ಅವತರಣಿಕೆಗಳು ಸ್ವಾಭಾವಿಕವಾಗಿಯೆ ಹೆಚ್ಚಾಗಿ ಬಂದಿವೆ.) ಮುಖ್ಯವಾಗಿ, ವಿಷಯವೈವಿಧ್ಯವು ಈ ಸಂಕಲನದ ವೈಶಿಷ್ಟ್ಯವಾಗಿರಬೇಕೆಂಬ ನಮ್ಮ ಅಭಿಲಾಷೆ ತಕ್ಕಮಟ್ಟಿಗೆ ಈಡೇರಿದೆ ಎಂಬ ಸಮಾಧಾನ ನಮಗಿದೆ. ದೇವತಾಸ್ತುತಿ, ಭೂವಿವರಣೆ, ನಿಸರ್ಗಸೌಂದರ್ಯ, ಗ್ರಾಮ-ದುರ್ಗಗಳು, ವಾಸ್ತುವೈಭವ, ಪ್ರತಾಪ, ಯುದ್ಧ, ಉದಾತ್ತ ಉದಾರ ವ್ಯಕ್ತಿಗಳ ವ್ಯಕ್ತಿತ್ವ ಇತ್ಯಾದಿಗಳ ವರ್ಣನೆಗಳನ್ನೂ ಚಾರಿತ್ರಿಕ, ಸಾಂಸ್ಕೃತಿಕ, ಸಾಮಾಜಿಕ ವಿಷಯಗಳ ಮೇಲೆ ಕಿರಣಗಳನ್ನು ಕೆಡಹುವ ಸಂಗತಿ ವಿಶೇಷಗಳನ್ನೂ ಒಳಗೊಂಡು ಈ ಸಂಚಯವು ಓದುಗರಿಗೆ ರೋಚಕವೂ ಬೋಧಕವೂ ಆಗುವಂತೆ ಪ್ರಯತ್ನಪಟ್ಟಿದ್ದೇವೆ.

ನಮ್ಮ ನಾಡಿನ ಶಾಸನಗಳು ಬಹುಮಟ್ಟಿಗೆ ದೇವಾಲಯಗಳ ನಿರ್ಮಾಣ ಮತ್ತು ಅವುಗಳಿಗೆ ಕೊಟ್ಟ ದತ್ತಿ-ದಾನಗಳನ್ನು ಉಲ್ಲೇಖಿಸುವುವಾಗಿವೆ. ಅವನ್ನು

ಉಲ್ಲೇಖಿಸುವ ನೆವದಿಂದ, ಪೂರ್ವಭಾವಿಯಾದ ಅನೇಕ ವಿಷಯುಗಳನ್ನು ಈ ಶಾಸನ ಕವಿಗಳು ಬಣ್ಣಿಸಿದ್ದಾರೆ. ಊರು ಊರುಗಳಲ್ಲಿಯೂ ಕಂಗೊಳಿಸುತ್ತಿರುವ ದೇವಾಲಯುಗಳ ನಿರ್ಮಿತಿಗೆ ಹಿನ್ನೆಲೆಯಾಗಿ ಎಂತಹ ದಿವ್ಯೋದಾತ್ತ ಸಂಸ್ಕೃತಿಯು ಇತಿಹಾಸವಿದೆ ಎಂಬುದನ್ನು ಅಲ್ಲಲ್ಲಿಯ ಬರೆಹದ ಕಲ್ಲುಗಳು ಹೇಳುತ್ತಿವೆ. ವಿಜಯನಗರದ ಪ್ರೌಢ ಪ್ರತಾಪ ದೇವರಾಯನ ಮಂತ್ರಿಯಾದ, ಕನ್ನಡಿಗಕುಲಕ್ಕೆ ರನ್ನಗನ್ನಡಿಯಂತಿದ್ದ ಲಕ್ಷ್ಮೀಧರಾಮಾತ್ಯನನ್ನು ಬಣ್ಣಿಸುತ್ತ ಹಂಪೆಯ ಕ್ರಿ. ವ. ೧೪೧೧ ರ ಶಾಸನವು (ನಂ. ೧೦೭) ನಮ್ಮ ಉದಾತ್ತ ಸಂಸ್ಕೃತಿಯ ಕೆಲವು ಬೀಜಮಾತುಗಳನ್ನು ಈ ಕೆಳಗಿನ ಪದ್ಯದಲ್ಲಿ ಸೊಗಸಾಗಿ ಹೇಳುತ್ತದೆ :

ಕೆಱೆಯಂ ಕಟ್ಟಿಸು ಬಾವಿಯಂ ಸವಸು ದೇವಾಗಾರಮಂ ಮಾಡಿಸ–
ಜ್ಜೆಱೆಯೊಳ್ಸಿಲ್ಕಿದನಾಥರಂ ಬಿಡಿಸು ಮಿತ್ರರ್ಗ್ಗಿಂಬುಕೆಯ್ ನಂಬಿದ–
ರ್ಗೆಱೆವೆಟ್ಟಾಗಿರು ಶಿಷ್ಟರಂ ಪೊರೆಯೆನುತ್ತಿಂತೆಲ್ಲವಂ ಪಿಂದೆ ತಾ–
ಯೆಱೆದಳ್ಪಾಲೆಱೆವಂದು ತೊಟ್ಟು ಕಿವಿಯೊಳ್ ಲಕ್ಷ್ಮೀಧರಾಮಾತ್ಯನ ॥

ಮಾನವನಾಗಿ ಹುಟ್ಟಿಬಂದ ಬಳಿಕ ಅವನ ಕರ್ತವ್ಯಗಳೇನು ಎಂಬುದನ್ನು ಇಲ್ಲಿ ಹೇಳಿದೆ. ಸರ್ವವಿಧದಿಂದಲೂ ಲೋಕೋಪಕಾರವನ್ನೆಸಗುವುದೇ ಜನ್ಮದ ಸಾಫಲ್ಯ-ಸಾರ್ಥಕ್ಯವೆಂಬ ಸಂಸ್ಕಾರದಲ್ಲಿಯೇ ಈ ಲಕ್ಷ್ಮೀಧರನಂತೆ ಅನೇಕರು ಬೆಳೆದಿದ್ದಾರೆಂದು ಶಾಸನ ಸಾಹಿತ್ಯದಿಂದ ನಿರ್ವಿವಾದವಾಗಿ ತಿಳಿದುಬರುತ್ತದೆ. ಮೊದಲಿನಿಂದಲೂ ನಮ್ಮ ನಾಡಿನವರು ಈ ಬಗೆಯ ಸಂಸ್ಕಾರವಂತರಾಗಿದ್ದುದರಿಂದಲೇ ಕ್ರಿ. ವ. ೧೧೦೭ ರೊಳಗೆ ಲಕ್ಷ್ಮೇಶ್ವರವು

ತಿವರೆಲ್ಲಂ ದೇವತಾಮಂದಿರನಿವಹಮೆ ನಿಮ್ನಸ್ಥಳೀರಾಜಿಯೆಲ್ಲಂ
ಸುವಿರಾಜದ್ದೀರ್ಘಿಕಾಸಂಕುಳಭರಿತಪಯಃಪೂರನೀರೇಜಕಾಸಾ–
ರವೆ ಮತ್ತಂ ತತ್ಸಮಾಳಂಕೃತವಸುದೆಯದೆಲ್ಲಂ ಲಸಚ್ಛಂದನೋದ್ಯಾ–
ನವೆನಲ್ ರಮ್ಯಂ ದಲೆಂದುಂ ಪುರಿಕರನಗರೀಲೀಲೆ ಲೋಕಾವಲೋಕಂ ॥

ಎಂಬುದಾಗಿ ವರ್ಣಿಸಿಕೊಂಡಿದೆ (ಶಾ. ೭೫ ಅ). ಈ ವರ್ಣನೆ ಇಡೀ ನಾಡಿಗೇ ಅನ್ವಯಿಸುತ್ತದೆಂದು ಹೇಳುವುದಕ್ಕೆ ಈಗಲೂ ಇರುವ ಅಸಂಖ್ಯವಾದ ಹಳೆಯ ಗುಡಿಗಳು, ಅವುಗಳ ಅವಶೇಷಗಳು, ಕೆರೆ, ಆರಾಮ, ಅರವಟ್ಟಿಗೆ ಮೊದಲಾದವುಗಳ ಶಿಲಾಲೇಖಗಳಲ್ಲಿಯ ಉಲ್ಲೇಖಗಳು ಪ್ರಮಾಣಭೂತವಾಗಿವೆ.

ಮಾನವನು ತನ್ನ ಇಡೀ ಜನ್ಮದಲ್ಲಿ ಒಂದಾದರೂ ಗುಡಿಯನ್ನು ಕಟ್ಟಿಸುವುದು, ಅವುಗಳ ಪೂಜಾದಿ ವ್ಯವಸ್ಥೆಗೆ ದತ್ತಿ-ದಾನಗಳನ್ನು ಕೊಡುವುದು ಮಾಡಲೇಬೇಕಾದ ಧರ್ಮವೆಂದು ಆಗಿನವರ ಭಾವನೆಯಾಗಿತ್ತು. ಸಾಧ್ಯವಿದ್ದವರು, ದೊಡ್ಡ ಅಧಿಕಾರಿಗಳು ಹಲವಾರು ಕಡೆಗಳಲ್ಲಿ, ಗಂಗಾ-ಯಮುನಾ ತೀರಗಳಲ್ಲಿ ಕೂಡ ಗುಡಿಗಳನ್ನು ನಿರ್ಮಿಸಿ ಪುಣ್ಯಭಾಜನರಾಗಿದ್ದಾರೆ. ಧರ್ಮವಿನೋದಿ ಎಂದೆನಿಸಿಕೊಂಡ

ರವಿಗನೆಂಬ ಸೇನಾಪತಿ (ಕ್ರಿ. ಶ. ೧೧೯೦) ನರ್ಮದೆ, ದೇವಸಿಂಧು, ಯಮುನೆ ಇವು ಮೊದಲಾದ ಅಮಲತೀರ್ಥಗಳ ತಟದಲ್ಲಿ ಹಲವು ದೇಗುಲಗಳನ್ನು ಕಟ್ಟಿಸಿದು ದನ್ನು ಹೂವಿನ ಹಡಗಲಿಯ ಶಾಸನವು (ನಂ. ೪೦) ಉಲ್ಲೇಖಿಸುತ್ತದೆ. ಸಮಸ್ತ ಧಾತ್ರೀಹಿತ ಕಾರ್ಯಧುರ್ಯನೆಂದು ಹೊಗಳಿಕೆವೆತ್ತ ಮಹಾದೇವ ದಂಡಾಧಿಪತಿ (ಕ್ರಿ. ಶ. ೧೧೧೨)ಕುಕನೂರ ಹತ್ತಿರದ ಇಟ್ಟಿಗೆಯಲ್ಲಿ ದೇವಾಲಯ ಚಕ್ರವರ್ತಿಎಂದೆನಿಸಿದ ಉತ್ತುಂಗವಾದ ಮಹಾದೇವ ದೇವಾಲಯವೊಂದಲ್ಲದೆ ಮೂರ್ತಿನಾರಾಯಣ, ಚಂದಲೇಶ್ವರ, ಸಾಹಸಭೈರವ ಎಂಬ ಗುಡಿಗಳನ್ನು, ಸರಸ್ವತಿಗೆ ಇರಲಿಕ್ಕೆ ಮಠವನ್ನು ಕಟ್ಟಿಸಿದ್ದಾನೆ. ಇಷ್ಟೇ ಅಲ್ಲ, ಕನ್ನಡನಾಡಿನ ೧೬ ಊರುಗಳಲ್ಲಿಯೂ ಅಲ್ಲದೆ ವಾರಣಾಸಿಯಲ್ಲಿಯೂ ಧರ್ಮ(ದೇವಾಲಯ ?)ವನ್ನು ನಿಲ್ಲಿಸಿದ್ದಾನೆ (ನಂ. ೫೫). ಈ ಎಲ್ಲ ಊರುಗಳ ಹೆಸರುಗಳನ್ನು ಎರಡು ಪದ್ಯಗಳಲ್ಲಿ ಹೇಳಿದೆ (ಪ. ೨೬೪–೬೫). ಹೊಯ್ಸಳ ನರಸಿಂಹನ ಮಂತ್ರಿಯಾದ ಹುಳ್ಳನು (ಕ್ರಿ. ಶ. ೧೧೫೯) ಕನ್ನಡ ನಾಡಿನಲ್ಲಿ ಜಿನಶಾಸನೋದ್ಧರಣರಾದ ಮೂವರಲ್ಲಿ ಒಬ್ಬನಾಗಿದ್ದಾನೆ. ಇನ್ನಿಬ್ಬರು ರಾಚಮಲ್ಲನ ಮಂತ್ರಿ ಚಾವುಂಡರಾಯ, ವಿಷ್ಣುವರ್ಧನನ ಮಂತ್ರಿ ಗಂಗಣ. ಹುಳ್ಳನು ಶ್ರವಣಬೆಳುಗೊಳ ತೀರ್ಥದಲ್ಲಿ ೨೪ ತೀರ್ಥಂಕರರ ಮಂದಿರಗಳನ್ನು ಕಟ್ಟಿಸಿ, ಬಂಕಾಪುರದಲ್ಲಿ ಎರಡು ಬಸದಿಗಳ ಜೀರ್ಣೋದ್ಧಾರ ಮಾಡಿ, ಕೊಪ್ಪಳದ ೨೪ ಜಿನ-ಮುನಿ ಸಂಘಕ್ಕೆ ಅಕ್ಷಯ ಸುವರ್ಣದಾನವನ್ನಿತ್ತು ವೃತ್ತಿಗಳನ್ನು ಬಿಡಿಸಿ ಪುಣ್ಯಭಾಗಿಯಾಗಿದ್ದಾನೆ (ನಂ. ೨೬).

ಹೀಗೆ ದೇವಾಲಯಗಳ ರೂಪದಲ್ಲಿ ಧರ್ಮವನ್ನು ನಿಲ್ಲಿಸುವ ಈ ಪರಂಪರೆಗೆ ಪೂರ್ವಭಾವಿಯಾಗಿ ಇತಿಹಾಸ ಕಾಲದ ಅರಸರೂ ಅಧಿಕಾರಿಗಳೂ ಧರ್ಮಪ್ರಸಂಗವನ್ನು ನಡೆಸುತ್ತಿದ್ದ ಉಲ್ಲೇಖಗಳೂ ಹಲವು ಶಾಸನಗಳಲ್ಲಿ ಬಂದಿವೆ. ಇಂತಹ ಕೆಲವು ಧರ್ಮಪ್ರಸಂಗಗಳ ವಿವರಗಳನ್ನು ಒದಗಿಸುವ ಶಾಸನಭಾಗಗಳೂ ಈ ಆಯಿಕೆಯಲ್ಲಿವೆ. ಎರಂಬರಗೆಯಲ್ಲಿ ಆಳುತ್ತಿದ್ದ (ಕ್ರಿ. ಶ. ೧೧೭೯) ಮಂಡಳೇಶ್ವರನಾದ ಸಿಂದ ವಿಕ್ರಮಾದಿತ್ಯನು ಧರ್ಮಪ್ರಸಂಗದಲ್ಲಿ ಧರ್ಮದ ಬಗೆಗಿದ್ದ ಸುಭಾಷಿತಗಳನ್ನು ಕೇಳಿ, ತನ್ನ ತಂದೆಯ ಪರೋಕ್ಷವಿನಯ ಪ್ರಾಯಶ್ಚಿತ್ತನಿಮಿತ್ತವಾಗಿ ಹೊಲ, ಮನೆ, ಹಸು, ಹೊನ್ನುಗಳನ್ನು ದಾನಮಾಡಿದ್ದಾನೆ (ರೋಣ ಶಾ. ೮೩). ಸಿರಸಂಗಿಯಲ್ಲಿ ಹಲವು ಗುಡಿಗಳನ್ನು ಕಟ್ಟಿಸಿದ ಪ್ರಭು ಹಬ್ಬೆಯ ನಾಯಕನ (ಕ್ರಿ. ಶ. ೧೧೮೬) ಧರ್ಮಪ್ರಸಂಗವಂತೂ ಉದ್ಬೋಧಕವಾಗಿದೆ (ನಂ.೮೮).ಇವನಿಗೆ 'ತಾನು ಅಸಹಾಯ ಶೂರನಾಗಿದ್ದುದರಿಂದ ಪುರಾತನ ಅಸಹಾಯಶೂರರ ಕಥಾಪ್ರಪಂಚಗಳನ್ನೂ ಅವರನ್ನು ಕುರಿತು ಸುಭಾಷಿತಗಳನ್ನೂ' ಕೇಳುವುದರಲ್ಲಿ ಒಳ್ಳೇ ಅಭಿರುಚಿಯಿತ್ತು. ಅವನ್ನಲ್ಲದೆ ದೇವತಾಪ್ರತಿಷ್ಠಾಪನೆಯಿಂದ ದೊರಕುವ ಪುಣ್ಯ-ಕೀರ್ತಿಗಳ ಬಗೆಗೂ ಬಲ್ಲವರು ಅವನಿಗೆ ಕೇಳಿಸಿದ್ದಾರೆ. 'ಎಲ್ಲ ಸಂಪತ್ತುಗಳಲ್ಲಿ ಪುಣ್ಯಸಂಪತ್ತೇ ಮುಖ್ಯ; ಪುಣ್ಯಕ್ಕೆಲ್ಲ ಈಶ್ವರ ಪ್ರತಿಷ್ಠೆಯೆ ಮುಖ್ಯ; ಈಶ್ವರ ಪ್ರತಿಷ್ಠೆ ಮಾಡಿದವನು ಈಶ್ವರನೇ ಆಗುತ್ತಾನೆ;

ಆ ದೇವರಿಗೆ ಆ ಪ್ರತಿಷ್ಠಾಪಕನ ಹೆಸರೇ ಬರುವುದು.' ಎಂದು ಮುಂತಾಗಿ ಬಲ್ಲವರು ಧರ್ಮಪ್ರಸಂಗದಲ್ಲಿ ಅವನಿಗೆ ಹೇಳಿದ್ದಾರೆ. ಹೀಗೆಯೇ, ಸಾತೇನಹಳ್ಳಿಯು ಒಡತಿ ಸೆಟ್ಟಿಕವ್ವೆ (ಕ್ರಿ. ವ. ೧೨೦೪) ತನ್ನ ಮಗನ ಸ್ಮರಣಾರ್ಥವಾಗಿ ಹರಿಹರೇಶ್ವರನ ಪ್ರತಿಷ್ಠೆಮಾಡುವ ಪೂರ್ವದಲ್ಲಿ ಧರ್ಮಪ್ರಸಂಗವನ್ನು ನಡೆಸಿದಂತೆ ತಿಳಿಯುತ್ತಿದೆ (ನಂ. ೯೫). ಇವೆಲ್ಲವುಗಳಿಂದ ಅಧಿಕಾರಿಗಳು ಧರ್ಮಶ್ರವಣದಲ್ಲಿ ಶ್ರದ್ಧೆಯುಳ್ಳವರೂ ಅದರಂತೆ ನಡೆಯುವ ಒಲವುಳ್ಳವರೂ ಆಗಿದ್ದರೆಂದು ತಿಳಿದುಬರುವುದು. ಇವರೆಲ್ಲರು ಒಂದು ಗುಡಿ ಕಟ್ಟಿಸುವುದಿರಲಿ, ಅರವಟ್ಟಿಗೆ ಇಡಿಸುವುದಿರಲಿ, ಉಪವನ ರಚಿಸುವು ದಿರಲಿ ಅತ್ಯಂತ ಉತ್ಸಾಹದಿಂದ, ಅತ್ಯಂತ ನಿಷ್ಠೆಯಿಂದ ಆ ಕರ್ತವ್ಯವನ್ನು ನೆರವೇರಿ ಸಿದ್ದಾರೆ. ವಿವರ ವಿವರವಾದ ಏರ್ಪಾಡುಗಳನ್ನು ಮಾಡಿದ್ದಾರೆ. ಆ ಏರ್ಪಾಡನ್ನು ಆಚಂದ್ರಾರ್ಕವಾಗಿ ನಡೆಸಿಕೊಂಡು ಹೋಗುವಂತೆ ಮುಂದಿನವರನ್ನು ಪ್ರಾರ್ಥಿಸಿ ದ್ದಾರೆ.

ಇಲ್ಲಿಯ ಶಾಸನ ಭಾಗಗಳಿಂದ ಈ ನಾಡಿನಲ್ಲಿ ಮುಖ್ಯವಾಗಿ ಶೈವಧರ್ಮ, ಜೈನಧರ್ಮಗಳು ಒಂದೊಂದು ಕಾಲದಲ್ಲಿ, ಒಂದೊಂದು ಕಡೆಯಲ್ಲಿ ಊರ್ಜಿತವಾ ಗಿದ್ದವೆಂದು ತಿಳಿಯುತ್ತದೆ. ವೈಷ್ಣವ ಸಮಯವು ಮೂರನೆಯದಾಗಿ ಕಂಡುಬರು ತ್ತದೆ. ಹೀಗೆ ಕರ್ನಾಟಕದಲ್ಲಿ ಒಂದೊಂದು ಕಾಲದಲ್ಲಿ ಒಂದೊಂದು ಧರ್ಮ-ಸಂಪ್ರ ದಾಯಗಳು ಹೆಚ್ಚಳವನ್ನು ಹೊಂದುತ್ತ ಕೊನೆಯಲ್ಲಿ ಎಲ್ಲವೂ ಇಲ್ಲಿ ಆಶ್ರಯ ಪಡೆದವು.

ಸಕಲ ಧರ್ಮಗಳೂ ಒಂದೇ ಗುರಿಯತ್ತ ಜನರನ್ನು ಕರೆದೊಯ್ಯುವ ಬೇರೆ ಬೇರೆ ದಾರಿಗಳು ಎಂಬ ಸಮಭಾವನೆಯಿಂದ ಕಾಣುವ ಮಹಾನುಭಾವರು ಯಾವಾ ಗಲೂ ಇದ್ದೇ ಇದ್ದಾರೆ ಎಂಬುದಕ್ಕೆ ಕ್ರಿ. ವ. ೧೧೫೧ ರಲ್ಲಿ ಮುಙುಗರೆ ಎಂಬ ನಾಡ ನ್ನಾಳುತ್ತಿದ್ದ ಮಹಾಸಾಮಂತ ಗೂಳಿ ಬಾಚಿದೇವನು ನಿದರ್ಶನವಾಗಿದ್ದಾನೆ (ಕೈದಾಳ ಶಾ. ೭೩). ಅವನು ಜೈನ, ಬೌದ್ಧ, ಶೈವ, ವೈಷ್ಣವ ಈ ಎಲ್ಲ ಧರ್ಮಸಂಪ್ರದಾಯ ದವರಿಗೂ ಗುಡಿಗಳನ್ನು ಕಟ್ಟಿಸಿಕೊಟ್ಟು, ದಾನಗಳನ್ನು ಇತ್ತು ಪ್ರೋತ್ಸಾಹಿಸಿ **ಚತುಸ್ಸಮಯ ಧರ್ಮೋದ್ಧಾರಧೌರೇಯ**ನೆಂದು ಹೊಗಳಿಸಿಕೊಂಡಿದ್ದಾನೆ. ಈ ಮಹನೀಯನ ಶ್ರೇಯಸ್ಸಿಗಾಗಿ ಕವಿ – ತನ್ನ ಹೆಸರು ಹೇಳಿಕೊಂಡಿಲ್ಲ -- ಧರ್ಮಾ ತೀತನಾಗಿ ಚತುಸ್ಸಮಯಗಳ ದೇವರನ್ನೂ ಪ್ರಾರ್ಥಿಸಿದ್ದಾನೆ. ಬಾಚಿಯಿಂದ 'ಬುದ್ಧ ಕೋಟಿಕೆ ಸಿದ್ಧರಸಪ್ರವಾಹವು ಒಗೆದುದು' (ಪ. ೩೨೬) ಎಂದಿರುವ ಈ ಶಾಸನ ದಲ್ಲಿಯ ಉಲ್ಲೇಖದಿಂದ ಕರ್ನಾಟಕದಲ್ಲಿ ಆ ಶತಮಾನದಲ್ಲಿ ಬೌದ್ಧ ಧರ್ಮವು ಗಣ ನೀಯವಾದ ಮಟ್ಟಿಗೆ ಪ್ರಚುರವಾಗಿತ್ತೆಂದು ತಿಳಿಯುವುದು.

ಕೆಲವೊಮ್ಮೆ ಭಿನ್ನ-ಭಿನ್ನ ಮತೀಯರ ಅನುಯಾಯಿಗಳಲ್ಲಿ ಘರ್ಷಣೆ ಗಳೇನೋ ಆಗುತ್ತಿದ್ದವು. ಆದರೆ, ಆಗಾಗಿನ ದೊರೆಗಳು ನಿಷ್ಪಕ್ಷಪಾತವಾಗಿ ಆ ಪ್ರಕರಣಗಳನ್ನು ವಿಚಾರಿಸಿ, ಅವರವರಲ್ಲಿ ಸೌಹಾರ್ದದ ಒಡಂಬಡಿಕೆ ಮಾಡಿಸಿ, ಪರ- ಸ್ಪರರಿಗೆ ರಕ್ಷಣೆಯೀಯುತ್ತಿದ್ದರೆಂಬುದಕ್ಕೆ ಕೆಲವೊಂದು ಉದಾಹರಣಗಳೂ ಸಿಕ್ಕುತ್ತಿವೆ.

ಈ ದೃಷ್ಟಿಯಿಂದ ಶ್ರವಣಬೆಳುಗೊಳದ ಕ್ರಿ. ವ. ೧೩೬೮ ರ ವೀರಬುಕ್ಕರಾಯನ ಶಾಸನವು ಅತ್ಯಂತ ಉಲ್ಲೇಖನೀಯವಾಗಿದೆ (ನಂ. ೧೦೪). ಜೈನರಿಗೂ ಭಕ್ತ (ಶ್ರೀ ವೈಷ್ಣವ) ರಿಗೂ ಉಂಟಾದ ಸಂವ್ಯಾಜ್ಯವನ್ನು ಆ ಮಹಾರಾಯನು ಬಗೆಹರಿಸಿ, 'ವೈಷ್ಣವದರ್ಶನಕ್ಕೆಯೂ ಜೈನದರ್ಶನಕ್ಕೆಯೂ **ಭೇದವಿಲ್ಲವೆ**'ಂದು ತಿಳಿವಳಿಕೆ ಯುಂಟುಮಾಡಿದನೆಂದು ಅದರಲ್ಲಿ ಹೇಳಿದೆ. 'ಉಭಯ ಸಮಯವೂ ಕೂಡಿ ಬುಸುವಿನೆಟ್ಟಿಗೆ ಸಂಘನಾಯಕ ಪಟ್ಟವನ್ನು ಕಟ್ಟಿದರು' ಎಂಬ ಬಹು ಮುಖ್ಯವಾದ ಮಾತೂ ಅದರಲ್ಲಿದೆ. ಹೀಗೆ ಧರ್ಮಾತೀತಭಾವನೆಯಿಂದ ಎಲ್ಲ ಧರ್ಮಗಳನ್ನು ಸಮದೃಷ್ಟಿಯಿಂದ ನೋಡಿ ಸಂರಕ್ಷಿಸಿದ ಶಾಸಕರೂ ಜನರೂ ಈ ನಾಡಿನಲ್ಲಿ ಅನೇಕರು ಆಗಿಹೋಗಿದ್ದುದರಿಂದಲೇ ಅವೆಲ್ಲವೂ ನೆಮ್ಮದಿಯಿಂದ ಬಾಳಿ, '**ಕನ್ನಡನಾಡು ಧರ್ಮಭೂಮಿ**' ಎಂಬ ಮಾತು ಎಂದಿನಿಂದಲೂ ಜನಜನಿತವಾಗಿತ್ತು (ನಂ ೫೬). ಇಟ್ಟಿಗೆಯ ಶಾಸನದಲ್ಲಿ (ಸಂ. ೫೫) "ಬಹುಧರ್ಮ್ಮರ್ಧೇನುನಿವಹಕ್ಕಾಡುಂಬೊಲಂ ಬೆಳ್ವೊಲಂ" ಎಂದಿರುವ ವರ್ಣನೆಯನ್ನು (ಪ. ೨೫೦) ಕುಂತಳಕ್ಕೂ ಅನ್ವಯಿಸಿಕೊಳ್ಳಬಹುದು.

ಧರ್ಮವಿನೋದಿಗಳಂತೆ ದಾನವಿನೋದಿಗಳೂ ಶಿಲಾಶಾಸನ ಪ್ರಪಂಚದಲ್ಲಿ ಎಲ್ಲೆಲ್ಲೂ ಅಸಂಖ್ಯವಾಗಿ ಬೆಳಗುತ್ತಿದ್ದಾರೆ ನಾಡಿನ ಸಂಸ್ಕೃತಿಯನ್ನು, ಚರಿತ್ರವನ್ನು ಉಜ್ವಲಗೊಳಿಸಿದ ಶ್ರೇಯಸ್ಸಿನಲ್ಲಿ ಅವರೂ ದೊಡ್ಡ ಪಾಲುಗಾರರಾಗಿದ್ದಾರೆ. ಧನವನ್ನು ದಾನದಲ್ಲಿ ಸವೆಸಿ, ಭೂಲೋಕದ ಕಾಮಧೇನು ಜಂಗಮಕಲ್ಪವೃಕ್ಷ ಇತ್ಯಾದಿಯಾಗಿ ಹೊಗಳಿಸಿಕೊಂಡ ದಾನಿ–ನಾಸಿರ್ವರಲ್ಲಿ ಹಲವಾರು ಮಹಾ ಉದಾರಿಗಳು ತಮ್ಮ ಉದಾತ್ತವಾದ ವಿಚಾರ-ಚಾರಿತ್ರ್ಯಗಳಿಂದ ಓದುಗನ ಹೃದಯದಲ್ಲಿ ನೆಲೆನಿಂತು ಪ್ರಭಾವಬೀರುವಂತೆ ಶಾಸನಗಳಲ್ಲಿ ಚಿತ್ರಿತರಾಗಿದ್ದಾರೆ. ವಿಜಾಪುರ ಜಿಲ್ಲೆಯಲ್ಲಿರುವ ಮುತ್ತಿಗೆ ಎಂಬ ಊರನ್ನೇ ತನ್ನ ಮಗ ವಿಕ್ರಮಾದಿತ್ಯನ ಉಪನಯನದಲ್ಲಿ ರಾಜಗುರು ವಿಷ್ಣುಭಟ್ಟನಿಗೆ ದಕ್ಷಿಣೆಯಾಗಿ ಕೊಟ್ಟ ಚಾಳುಕ್ಯ ಸತ್ಯಾಶ್ರಯ (ಕ್ರಿ. ವ. ೧೦೭೯, ನಂ. ೩೩), ತನ್ನ ಗಳಿಕೆಯನ್ನೆಲ್ಲ ಲೋಕಹಿತಾರ್ಥವಾಗಿ ವ್ಯಯಿಸಿ ನಾಡಿಗೆ ಯೌವನ ಪ್ರಾಪ್ತಿಯಾಗುವಂತೆ ದಾನಮಾಡಿ **'ಧರ್ಮದ ಕಣಿ'** ಎಂದು ಹೆಸರುವಾಸಿಯಾದ ಜಕ್ಕ (ಕ್ರಿ. ವ. ೧೧೨೧, ನಂ. ೫೮), ಚೋಳನ ಸಾಮಂತರನ್ನು ಸೋಲಿಸಿ ಅಟ್ಟಿದುದಕ್ಕೆ ಮೆಚ್ಚಿ ಹೊಯ್ಸಳ ವಿಷ್ಣುವರ್ಧನನು 'ಏನು ಬೇಕು ಬೇಡು, ಕೊಡುವೆ' ಎಂದರೆ, ಅವರಿವರ ಹಾಗೆ ಅರಸು ಕೊಡುತ್ತಾನೆಂದು ತನಗಾಗಿ ಅದು ಇದು ಬೇಕೆಂದು ಬೇಡದೆ, ಗೊಮ್ಮಟದೇವರಿಗಾಗಿ ಗೋವಿಂದವಾಡಿಯನ್ನು ಬೇಡಿ ಪಡೆದು, ಅದನ್ನು ಆ ದೇವರಿಗೆ ಕೊಟ್ಟ ಜಿನಾರ್ಚನಲುಬ್ಧನಾದ ಗಂಗಚಮೂಪತಿ (ಕ್ರಿ. ವ. ೧೧೭೫, ನಂ. ೮೦), ಸಂಕ್ರಮಣದ ದಿನ ಸುವರ್ಣದಾನವನ್ನು ಮಾಡಿ ಮಾಡಿ ಬೆರಳುಗಳಿಗೆ ಹತ್ತಿದ ಕಶ್ಮಲ 'ಬಾಹುಕಲ್ಪವಲ್ಲರಿಯ ತಳಪ್ರವಾಳದ ನಖಪ್ರಸವಕ್ಕೆ ತುಂಬಿ ಎರಗಿದಂತೆ' ಕಾಣುತ್ತಿದ್ದ ರಟ್ಟ ಲಕ್ಷ್ಮೀದೇವನ ಮಡದಿ ಚಂದ್ರಿಕಾದೇವಿ (ಕ್ರಿ. ವ.

೧೩೦೪, ನಂ. ೯೮), ಸಾಳುವೇಂದ್ರನು ಮೆಚ್ಚಿ ಕೊಟ್ಟ ಒಗೆಯಕೆಱೆ (ಶಿವಮೊಗ್ಗೆ ಜಿಲ್ಲೆಯಲ್ಲಿಯ ಈಗಿನ ಹೊಗೇಕೆರೆ) ಎಂಬ ಮಾನ್ಯಗ್ರಾಮವನ್ನು ತನಗಿಟ್ಟುಕೊಳ್ಳದೆ 'ದೊರೆಯ ಒಲವಿನಿಂದ ನನ್ನ ಪೋಷ್ಯವರ್ಗಕ್ಕೆ ತಕ್ಕಷ್ಟು ಸಿರಿ ಇದ್ದೇ ಇದೆ. ಧರ್ಮ ವೊಂದೇ ಕಡೆಗಂಡ ಕಜ್ಜ, ಈಗ ಅರಸು ಕೊಟ್ಟುದನ್ನೆಲ್ಲ ಅದಕ್ಕಾಗಿ ಅರ್ಪಿಸಿಬಿಡುವೆ' ಎಂದು ವಿಚಾರಿಸಿ ಪಾರ್ಶ್ವನಾಥ ಮಂದಿರವನ್ನು ಕಟ್ಟಿಸಿ ಅದಕ್ಕೆ ಅರ್ಪಿಸಿಬಿಟ್ಟ ಧೀರೋದಾತ್ತ ಪದ್ಮಣಮಂತ್ರಿ (ಕ್ರಿ. ವ. ೧೪೮೭, ನಂ. ೧೧೪) ಇತ್ಯಾದಿ ಜನಜೀವನ ವನ್ನು ತಿದ್ದಿ ಸಂಸ್ಕೃತಿಯನ್ನು ಸುಂದರಗೊಳಿಸಿದ ಉದಾರ ಚರಿತರು ಶಾಸನಶಿಲೆಗಳಲ್ಲಿ ರತ್ನಗಳಂತೆ ಮಿನುಗುತ್ತಿದ್ದಾರೆ.

ಸಮಾಜಕ್ಕೆ ಮುಖ್ಯವಾಗಿ ಅಪೇಕ್ಷಿತವಾದ ದಾನಗಳು ನಾಲ್ಕು ಎಂದು ಪರಿಗಣಿಸಲಾಗಿದೆ. ಅವೆಂದರೆ ಮಾರ್ಗಸ್ಥರಿಗೆ, ವಿದ್ಯಾರ್ಥಿಗಳಿಗೆ, ದೀನರಿಗೆ ಆಹಾರ ದಾನ, ಪೀಡಿತರಿಗೆ ಅಭಯದಾನ–ಸಂರಕ್ಷಣೆಯ ಭರವಸೆ, ರೋಗಿಗಳಿಗೆ ಭೈಷಜ್ಯ ದಾನ, ಎಲ್ಲರಿಗೂ ವಿದ್ಯಾದಾನ. ಅರಸರು, ಅಧಿಕಾರಿಗಳು, ಮಹಾಜನಗಳು, ನಕರ ಗಳು ಈ ದಾನಗಳನ್ನು ಒಳ್ಳೆಯ ಆಸ್ಥೆಯಿಂದ ತತ್ಪರತೆಯಿಂದ ನಡೆಸುವವರಾಗಿದ್ದರು ಎಂದು ಶಾಸನಗಳ ಉಲ್ಲೇಖಗಳಿಂದ ತಿಳಿಯುವುದು. ಇದರಿಂದ ಪ್ರಜಾವರ್ಗ ನೆಮ್ಮದಿಯಿಂದ ಬಾಳಲು ಅನುಕೂಲವಾಗಿತ್ತೆಂದು ಹೇಳಬಹುದು. ಎಲ್ಲ ದಾನಗಳಲ್ಲಿ ದೇಶೋನ್ನತಿಯ ದೃಷ್ಟಿಯಿಂದ ವಿದ್ಯಾದಾನವು ಅತಿ ಮುಖ್ಯವಾದುದೆಂದು ಇತಿಹಾಸ ಕಾಲದ ನಮ್ಮ ಪೂರ್ವಜರು ಅರಿತಿದ್ದರೆಂಬುದನ್ನು ಅನೇಕ ಶಿಲಾಧಾರಗಳು ಸಾರು ತ್ತಿವೆ. ಘಟಿಕಾಸ್ಥಾನಗಳು ಮತ್ತು ಅಗ್ರಹಾರಗಳು ಉಚ್ಚ ವಿದ್ಯಾಸ್ಥಾನಗಳಾಗಿದ್ದವು, ಬೃಹತ್ಸಂಸ್ಥೆಗಳಾಗಿದ್ದವು. ಕಾಡಿಯೂರು (ಈಗಿನ ಕಳಸ ಶಾ. ೭) ಪ್ರಸಿದ್ಧ **ಘಟಿಕಾ ಸ್ಥಾನ**ವಾಗಿತ್ತು; ಅನವದ್ಯತತ್ತ್ವವಿದರೂ ಆಗಮಜ್ಞರೂ ಶಬ್ದವಿದ್ಯಾಗಮ ಪರಿಣತರೂ ಆದ ಇನ್ನೂರ್ವ್ವರು ವಿಬುಧರು ಅಲ್ಲಿದ್ದರು. ವ್ಯಾಕರಣ, ಅರ್ಥಶಾಸ್ತ್ರ, ಸಾಹಿತ್ಯವಿದ್ಯೆ, ಇತಿಹಾಸ, ಏಕಾಕ್ಷರ ಈ ಎಲ್ಲ ವಿಷಯಗಳನ್ನು ಅಲ್ಲಿ ಕಲಿಸಲಾಗು ತ್ತಿತ್ತು; ಅಲ್ಲಿ ಕಲಿತವರು ಆ ವಿಷಯಗಳಿಗೆ ಟೀಕೆ ಬರೆಯಬಲ್ಲಷ್ಟು ಪಾಂಡಿತ್ಯವನ್ನು ಗಳಿಸುತ್ತಿದ್ದರು. ಮಹಾಗ್ರಹಾರವಾಗಿದ್ದ ನಾಗಾವಿ (ಹಿಂದಿನ ಹೆಸರು ನಾಗವಾವಿ) ಯಲ್ಲಿಯ ತ್ರೈಪುರುಷದೇವರ ಸಾಲೆ ಘಟಿಕಾಸ್ಥಾನವೆನಿಸಿತ್ತು (ಕ್ರಿ. ವ. ೧೦೫೮ ಮತ್ತು ೧೦೬೮, ನಂ. ೨೭, ೩೭). ಅಲ್ಲಿ ೨೦೦ ಛಾತ್ರರು ವೇದಗಳನ್ನೂ ೫೦ ಛಾತ್ರರು ಶಾಸ್ತ್ರಗಳನ್ನೂ ಓದುತ್ತಿದ್ದರು; ಭಟ್ಟದರ್ಶನ–ನ್ಯಾಸ–ಪ್ರಭಾಕರಗಳನ್ನು ಕಲಿಸುವುದಕ್ಕೆ ಮೂವರೂ, ವೇದವನ್ನು ಓದಿಸುವುದಕ್ಕೆ ಮೂವರೂ ಉಪಾಧ್ಯಾಯರಿದ್ದರು. 'ಸರಸ್ವತೀಭಂಡಾರ' ಎಂಬ ಒಂದು ಗ್ರಂಥಾಲಯವೂ ಅಲ್ಲಿತ್ತು. ಆ ಇನ್ನೂರ ಅಯ್ವತ್ತೇಳು ಜನರ ಹಾಗೂ ಕೆಲಸದ ಮಾಣಿಗಳ ಅಶನಾಚ್ಛಾದನ ಮೊದಲಾದ ವೆಚ್ಚಕ್ಕೆ ೧೦೦೦ ಮತ್ತರು ಭೂಮಿಯ ಉಂಬಳಿಯಿತ್ತು; ಅಲ್ಲದೆ ನಾಗಾವಿಯ ಮಹಾಮಾಣಿಕ ಮಧುಸೂದನ ದೇವಾಯತನವು ಏಕದಂಡಿ, ತ್ರಿದಂಡಿ, ಸ್ನಾತಕ,

ಬ್ರಹ್ಮಚಾರಿ, ಹಂಸ, ಪರಮಹಂಸ (ಇವು ಸಂನ್ಯಾಸಿಗಳ ವಿವಿಧ ಮಟ್ಟಗಳು) ಇವರ ಅನುಷ್ಠಾನಭವನವಾಗಿತ್ತೆಂದೂ ನಾಲ್ಕು ವೇದಗಳು, ವೇದಾಂಗಗಳು ಮತ್ತು ಅವುಗಳ ಅನೇಕ ಶಾಖೆಗಳನ್ನು ಪಠಿಸುವ ಮಠದಿಂದ ವಿರಾಜಿತವಾಗಿತ್ತೆಂದೂ ವರ್ಣಿತವಾಗಿದೆ. ಅಲ್ಲಿ ನಡೆವ ವಿದ್ಯಾದಾನ ಹಾಗೂ ಇತರ ಸಾಂಸ್ಕೃತಿಕ ಕಾರ್ಯಗಳ ಆಚಂದ್ರಾರ್ಕ ವ್ಯವಸ್ಥೆಗಾಗಿ ಲೋಕರಸನೆಂಬ ಮಹಾಮಂಡಳೇಶ್ವರನು ಹಲವು ದತ್ತಿಗಳನ್ನು ಕೊಟ್ಟಿದ್ದಾನೆ (ನಂ. ೩೭ ಆ, ಕ್ರಿ. ವ. ೧೧೦೮೫). ಈ ಮೊದಲು ವರ್ಣಿಸಲ್ಪಟ್ಟ ತ್ರೈಪುರುಷದೇವರ ಆ ಶಾಲೆಯೂ ಮಧುಸೂದನ ದೇವಾಲಯದ ಈ ಮಠವೂ ಒಂದೇ ಎಂದು ತೋರುವುದಿಲ್ಲ. ಚಿಕ್ಕಹಂದಿಗೋಳ (ನಂ. ೪೯), ಇಟಗಿ (ತಾ. ಕೊಪ್ಪಳ ಶಾ. ೫೫), ಆಲೂರು (ಮುಂಡರಗಿ ಪೇರಾ), ಹೊಟ್ಟೂರು (ಸಿಗ್ಗಾವಿ ತಾಲೂಕು) ಇತ್ಯಾದಿ ಅಗ್ರಹಾರಗಳೂ ಕನ್ನಡನಾಡಿನಲ್ಲಿದ್ದವು. ಅಲ್ಲದೆ, ಊರೂರೊಳಗಿನ ದೇವಾಲಯಗಳೂ ವಿದ್ಯಾಸ್ಥಾನಗಳಾಗಿದ್ದವೆಂಬುದಕ್ಕೆ 'ಇದು ವೇದತ್ರಯ ತತ್ತ್ವ-ಧಾಮಂ' ಎಂದು ವರ್ಣಿತವಾದ ಕಲಿದೇವದೇವಾಲಯದಂತಹ (ಮನಗೋಳಿ ೬೦ ೭೮) ಉದಾಹರಣಗಳು ಶಾಸನ ಸಾಹಿತ್ಯದಲ್ಲಿ ಬೇಕಾದಷ್ಟಿವೆ. ಎಂತಲೇ **ಚಾರು ಕರ್ಣಾಟ ದೇಶವು ವಿದ್ಯಾಧನ ಜನ್ಮಸ್ಥಾನವಾಗಿತ್ತು** (ನಂ. ೧೧೬).

ಈ ಶಾಸನಗಳ ಕಾಲಾವಧಿಯಲ್ಲಿದ್ದ ದೊರೆಗಳನ್ನು, ದಂಡನಾಯಕರನ್ನು, ಅಧಿಕಾರಿಗಳನ್ನು, ಮಹಾಜನಗಳನ್ನು ಬಣ್ಣಿಸುವಾಗ 'ಮನುಚರಿತ್ರರು' ಎಂಬ ಮಾತು ಸಾಮಾನ್ಯವಾಗಿ ಬರುತ್ತದೆ. ಅವರ ನಡೆನುಡಿಗಳು ಮನುಶಾಸ್ತ್ರದಲ್ಲಿ ಹೇಳಿದ ಮೇರೆಗೆ ಇತ್ತು ಎಂದು ಇದರ ಅಭಿಪ್ರಾಯ. ಅರಸರೇ ಇರಲಿ, ಅಧಿಕಾರಿಗಳೇ ಇರಲಿ, ಸಾಮಾನ್ಯ ಪ್ರಜೆಗಳೇ ಇರಲಿ ಅವರ ಆಚಾರ ವಿಚಾರಗಳಿಗೆ ಮನುಮುನಿಯ ವಾಕ್ಯಗಳೇ ಪ್ರಮಾಣಭೂತವಾಗಿರಬೇಕೆಂದು ಆಗಿನವರು ಎಣಿಸಿದ್ದರು. ಕುಂತಳ ದೇಶವನ್ನು ದೀರ್ಘಕಾಲದವರೆಗೆ ಆಳಿದ ಪ್ರಖ್ಯಾತವಾದ ಚಾಳುಕ್ಯವಂಶದ ದೊರೆಗಳು ಈ ಮಾರ್ಗದಲ್ಲಿ ಆದರ್ಶಪ್ರಾಯರಾಗಿದ್ದರೆಂದು ಮನಗೋಳಿಯ ಕ್ರಿ ವ. ೧೧೬೧ರ ಶಾಸನವು (ನಂ. ೭೮) ತಿಳಿಸುವುದು. ಈ ವಂಶದವರ ಚಾರಿತ್ರವು 'ಮನುಸೂತ್ರಗಳಿಗೆ ಇದು ಟೀಕು' — ಮನುಶಾಸ್ತ್ರದ ವಾಕ್ಯಾರ್ಥವನ್ನು ಇವರ ಆಚಾರ-ವಿಚಾರಗಳನ್ನು ನೋಡಿ ತಿಳಿಯಬಹುದು ಎಂಬ ಹಾಗಿತ್ತು ಎಂದು ಅದರಲ್ಲಿ ಹೇಳಿದೆ (ಪ. ೩೪೪). ಹಾಗೆ ಅವರು ಧರ್ಮಸಮ್ಮತವಾದ ನೀತಿಯಿಂದ ಆಳಿದರೆಂಬುದಕ್ಕೆ ಒಂದು ಉದಾಹರಣವು ಕುರುವತ್ತಿಯ ಕ್ರಿ. ವ. ೧೦೦೪ರ ಒಂದು ಶಾಸನದಲ್ಲಿ (ನಂ. ೫೩) ಸಿಕ್ಕುತ್ತದೆ. ಮನ್ನೆಯನಾದ ಬೊಪ್ಪಯ್ಯನು ಅಗ್ರಹಾರವಾದ ಹೊಳಲಿಗೆ ದಾಳಿಯಿಟ್ಟು ಸೂರೆಗೊಂಡು ಬ್ರಾಹ್ಮಣರನ್ನು ಕೊಂದನು. ಆ ದೂರನ್ನು ಚಾಳುಕ್ಯ ೭ನೆಯ ವಿಕ್ರಮಾದಿತ್ಯನು ವಿಚಾರಿಸಿ, ಬೊಪ್ಪನನ್ನು ದಂಡಿಸಿ, ಹೊಳಲಿಗೆ ಮನ್ನೆಯರಾರೂ ಇಲ್ಲದಂತೆ ನಿಯಾಮಿಸಿ, ಅವನಿಂದ ಮನ್ನೆಯತನವನ್ನು ಬಿಟ್ಟಂತೆ ಆಣೆ ಪತ್ರವನ್ನು ಪಡೆದ ಸಂಗತಿ ಅದರಲ್ಲಿ ಬಂದಿದೆ. ಕಳಚುರ್ಯ ಸಂಕಮನ

ಮಾಂಡಲಿಕನಾಗಿ ಕಿಸುಕಾಡನ್ನು ಆಳುತ್ತಿದ್ದ ಸಿಂದ ವಿಕ್ರಮಾದಿತ್ಯನೂ (ಕ್ರಿ. ವ. ೧೧೭೯) 'ಪ್ರಜೆಯಂ ಪಾಲಿಸಿ, ಧರ್ಮಮಂ ನಿಲಿಸಿ, ಶಿಷ್ಟವ್ರಾತಮಂ ಕಾದು, ಅರಿವ್ರಜವನ್ನು ಸೋದು' ಸದ್ಧರ್ಮದಿಂದ ಆಳಿದನೆಂದು ಹೊಗಳಲ್ಪಟ್ಟಿದ್ದಾನೆ (ನಂ. ೮೩). ಅಪರಾಧಿಗಳನ್ನು ನೋಡಿ ದಂಡಿಸುವುದು ರಾಜರ ಧರ್ಮ; ಅದನ್ನು ಪಾಲಿಸಿದ ದೊರೆಗಳು ಅನೇಕರಿರುವುದು ಅಷ್ಟೊಂದು ವಿಶೇಷವಲ್ಲ; ಕೂಂಡಿನಾಡನ್ನು ಆಳುತ್ತಿದ್ದ ರಟ್ಟ-ಲಕ್ಷ್ಮಿದೇವನ ಆಳಿಕೆಯಲ್ಲಿ (ಕ್ರಿ. ವ. ೧೨೦೪) 'ಅಪರಾಧಗಳೇ ಇರಲಿಲ್ಲ, ಎಂದ ಮೇಲೆ ದಂಡದ ಮಾತೇಕೆ (ನಂ. ೯೮)?' ಎಂದು ಬರೆದಿದೆ ಹೊಯ್ಸಳ ನರಸಿಂಹನ ಕಾಲದಲ್ಲಿ ಕ್ರಿ. ವ. ೧೧೬೦ರಲ್ಲಿ ಈಶ್ವರನೆಂಬ ವಿಷಯಾಧಿಕಾರಿಯಿದ್ದನು. ಅವನು ಮಱುವಲಿ, ಮಣ್ಣೆ, ತೆಂಗೆಱೆ, ಕಲ್ವಳಿ ಎಂಬ ನಾಡುಗಳನ್ನು ಆಳುತ್ತಿದ್ದನು. ಅವನ ನಾಡುಗಳಲ್ಲಿ ಹಾಲು-ಹೈನ, ಕಾಳು-ಕಡಿಗಳ ಸಮೃದ್ಧಿಯಿತ್ತು; ತೆರಿಗೆ ಹೆಚ್ಚಾಗಿರಲಿಲ್ಲ ಎಂದು ತುಮಕೂರು ತಾಲೂಕಿನ ಪಂಡಿತರವಳ್ಳಿ ಶಾಸನವು ಹೇಳುತ್ತದೆ (ನಂ. ೭೪). ಸಾತೇನಹಳ್ಳಿಯ ಒಡತಿಯಾಗಿದ್ದ ಪೃಥಿವಿಸೆಟ್ಟಿಯರ ವೆಣ್ಣಲೆಸೆಟ್ಟಿಕವ್ವೆ (ಕ್ರಿ. ವ. ೧೨೦೪) ಬಣಂಜುಧರ್ಮವನ್ನು ಪಾಲಿಸುವುದಕ್ಕಾಗಿ ದುರ್ಗಾದೇವಿಯೇ ಅವತರಿಸಿದ್ದಳೆಂಬಂತೆ ಆಳಿದ್ದಾಳೆ (ನಂ. ೯೫). ಆಕೆಯ ದರ್ಪದ ನ್ಯಾಯನಿಷ್ಠುರವಾದ ಆಳಿಕೆಯನ್ನು ಈ ಪದ್ಯವು ಪರಿಚಯಮಾಡಿಕೊಡುತ್ತದೆ :

ಖಳರಳವಂ ಕಳಲ್ಚಿ ನೆಱೆ ಕಳ್ಳರ ಕೊಳ್ಳಿಯ ಬಾಧೆಯಂ ಬೆಗ-
ಳ್ದಳಱೆ ತೆರಳ್ಚಿ ತೂಳ್ದಿ ನೆರೆ ಮನ್ನೆಯರನ್ನೆಯಮಂ ನಿರಾಕುಳಂ
ಕಳೆದು ಬಣಂಜುಧರ್ಮಮನೆ ಪಾಳಿಸಿ ಭೀತರನೆಯ್ದೆ ಕಾದು ನಿ-
ರ್ಮ್ಮಳತರ ಕೀರ್ತ್ತಿಯಂ ಪಡೆದಳಾಪ್ಪರ್ಡಿ ವೆಣ್ಣಲ ಸೆಟ್ಟಿಕವ್ವೆಯೊಳ್ || ೪೫೬ ||

ಈ ಶಾಸನಗಳಲ್ಲಿ ಅಡಕವಾಗಿರುವ ದೇಶ-ಪ್ರದೇಶಗಳ ವರ್ಣನೆಗಳೂ ನಾಡಿನ ಸುಖಸಮೃದ್ಧಿಯ ಪರಿಚಯಮಾಡಿಕೊಡುತ್ತವೆ. ಕುಂತಳೋರ್ವಿಯೊಳಗಿನ ಊರೂರುಗಳೆಲ್ಲವೂ 'ಪ್ರಜಾಸಂಕುಳ-ಗೋ-ಧಾನ್ಯ ಪ್ರಕೀರ್ಣಾಂಚಿತ'ವಾಗಿದ್ದವೆಂದು ರೋಣದ ಶಾಸನ ಹೇಳುತ್ತಿದೆ (ನಂ. ೮೩). ಕುಂತಳಾಂತರ್ಗತವಾದ ಕೂಂಡಿಮಂಡಲ (ಸು. ಈಗಿನ ಬೆಳಗಾವಿ ಜಿಲ್ಲೆಯ ಪ್ರದೇಶ, ಸರ್ವರ್ತುಕ (ಎಂದರೆ ಎಲ್ಲ ಋತುಗಳಲ್ಲಿ ಬೆಳೆಯುವಂತಹದು) ವಾಗಿತ್ತು. ಅದು ಸುಕೃತಫಳವಿಳಾಸದ ನಿವಾಸವೂ ಆಗಿತ್ತು (ನಂ. ೯೬). ಬಳ್ಳಾರಿ ಜಿಲ್ಲೆಯ ಕುರುಗೋಡು ಶಾಸನಗಳು (ನಂ. ೭೯, ೮೨) ಬಲ್ಲಕುಂದೆ ನಾಡ ಸಿರಿ ಎಂದೂ ಹಿಂಗದಿರುವುದೆಂದೂ ಈ ನಾಡ ಹಳ್ಳಿಗಳ ಕುಡಿಯೊಕ್ಕಲ ಮಕ್ಕಳು ಧನದ ಧಾನ್ಯದ ಸೊಮ್ಮಿನ ಸೊಕ್ಕಿನಿಂದ ತಮಗೆ ಯಾರೂ ಸರಿಯಿಲ್ಲದವರಾಗಿದ್ದರೆಂದೂ ತಿಳಿಸುತ್ತಿವೆ. ಪ್ರತಿ ಗ್ರಾಮದ ಹೊರವಳಯದ ವರ್ಣನೆಗಳನ್ನು ಓದಿದಾಗ ಸದಾ ಸುಫಲ-ಸಸ್ಯ-ಶ್ಯಾಮಲೆಯಾಗಿದ್ದ ಭೂದೇವಿಯ ದರ್ಶನ ನಮಗಾಗುತ್ತದೆ. ಇಂತಹ ಫಲಪ್ರದವಾದ ಭೂಮಿಯಲ್ಲಿ, ಮೇಲೆ ವರ್ಣಿತ

ವಾದಂತೆ ಸದ್ಧರ್ಮದಿಂದ ಆಳುವ ಚಕ್ರವರ್ತಿಗಳ, ಮಂಡಳೇಶ್ವರರ, ಅಧಿಕಾರಿಗಳ ಆಳಿಕೆಯ ಕಾಲಗಳಲ್ಲಿ ಪ್ರಜೆಗಳು ನೆಮ್ಮದಿಯಿಂದ ಬಾಳಿದ್ದರೆಂದು ಬೇರೆ ಹೇಳ ಬೇಕಾಗಿಲ್ಲ. ರಾಜ್ಯಾಧಿಕಾರಿಗಳಂತೆಯೆ ಊರೂರಿನ ಜನಸಾಮಾನ್ಯರೂ ಸಚ್ಚಾರಿತ್ರ್ಯ ಸಂಪನ್ನರಾಗಿದ್ದರೆಂಬುದನ್ನು ಕೆಲವೊಂದು ಶಾಸನಗಳು ಉಲ್ಲೇಖಿಸಿವೆ. ಅದರ ಪ್ರತ್ಯಕ್ಷವಾದ ವರ್ಣನೆ ರಾಷ್ಟ್ರಕೂಟ ೪ನೆಯ ಗೋವಿಂದನ ಕಾಲದ ಕಳಸದ ಶಾಸನದಲ್ಲಿದೆ (ನಂ. ೭). ಅಲ್ಲಿ ಬಣ್ಣಿಸಿದ ಕಾಡಿಯೂರ (ಬಹುಶಃ ಇವೇ ಈಗಿನ ಲಕ್ಷ್ಮೇಶ್ವರದ ಬಳಿಯ ಕಳಸ ಎಂಬ ಗ್ರಾಮ) ಜನಗಳಲ್ಲಿ 'ಬಡಿಯುವುದು ಬಿಡುವುದು, ಕೃತ್ರಿಮ, ಅನಿತ್ಯ, ಏರಿಹೋಗುವುದು, ಬಾಣದಿಂದ ಇಸುವುದು, ಕುಂದು, ಕಳಂಕ, ನಡುಕ, ಬಡತನ' ಮೊದಲಾದವುಗಳಿರಲಿಲ್ಲ. ಐಕ್ಯಪಕ್ಷಪ್ರತಿಪಾಳನೆ, ಮರ್ಯಾದೆ, ಪ್ರತಿಪನ್ನತೆ, ಕ್ಷಾಂತಿ, ಅಲಂಕಾರ ಉಳ್ಳವರಾದ ಜನಗಳಿಂದ ಕಾಡಿ ಯೂರು ಮನಂಗೊಳಿಸುತ್ತಿತ್ತು. ನೂರು ಸತ್ಕಾರ್ಯಗಳನ್ನು ನಮ್ಮ ನಾಡಜನರು ಮಾಡುತ್ತಿದ್ದರೆಂಬುದನ್ನು ಅಬಲ್ವಾಡಿನ ವರ್ಣನೆ ಸೂಚಿಸುವುದು (ನಂ. ೯೪). ಅವರು ತಮ್ಮ ತಮ್ಮ ಸಂಪ್ರದಾಯದ ನಿತ್ಯ ನೈಮಿತ್ತಿಕ ಕರ್ಮಗಳನ್ನು ಶ್ರದ್ಧೆಯಿಂದ ಆಚರಿಸುವವರಾಗಿದ್ದರು. ಪೊಸವಡಂಗಿಲೆ(ಈಗಿನ ಹಿರೇಹಡಗಲಿ)ಯ ವರ್ಣನೆ ಯಲ್ಲಿ ಆ ಊರ ಮನೆಗಳೆಲ್ಲ ದಾನಧರ್ಮದ ತವರುಮನೆಗಳಾಗಿದ್ದವೆಂಬುದನ್ನು ಈ ಒಂದು ಪದ್ಯದಲ್ಲಿ ಕವಿ ನಿರಾಡಂಬರವಾಗಿ ಹೇಳಿದ್ದಾನೆ:

ಮನೆ ಮನೆ ಶಂಕರಾಚ್ಯುತಬುಧಾ ತಿಥಿಪೂಜೆಯಿನಗ್ನಿಹೋತ್ರದಿಂ-
ದನುಪಮವೇದನಾದ ಮರಸತ್ರಸಭಾಶಿವವಿಷ್ಣುವಾಗ್ನಿಕೇ-
ತನತತಿ ಕೇರಿಕೇರಿ ಜನರಿಂ ಸಲೆ ತಿಂತಿಣಿ ಬೀದಿ ಬೀದಿ ತಾ-
ನೆನಿಸುವುದಾಗಳುಂ ಪೊಸವಡಂಗಿಲೆ ವಿಶ್ವಮಹೀತಳಾಗ್ರದೊಳ್ ‖ ೧೧೩ ‖

ಹೀಗೆ ದೇವಪೂಜೆ, ಅತಿಥಿಸತ್ಕಾರ ಮೊದಲಾದ ಗೃಹಸ್ಥಧರ್ಮದ ಕರ್ಮಗಳನ್ನು ನಡಸುತ್ತಿದ್ದ ಮಾದರಿಯ ಒಂದೆರಡು ಮನೆಗಳ ಉಲ್ಲೇಖಗಳೂ ಶಿಲಾಶಾಸನಗಳಲ್ಲಿ ದೊರೆಯುತ್ತಿವೆ. ನಾಗವಾವಿಯ ಕಾಳಿದಾಸಯ್ಯ ದಂಡನಾಯಕನು ಗೃಹಸ್ಥಾಶ್ರಮ ವನ್ನು ಪವಿತ್ರವಾಗಿ ನಡಸಿಕೊಂಡಿದ್ದು ಕೃತಕೃತ್ಯಾತ್ಮಕನಾಗಿದ್ದನು (ಕ್ರಿ. ವ. ೧೦೫೮, ಪ. ೧೨೦). ಹಾಗೆಯೆ ಗಂಗಚಮೂಪತಿಯ ತಂದೆಯಾದ ಏಚಿಗಾಂಕನೂ ಕ್ರಿ. ವ. ೧೧೭೫) ಕೃತಕೃತ್ಯ ಗೃಹಸ್ಥಾಶ್ರಮಿಯೆನಿಸಿದ್ದನು ನಂ ೮೦ . ಮನುಚರಿತನಾದ ಅವನ ಮನೆಯಲ್ಲಿ ಯಾವಾಗಲೂ ಮುನಿಜನಸಮೂಹವೂ ಬುಧಜನಸಂಘವೂ ನೆರೆ ದಿರುತ್ತಿತ್ತು; ಜಿನಪೂಜನೆ, ಜಿನಮಹಿಮಾಕಥನ ನಿರಂತರವಾಗಿ ನಡೆದಿರುತ್ತಿತ್ತು (ನಂ. ೮೦).

ಕರ್ನಾಟಕದ ಜನರು ಸಾಮಾನ್ಯವಾಗಿ ಶೂರರಾಗಿದ್ದರೆಂದು ಹೇಳಬಹುದು. ಚಕ್ರವರ್ತಿ–ಮಂಡಳೇಶ್ವರರ ಪ್ರತಾಪವನ್ನು ಶಾಸನಗಳಲ್ಲಿ ಹೊಗಳಿರುವುದು ಮಾತ್ರ ವಲ್ಲದೆ ಊರೊಡೆಯರು, ಗಾವುಂಡರು ಮೊದಲಾದ ಕೆಳಗಿನ ಅಧಿಕಾರಿಗಳ ವರೆಗಿನ

ಎಲ್ಲರ ವರ್ಣನೆಗಳಲ್ಲಿಯೂ ವೀರತ್ವವು ಸರ್ವಸಾಧಾರಣವಾದ ಗುಣವಿಶೇಷವಾಗಿ ಬಂದಿದೆ. ಇಷ್ಟೇ ಅಲ್ಲ, ವಿಪ್ರರಾದ ಮಹಾಜನಗಳೂ ಮುಮ್ಮುರಿದಂಡಗಳೆಂದು ವರ್ಣಿತರಾದ ವ್ಯಾಪಾರಿಗಳೂ ವೀರರಾಗಿದ್ದರೆಂದು ಶಾಸನೋಲ್ಲೇಖಗಳಿಂದ ಕಂಡು ಬರುತ್ತದೆ. ಕುರುಗೋಡಿನ ಮುಮ್ಮುರಿದಂಡಗಳು '**ತೋಟಿ ಎಂದರೆ ಕೋಟಿ ಲಾಭ**'ವೆಂದು ಉಲಿಯುತ್ತಿದ್ದರು. ಅವರು ಆ ಊರಿನ ಮೂಲಸ್ತಂಭವಾಗಿದ್ದರು (ನಂ. ೮೧). ಸತ್ಯಾಶ್ರಯನ ರಾಜಗುರುವಾಗಿದ್ದ ಮುತ್ತಿಗೆಯ ವಿಷ್ಣುಭಟ್ಟನ ವಂಶದಲ್ಲಿ ಅವನಿಂದ ಮೂರನೆಯವನಾದ ಗೋವಿಂದರಾಜನು ಶಸ್ತ್ರಶಾಸ್ತ್ರಪರಿಣತನಾದ ಚಮೂಪತಿಯಾಗಿದ್ದನು; ಅವನ ಮೊಮ್ಮಗ ಗೋವಿಂದ ದಂಡನಾಥನು (ಕ್ರಿ. ವ. ೧೦೭೯-೧೧೧೦) ವೀರಶ್ರೀವದನಕಮಲ ಮಾರ್ತಂಡನೆಂದು ವರ್ಣಿತನಾಗಿದ್ದಾನೆ (ನಂ. ೩೩). ತುರುಗಾಳೆಗ ಮೊದಲಾದ ಕಾಳಗಗಳಲ್ಲಿ ಕಾದಿ ವೀರಸ್ವರ್ಗವನ್ನೈದಿದವರ ಸ್ಮಾರಕಗಳಾದ ವೀರಗಲ್ಲುಗಳು ನಾಡಿನ ತುಂಬಾ ಹರಡಿವೆ. ಆ ಅಸಂಖ್ಯವೀರರು ಜನಸಾಮಾನ್ಯ ವರ್ಗದವರೇ ಆಗಿದ್ದಾರೆ. ಚೋರಯೂಥವನ್ನು ಪೆಸ [ವರಿ] ಗೆಯ್ದು ಭೂತಗಣಕ್ಕೆ ಉತ್ಸವ ಮಾಡಿ ಸತ್ತ ಹಡಗಲಿ ತಾಲೂಕಿನ ಹೊಳಲು ಎಂಬ ಊರಿನ ಬಸವೆಯ ನಾಯಕ (ನಂ. ೯೧), ತುಳುರಾಜ್ಯದ ಮೇಲೆ ಮಂಗಪದಣ್ಣಾಯಕನು ದಾಳಿ ಮಾಡಿದ ಸಮಯದಲ್ಲಿ ಹೈವ ಅರಸನ ಅಪ್ಪಣೆಯಂತೆ ಕಾದಿ ಮಡಿದ 'ಕಾಳಗದೆಡೆ ರಕ್ಕಸ'ನೆಂತಿದ್ದ ಜಕ್ಕಣ್ಣ (ನಂ. ೧೦೫), ಕೊರಗೋಡಿ (ಶಿವಮೊಗ್ಗೆ ಜಿಲ್ಲೆ) ನ ತುರುಗಾಳೆಗದಲ್ಲಿ ಕಾದಿ ವೀರಸ್ವರ್ಗವನ್ನೇರಿದ ದೇವಗೌಡ-ಮಲ್ಲಗೌಡ ಎಂಬ ಅಣ್ಣತಮ್ಮಂದಿರು (ನಂ. ೪೫) ಇವರೇ ಮೊದಲಾದವರನ್ನು ಈ ಸಂಚಯದಲ್ಲಿ ಕಾಣಬಹುದು.

ಜಿತೇನ ಲಭ್ಯತೇ ಲಕ್ಷ್ಮೀರ್ಮೃತೇನಾಪಿ ಸುರಾಂಗನಾ ।
ಕ್ಷಣವಿಧ್ವಂಸಿನೀ ಕಾಯೇ ಕಾ ಚಿಂತಾ ಮರಣೇ ರಣೇ ॥

ಎಂದು ತಮ್ಮ ಒಡೆಯರಿಗಾಗಿ, ತಮ್ಮ ನಾಡಿಗಾಗಿ, ತಮ್ಮ ಜನರ ಕಲ್ಯಾಣಕ್ಕಾಗಿ ಜೀವಕ್ಕೆ ಸಂಚಾಕಾರ ಕೊಟ್ಟು ಹೋರಾಡುವ ಕಡುಗಲಿಗಳಾಗಿದ್ದರವರು. ವೀರರ ಪ್ರತಾಪವನ್ನೂ ಶೌರ್ಯವನ್ನೂ ಸಮರಾಂಗಣವನ್ನೂ ಆವೇಶಯುಕ್ತವಾದ ಶೈಲಿಯಲ್ಲಿ, ಸಿಂಹಗರ್ಜನೆಯಂತಹ ಬಂಧದಲ್ಲಿ ಓದುಗರ ಮೈಯುಬ್ಬುವಂತೆ ಶಾಸನಕವಿಗಳು ವರ್ಣಿಸಿರುವ ಆ ಕಾಲದಲ್ಲಿ ಜನಜೀವನವು ಧರ್ಮಪ್ರಧಾನವಾಗಿದ್ದಂತೆ ಕ್ಷಾತ್ರವೃತ್ತಿ ಪ್ರಧಾನವೂ ಆಗಿದ್ದಿತೆಂಬುದು ನಿರ್ವಿವಾದ.

ಜನರು ಅತ್ಯಂತ ಭಾವಿಕರಾಗಿದ್ದರು. ದೇವಗುರುಗಳಲ್ಲಿ ಭಕ್ತಿ, ತೀರ್ಥಕ್ಷೇತ್ರಗಳ ಪಾವಿತ್ರ್ಯದಲ್ಲಿ ವಿಶ್ವಾಸ, ದೇವರ ವಿಷಯದಲ್ಲಿ ಜನಜನಿತವಾಗಿದ್ದ ನಾನಾ ವಿಧವಾದ ಮಹಿಮೆಗಳಲ್ಲಿ ನಂಬುಗೆ, ಪವಾಡ ಕಥೆಗಳಲ್ಲಿ ಆಸಕ್ತಿ, ಪೌರಾಣಿಕ ವ್ಯಕ್ತಿ-ವಿಷಯಗಳಲ್ಲಿ ಪೂಜ್ಯಭಾವನೆ, ಲೋಕವಿಲಕ್ಷಣವಾದ ಸಂಗತಿಗಳಲ್ಲಿ ಒಂದು ಬಗೆಯ ಮುಗ್ಧಕಲ್ಪನೆ ಆಗಿನ ಜನರಲ್ಲಿದ್ದವು. ಕುರುವತ್ತಿಯ ಹತ್ತಿರ ತುಂಗಭದ್ರಾ ನದಿ

ಪಶ್ಚಿಮದಿಕ್ಕಿಗೆ ಹರಿಯುತ್ತಿದ್ದುದರಿಂದ ಅದು ಪವಿತ್ರಸ್ಥಳವೆಂದೂ, ಆದುದರಿಂದಲೇ ಸಾಕ್ಷಾತ್ ಶಿವನು ಅಭಿವನ ಸೋಮೇಶ್ವರನೆಂಬ ಹೆಸರಿನಿಂದ ಅಲ್ಲಿ ನೆಲಸಿದ್ದಾನೆಂದೂ ತಿಳಿಯಲಾಗಿತ್ತು. ಆಗಾಗ ಆಳಿದ ಅರಸರು ಪುರಾಣಕಾಲದ ಸೂರ್ಯ-ಚಂದ್ರ-ಇಂದ್ರ ವಂಶಗಳ ಬಳ್ಳಿಗೆ ಸೇರಿದವರೆಂದು ಹೇಳುವ ಆಖ್ಯಾಯಿಕೆಗಳು (ಉದಾ : ಚಾಳುಕ್ಯರು ಚಂದ್ರವಂಶದವರು, ಸಿಂದರು ಇಂದ್ರವಂಶದವರು) ರಾಜ-ಪ್ರಜೆಗಳಿಬ್ಬರಿಗೂ ಅಭಿ-ಮಾನಾಸ್ಪದವಾಗಿದ್ದವು. ಹಾಗೆಯೆ ತಮ್ಮ ತಮ್ಮ ಪ್ರದೇಶಗಳಲ್ಲಿರುವ ತೀರ್ಥಕ್ಷೇತ್ರಗಳ ಹಾಗೂ ದೇವದೇವತೆಗಳ ಹಿರಿಮೆಯು ಬಗೆಗೂ ಜನರಿಗೆ ಹಿರಿದಾದ ಹೆಮ್ಮೆ. ಅಂತೆಯೆ ಈ ನಾಡಿನಲ್ಲಿ ಊರು, ಹೊಳೆ,ದೇವರುಗಳಿಗೆ ದಕ್ಷಿಣಕಾಶಿ,ದಕ್ಷಿಣಭಾಗೀರಥಿ, ದಕ್ಷಿಣ ಸೋಮನಾಥ ಇತ್ಯಾದಿಯಾದ ಹೆಸರುಗಳು ರೂಢಿಯಾಗಿದ್ದುದು ಕಂಡು ಬರುತ್ತದೆ. ಕಲಬುರ್ಗಿ ಜಿಲ್ಲೆಯ ಏವೂರು ಶಾಸನದಲ್ಲಿ (ನಂ. ೩೨) ಅಲ್ಲಿಯ ಸ್ವಯಂಭುದೇವರು ಹಾವು ಚೇಳುಗಳ ವಿಷವನ್ನೂ ಸುಟ್ಟಗಾಯಗಳ್ನೂ ಪರಿಹಾರ ಮಾಡುವನೆಂದೂ, ಲಕ್ಷ್ಮೇಶ್ವರ ಶಾಸನದಲ್ಲಿ (ನಂ. ೭೫) ಅಲ್ಲಿಯ ಸ್ವಯಂಭು ದಕ್ಷಿಣ ಸೋಮನಾಥನು ಒಂದೊಂದು ಅಕ್ಕೀಕಾಳಿಂದ ಪೂಜಿಸಿದರೆ ಒಂದೊಂದು ಕೊಳಗ ಫಲ ಕೊಡುವನೆಂದೂ ಉಲ್ಲೇಖಗಳಿವೆ. ಈ ಬಗೆಯ ಬೇರೆ ಬೇರೆ ಮಹಿಮೆಯ ಆಖ್ಯಾಯಿಕೆಯುಳ್ಳ ದೇವರು ನಮ್ಮಲ್ಲಿ ಇನ್ನೂ ಅನೇಕವಾಗಿ ಕಂಡುಬರುತ್ತವೆ. ಜನರು ತಮ್ಮ ವಿವಿಧ ಅಪೇಕ್ಷೆಗಳನ್ನು ಈಡೇರಿಸಿಕೊಳ್ಳುವುದಕ್ಕಾಗಿ ವಿವಿಧ ಮಹಿಮೆಯ ದೇವರನ್ನು ಹರಕೆಹೊತ್ತು ಆರಾಧಿಸುತ್ತಿದ್ದರೆಂಬುದು ಇದರಿಂದ ವ್ಯಕ್ತವಾಗುತ್ತದೆ. ಸಿಗ್ಗಾವಿ ತಾಲೂಕಿನ ಹೊಟ್ಟೂರಿನ ಮಾರಗಾವುಂಡನು (ಕ್ರಿ. ವ. ೧೦೩೭-೬೭) ಕಾಲಿಲ್ಲದವರಿಗೆ ನಿಜಶಕ್ತಿಯಿಂದ ಕಾಲನ್ನು ಕೊಡುವ ಸಿದ್ಧಿಯನ್ನು ಪಡೆದವನಾಗಿದ್ದನೆಂಬ ಆಖ್ಯಾಯಿಕೆಯಿತ್ತು (ನಂ. ೨೧, ೨೯). ಆದರಿಂದ ಆ ಊರ ಸುತ್ತುಮುತ್ತಲಿನ ಜನರು ಅವನಲ್ಲಿ ಆದರ-ಶ್ರದ್ಧೆಗಳನ್ನಿಟ್ಟಿದ್ದರು; ದೈವೀಗುಣವುಳ್ಳ ಅವನನ್ನು ನಡುನಾಡ ತೀರ್ಥ, ದಕ್ಷಿಣ ಸೋಮನಾಥ, ಕಲಿಯುಗಮಹೇಶ್ವರ ಎಂದು ಭಾವಿಸಿದ್ದರು.

ಇನ್ನು ಇದರಲ್ಲಿಯ ಶಾಸನಗಳ ಸಾಹಿತ್ಯಿಕ ಪ್ರೌಢಿ, ವೈವಿಧ್ಯಗಳ ಬಗೆಗೆ, ಶಾಸನ ಕವಿಗಳ ಬಗೆಗೆ, ಶಾಸನಗಳಲ್ಲಿ ಉಲ್ಲಿಖಿತರಾದ ಭಾಷಾ ಪಂಡಿತರು, ಕವಿಗಳ ಬಗೆಗೆ, ಈಷತ್ ಸಮಾಲೋಚನೆ ಮಾಡುವ ಕೇವಲ ಸಾಂಸ್ಕೃತಿಕ ಮತ್ತು ರಾಜಕೀಯ ದೃಷ್ಟಿಯಿಂದ ಇಲ್ಲಿ ಆರಿಸಿದ ಶಾಸನಗಳಲ್ಲಿ ಕೆಲವೊಂದನ್ನು ಬಿಟ್ಟರೆ, ಉಳಿವ ಬಹುಮಟ್ಟಿನ ಗದ್ಯಪದ್ಯಭಾಗಗಳು ಪ್ರಶಂಸನೀಯ ಸಾಹಿತ್ಯಗುಣಗಳಿಂದ ಮನೋಹರವಾಗಿರುವವೆಂದು ಹೇಳಬಹುದು. ಪಂಪ, ರನ್ನ, ಜನ್ನ, ಆಂಡಯ್ಯ ಮೊದಲಾದ ಉದ್ದಾಮ ಕವಿಗಳ ಕೃತಿಗಳಲ್ಲಿ ಕಂಡುಬರುವ ಪ್ರೌಢವಾದ ಶೈಲಿ, ಉಪಮೆ, ಉತ್ಪ್ರೇಕ್ಷೆ, ಶ್ಲೇಷೆ ಮುಂತಾದ ನಾನಾ ಅಲಂಕಾರಗಳಿಂದ ಸುಂದರವಾದ ವರ್ಣನೆ ಭವ್ಯವಾದ ಕಲ್ಪನಾವಿನ್ಯಾಸ, ಹೃದ್ಯವಾದ ಭಾವಸೌಂದರ್ಯ ಮೊದಲಾದ ಗುಣ,

ಗಳು ಶಾಸನಗಳಲ್ಲಿ ಕಂಗೊಳಿಸುತ್ತಿವೆ. ಸಾಮಾನ್ಯವಾಗಿ ಪ್ರತಿಯೊಂದರಲ್ಲಿ ವೀರರ ಪ್ರತಾಪ, ಸ್ಥಾನಾಚಾರ್ಯರ ಪ್ರಭಾವ, ದೇವಾಲಯಗಳ ಘನತೆ ಮೊದಲಾದವು ವರ್ಣಿತವಾಗಿದ್ದರೂ ಒಂದೊಂದರಲ್ಲೂ ಒಂದಿಲ್ಲೊಂದು ವಿಶೇಷವು ಕಾಣದಿರುವುದಿಲ್ಲ. ಶಾಸನವನ್ನು ಬರೆಯುವ ನೆವದಿಂದ ಕೆಲವು ಶಾಸನಕವಿಗಳು ಸ್ಥಳಪುರಾಣವನ್ನು ಹೇಳಿದ್ದಾರೆ, ಕೆಲವರು ಕತೆಗಳನ್ನು ಹೇಳಿದ್ದಾರೆ, ಕೆಲವರು ಸುಭಾಷಿತಗಳನ್ನು ಹೇಳಿದ್ದಾರೆ, ಕೆಲವರು ಪೌರಾಣಿಕ ವಿಷಯಗಳನ್ನು ಹೇಳಿದ್ದಾರೆ, ಕೆಲವರು ಸ್ವಭಾವಚಿತ್ರಗಳನ್ನು ಕೊಟ್ಟಿದ್ದಾರೆ. ಒಳ್ಳೆಯ ಗುಣಗಳನ್ನು ಮೇಲೆತ್ತಿ ಮೆರಸಿದ್ದಾರೆ, ಅವಗುಣಗಳನ್ನು ವಿಡಂಬಿಸಿ ದೂರಿದ್ದಾರೆ. ಒಟ್ಟಾರೆ, ನಮ್ಮ ಶಾಸನ ಸಾಹಿತ್ಯ ಪ್ರಪಂಚದಲ್ಲಿ ನೂರಾರು ಕಿರುಗಬ್ಬಗಳು, ಚುಟುಕುಗಬ್ಬಗಳು ರಸಗಳಿಂದ ಹೃದಯ ವನ್ನೂ ಅರ್ಥಗಳಿಂದ ಬುದ್ಧಿಯನ್ನೂ ತಣಿಸುತ್ತಿವೆ, ಅರಳಿಸುತ್ತಿವೆ. ಈ ಸಾಹಿತ್ಯದ ರಸಾಸ್ವಾದನೆ ಮಾಡಿ ತೃಪ್ತಿಗೊಂಡ ಮನಸ್ಸು

ಪದನಱಿದು ನುಡಿಯಲುಂ ನುಡಿ-
ದುದನಱಿದಾರಯಲುಮಾರ್ಪರಾ ನಾಡವರ್ಗಳ್
ಚದುರರ್ ನಿಜದಿಂ ಕುಱಿತೋ-
ದದೆಯುಂ ಕಾವ್ಯಪ್ರಯೋಗ ಪರಿಣತಮತಿಗಳ್

ಎಂಬ ನೃಪತುಂಗನ ಮಾತನ್ನು ನೆನೆದು ತಲೆದೂಗುತ್ತದೆ. ಇದು ಅವನು ತನ್ನ ನಾಡವರ ಬಗೆಗೆ ಹೆಮ್ಮೆಯಿಂದ ಹೇಳಿಕೊಂಡ ಅತ್ಯುಕ್ತಿಯಲ್ಲ ಎಂದು ನಾಡಿನ ತುಂಬಾ ಹರಡಿರುವ ಶಿಲಾಶಾಸನಗಳು ಮನವರಿಕೆ ಮಾಡಿಕೊಡುತ್ತವೆ. ಮಹಾಕವಿಗಳಾದ ಜನ್ನ, ಅಭಿನವಪಂಪ ಇವರೂ ಕೆಲವು ಶಾಸನಗಳನ್ನು ರಚಿಸಿದ್ದಾರೆಂದು ತಿಳಿದಿದೆ. ಆ ಕೆಲವನ್ನು ಬಿಟ್ಟರೂ ಅವರ ರಚನೆಗಳಿಗೆ ಸರಿಸಮನಾದ ಮಿಕ್ಕ ವಿಪುಲ ಶಾಸನಗಳನ್ನು ರಚಿಸಿದವರು ನಾಡಕವಿಗಳೇ ಆಗಿದ್ದಾರೆ.

ಶಾಸನ ಕಾವ್ಯಗಳು ಐತಿಹಾಸಿಕವಾದರೂ ಲಲಿತಕಾವ್ಯಗಳಾಗಿವೆ. ನಮ್ಮ ನಾಡು, ನಮ್ಮ ನದಿಗಳು, ನಮ್ಮ ಊರುಗಳು, ನಮ್ಮ ಗುಡಿಗಳು, ನಮ್ಮ ದೇವರು, ನಮ್ಮ ರಾಜರು, ನಮ್ಮ ಜನಗಳನ್ನು ಸಂದರವಾಗಿ ಅಭಿಮಾನ ಪೂರ್ವಕವಾಗಿ ಆದರೂ ವಾಸ್ತವವಾಗಿ ವರ್ಣಿಸುವುದರಿಂದ ಇವು ನಾಡುಗಬ್ಬಗಳಾಗಿವೆ. ಶಾಸನಸ್ಥವಾದ ಊರು ಎಲ್ಲಿದೆ ಎಂಬುದನ್ನು ಹೇಳುವಾಗ ಅನೇಕರು ಸಾಗರವೇಷ್ಟಿತ ಜಂಬೂದ್ವೀಪ, ಅದರ ನಡುವೆ ಮೇರು, ಅದರ ದಕ್ಷಿಣದಲ್ಲಿ ಭರತಕ್ಷೇತ್ರ, ಅದರಲ್ಲಿ ಕುಂತಳ (ಕರ್ನಾಟಕ) ದೇಶ, ಅದರಲ್ಲಿ ಇಂತಹ ನಾಡು (ಪುಲಿಗೆಱೆ-೩೦೦, ಬೆಳ್ವಲ-೩೦೦ ಇ.), ಅದರಲ್ಲಿ ಇಂಥ ಇಂಥ ಕಂಪಣದಲ್ಲಿ ಈ ಊರು ಎಂಬುದಾಗಿ ವಿವರವಾದ ಭೌಗೋಲಿಕ ಜ್ಞಾನವನ್ನು ಮಾಡಿಕೊಡುತ್ತಾರೆ (ಉದಾ: ರೋಣ ಶಾ. ೮೩, ಮುತ್ತಿಗೆ ಶಾ. ೯೦, ಕುರುಗೋಡು ಶಾ. ೮೨ ಇ.). ಚಾಳುಕ್ಯರು ಚಂದ್ರವಂಶದವರೆಂಬು

ದನ್ನು ಹೇಳುವಾಗ ಸಪ್ತದ್ವೀಪಗಳು, ಸಪ್ತಸಾಗರಗಳು, ಸಪ್ತದ್ವೀಪಗಳ ಆದಿರಾಜರು, ಅವರ ಸಂತತಿಯಿಂದ ಹಬ್ಬಿದ ಮಾನವ ಕುಲ, ಏಳು ಮನುಗಳು, ಪೃಥ್ವಿಯ ಮೇಲಿನ ನವಖಂಡಗಳು ಮೊದಲಾದ ಪೌರಾಣಿಕ ಪೂರ್ವವೃತ್ತಾಂತವನ್ನು ಇಟಗಿ ಶಾಸನವು ಬಹುವಿಶದವಾಗಿ ಹೇಳುತ್ತದೆ (ನಂ. ೫೫). ಕದಂಬವಾಡಿನಾಡ (ಕದಂಬಳಿಗೆ-೧೦೦೦ ದ) ಮಧ್ಯದಲ್ಲಿದ್ದ ಉಚ್ಚಂಗಿ ಪರ್ವತಕ್ಕೆ ಕೃತ-ತ್ರೇತಾ-ದ್ವಾಪರ ಯುಗಗಳಲ್ಲಿ ಮೇಘನಾದ, ವೀರಕನಕಗಿರಿ, ಉತ್ತುಂಗ ಪರ್ವತ ಎಂದು ಹೆಸರುಗಳಿದ್ದ ವೆಂದೂ ಕಲಿಯುಗದಲ್ಲಿ ಉಚ್ಚಂಗಿಯಬ್ಬೆ ಮೊದಲಾದ ಮೂವರು ಕನ್ನೆಯರು ಇಲ್ಲಿ ತಪಸ್ಸು ಮಾಡಿದುದರಿಂದ ಉಚ್ಚಂಗಿಯ ಪರ್ವತವೆಂದು ಹೆಸರಾಯಿತೆಂದೂ ಆ ಬೆಟ್ಟದ ಚರಿತ್ರೆಯ ಪುರಾತನತ್ವವನ್ನು ಆ ಊರ ಶಾಸನವು ಅರುಹುತ್ತದೆ (ನಂ. ೨೮).

ಇಲ್ಲಿಯ ಶಾಸನಕವಿಗಳು ಸುಂದರವಾದ ಹಲವಾರು ಶಬ್ದ ಚಿತ್ರ, ಸ್ವಭಾವಚಿತ್ರ, ವ್ಯಕ್ತಿ ಚಿತ್ರ, ವರ್ಣನಾಚಿತ್ರಗಳನ್ನು ಶಾಸನಗಳಲ್ಲಿ ಬರೆದಿಟ್ಟಿದ್ದಾರೆ. ಆ ಕಾಲದ ಜನ-ಜೀವನದಲ್ಲಿ ಎಂತಹ ವಿಚಾರಧಾರೆ ಪ್ರವಹಿಸುತ್ತಿತ್ತು, ಆಗಿನವರ ಉಚ್ಚ ಆದರ್ಶಗಳು ಯಾವ ಬಗೆಯವಿದ್ದವು, ಭಾವನೆಗಳು ಕಲ್ಪನೆಗಳು ಎಂತಹವಿದ್ದವು, ಈ ನಾಡಿನಲ್ಲಿ ಆಳಿದ ರಾಜರು ದಂಡನಾಥರು ಎಷ್ಟು ಪ್ರಭಾವಿಗಳಿದ್ದರು—ಇತ್ಯಾದಿ ವಿಷಯ ಗಳು ಆ ಚಿತ್ರಗಳಲ್ಲಿ ಬಿಂಬಿಸಲ್ಪಟ್ಟಿವೆ. ಮಾದರಿಯ ಬಾಳು ಅಥವಾ ಜೀವನ ಎಂದರೆ ಹೇಗಿರುವುದು ಎಂಬುದಕ್ಕೆ ರೋಣದ ಶಾಸನವು (ನಂ. ೧೯) ಮಾಚಿಮಯ್ಯನನ್ನು ಎತ್ತಿ ತೋರಿಸುತ್ತಿದೆ :

ಒಡಲಂ ತಾಂ ಸುಚರಿತ್ರದೊಳ್ ಧನಮನುದ್ಯದ್ದಾನದೊಳ್ನಿನ್ನಿಯಂ
ನುಡಿಯೊಳ್ಭಕ್ತಿಯನೆಯ್ದೆ ತಂದೆಯೊಳುದಗ್ರಂ ಚಿತ್ತಮುಂ ಸಂತತಂ
ಮೃಡಪಾದಾಬ್ಜದೊಳಾವಗಂ ಬ್ಯಸನಮುಂ ಸದ್ಧರ್ಮದೊಳ್ತಾಟ್ಟಿದಂ
ಗಡದೇವಣ್ಣಪೆನಣ್ಣ ಸಚ್ಚರಿತಮುಂ ಶ್ರೀ ಮಾಚಿಮಯ್ಯಾಂಕನ ॥ ೬೨ ॥

ಇದೇ ಮೇರೆಗೆ ಸತ್ಯ, ಛಲ, ಧರ್ಮ, ಬೀರ, ಸದ್ಗುಣ, ಚಾಗ ಮೊದಲಾದ ಆದರ್ಶ ಗುಣಗಳಿಂದ ಕಾಳಿದಾಸದಂಡಾಧಿಪನ ವ್ಯಕ್ತಿತ್ವವು ಕಂಗೊಳಿಸುತ್ತಿದೆ (ಪ. ೧೧೯) ಏವೂರು ಶಾಸನದಲ್ಲಿ, ಸಮಸ್ತಹಿತಹೇತುಭೂತನಾದ ರವಿಗದಂಡಾಧಿಪನ ಬಹು-ಗುಣಸಂಪನ್ನವಾದ ವಿಶಿಷ್ಟವ್ಯಕ್ತಿತ್ವವಂತೂ ಅತ್ಯಂತ ಸುಂದರವಾಗಿ ಮನಂಬುಗುವಂತೆ ಚಿತ್ರಿತವಾಗಿದೆ (ನಂ. ೩೨). ಬ್ರಹ್ಮನು ಅವನನ್ನು (ರವಿಗನನ್ನು) ಅಮೃತ, ಚಂದನ, ಬೆಳ್ದಿಂಗಳನ್ನು ಕೂಡಿಸಿ ಮಾಡಿದ್ದಾನೆ ಎಂದು ಕವಿ ಬಣ್ಣಿಸಿದ್ದಾನೆ (ಪ. ೧೪೭). ಅಷ್ಟು ಸವಿ, ಅಷ್ಟು ತಂಪು, ಅಷ್ಟು ಬೆಳುಪು ಅವನ ವ್ಯಕ್ತಿತ್ವ. ಈ ರವಿಗನಿದ್ದ ನಾಡು,

ಇದು ಕಲಿಕಾಲದಂದಮಣಮಲ್ಲದು ಧರ್ಮದ ಬಳ್ಳಿ ಕೂಡೆ ಪ-
ರ್ವಿದುದು ಖಿಮತಾಂಕುರಂ ಬಳೆದು ಪಲ್ಲವಿಸಿತ್ತು ಪರೋಪಕಾರ ಸ-

ಸ್ಯದ ತೆನೆ ಕಾಣಲಾದಪುದು ದಾನಘನಂ ಕಲ್ತಿದಪ್ಪುದಣ್ಣ ನೋ-
ಡಿದು ರವಿದೇವನೆಂಬ ಪುರುಷೋತ್ತಮನಿಲ್ದ್ದ ಧರಿತ್ರಿಯಾಗದೇ ॥ ೧೬೯ ॥

ಹೆಣ್ಣುಮಕ್ಕಳಿಗೆ ಪಾತಿವ್ರತ್ಯವು ಶ್ರೇಷ್ಠಧರ್ಮವೆಂಬುದು ಸಾಮಾಜಿಕ ಆದರ್ಶಗಳಲ್ಲಿ ಒಂದಾಗಿತ್ತು. ಸೀತೆ, ದ್ರೌಪದಿ, ಅರುಂಧತಿ, ಸಾವಿತ್ರಿ ಮೊದಲಾದ ಪುರಾಣ ಮಹಿಳೆಯರನ್ನು ಪಾತಿವ್ರತ್ಯಕ್ಕೆ ಮಾದರಿಯಾಗಿ ಎಣಿಸಿದ್ದರು. ಚಾಳುಕ್ಯ ೬ ನೆಯ ವಿಕ್ರಮಾದಿತ್ಯನ ಪತ್ನಿ ಜಾಕಳದೇವಿ

ಕಲಿಕಾಲ ಪಾರ್ವ್ವತಿ, ಅಭಿನವ ಸರಸ್ವತಿ,
ರಾಯಚೇತೋವಶೀಕರಣ ಕರಣ ವಿದ್ಯಾಧರಿ, ಸಕಳಕಳಾಧರಿ,
ಸೀತಾದ್ಯನೇಕ ಮಹಾಸತೀಜನ ಪತಿಬ್ರತಾಚಾರ ಶೀಳೋದಾರ-
ವರ್ಣನ ಕಥಾಪ್ರಸಂಗೆ,
ಜಿನಗಂಧೋದಕ ಪವಿತ್ರೀಕೃತೋತ್ತಮಾಂಗೆ,

ಎಂದು ವರ್ಣಿತಳಾಗಿದ್ದಾಳೆ. ಆಕೆಯ ವ್ರತವನ್ನು ಕೆಡಿಸುವೆನೆಂದು ಅವಳ ಗಂಡನಾದ ವಿಕ್ರಮಾದಿತ್ಯ ಛಲತೊಟ್ಟು ಪ್ರಯತ್ನಿಸಿ ಸೋತನೆಂಬ ಉಲ್ಲೇಖ ಸೇಡಿಂಬದ ಶಾಸನದಲ್ಲಿದೆ (ನಂ. ೪೪). ಅಸಹಾಯಶೂರನೂ ಸಾಕ್ಷರಿಕನಿಧಾನನೂ ಆಗಿದ್ದ ಹಬ್ಬೆಯನಾಯಕನ ವರ್ಣನಾರಂಭದಲ್ಲಿ ಒಂದು ಕಂದ ಪದ್ಯ ಅತ್ಯಂತ ಮಾರ್ಮಿಕವಾಗಿದೆ (ಸಿರಸಂಗಿ ಶಾ. ೮೮) :

ಪಡೆವಡೆ ಗುಣಿ ಪಬ್ಬಯ್ಯನ । ಪಡಿಯೆನಿಸುವ ಸುತನನೊಸೆದು ಬಲ್ಲವ್ವೆಯವೋಲ್ ॥
ಪಡೆವುದು ಕೋಟಿಗೆ ವಕ್ಕಳು.। ಪಡೆಯದೊಡೇಂ ಬಂಜೆಯಂ ನೃಪದ್ದಂಡಿಪರೇ ॥

ಹೊಯ್ಸಳ ವಿಷ್ಣುವರ್ಧನನ ಶತ್ರುಭಯಪ್ರದವಾದ ಪ್ರತಾಪವನ್ನು ಹಾಗೂ ರಿಪುವಿಜೇತೃವಾದ ರಟ್ಟ ಕಾರ್ತವೀರ್ಯನ ವಿಜಯವೈಭವವನ್ನು ಬಣ್ಣಿಸುವ ಈ ಕೆಳಗಣ ಎರಡು ಪದ್ಯಗಳಲ್ಲಿ ಶಾಸನ ಕವಿಗಳ ಕಲ್ಪಕತೆಯ ನಾವೀನ್ಯ ಕಂಡುಬರುತ್ತದೆ. ಇವುಗಳಲ್ಲಿ ಅವರು ಚಿತ್ರಿಸಿರುವ, ವಿಷ್ಣುವರ್ಧನನಿಗೆ ಅಂಜಿ ಅಡಗಿದ ಆತನ ಹಗೆಗಳ ಎದೆಯಲ್ಲಿ ತುಂಬಿದ ದಿಗಿಲಿನ ಚಿತ್ರ ಹಾಗೂ ಕಾರ್ತವೀರ್ಯನ ಸೆರೆಯಲ್ಲಿದ್ದ ಆತನ ಹಗೆಗಳ ವ್ಯಾಕುಲ ಮನಃಸ್ಥಿತಿಯ ಚಿತ್ರಗಳು ಭಾವಗರ್ಭಿತವಾಗಿವೆ :

ದುರ್ಬ್ಬಾರಾರಿಧರಾಧರೇಂದ್ರಕುಲಿಶಂ ಶ್ರೀವಿಷ್ಣುಭೂಪಾಳನಾ-
ದ್ದುರ್ಬ್ಬಿಟ್ಟಲ್ ಸೆಡೆದೋಡಿ ಪೋಗಿ ಭಯದಿಂದಾ ಬಂದನೀ ಬಂದನೆಂ-
ದುರ್ಬ್ಬೀಪಾಳರ ಕಂಗೆ ಲೋಕಮನಿತುಂ ತದ್ರೂಪಮಾಗಿರ್ಪ್ಪಿನಂ
ಸರ್ಬ್ಬಂ ವಿಷ್ಣುಮಯಂ ಜಗತ್ತೆನಿಪಿದೇಂ ಪ್ರತ್ಯಕ್ಷಮಾಗಿರ್ದ್ದುದೋ ॥ ೨೮೬ ॥

ಈ ಕಮನೀಯ ವಾಜಿಚಯಮೀ ಕರಿಸಂಕುಳಮೀ ವಿಳಾಸಿನೀ-
ಲೋಕಮಿವೆಮ್ಮವಾ ಕವಿಯ ಕಾಳೆಗದೊಳ್ ಬಯಲಾಜಿಯೊಳ್ ಪುರಾ-
ನೀಕದ ಯುದ್ಧದೊಳ್ಪಿಡಿದಸಿಂತಿವನೀ ಕಲಿ ಕಾರ್ತವೀರ್ಯ್ಯನೆಂ-
ದಾಕುಳಮಾಗಿ ನೋಡುವುದು ಬಂಧನಶಾಲೆಯೊಳಿರ್ದ್ದರಿಬ್ರಜಂ ॥ ೪೬೬ ॥

ನಮ್ಮ ಶಾಸನ ಕವಿಗಳು ಸ್ವದೇಶ-ಸ್ವಜನ-ಸದ್ಗುಣಾಭಿಮಾನಿಗಳಾಗಿದ್ದ ರೆಂಬುದು ಈ ಸಾಹಿತ್ಯ ಸಂಚಯದ ಉದ್ದಕ್ಕೂ ಕಂಡುಬರುವುದು. ರಾಜನಿಂದ ರಂಕನವರೆಗೆ, ಸಮಾಜದ ಉಚ್ಚಶ್ರೇಣಿಯುವರಿಂದ ನಿಮ್ನಶ್ರೇಣಿಯುವರ ವರೆಗೆ ಎಲ್ಲ ರನ್ನೂ ಅವರವರ ಗುಣಗಳಿಗೆ, ಅವರವರ ಸತ್ಕಾರ್ಯಗಳಿಗೆ ಪ್ರಾಧಾನ್ಯ ಕೊಟ್ಟು ಮನದುಂಬಿ ಬಣ್ಣಿಸುತ್ತಾರೆ. ಕುರ್ತಕೋಟಿಯ ಇನ್ನೂರ್ವರು ಮಹಾಜನರ ಸೇವಾ ಕಾರ್ಯದಲ್ಲಿ 'ಪೇಸಣ ಹನುಮಂತ'ನೆನಿಸಿದ

ದೇವದ್ವಿಜ ಗುರುಭಕ್ತಂ
ಭೂವಿಶ್ರುತ ಕೀರ್ತಿಯೆನಿಪ ನಾವಿದ ದಾಸಂ

ವಸುಧೆಗೆ ತಿಳಕವಾಗುವಂತೆ ದೇವಾಧಿದೇವನ ಗುಡಿಯನ್ನು ಕಟ್ಟಿಸಿದುದನ್ನು ಉಲ್ಲೇಖಿಸುವಾಗ ಆತನ ಸದ್ವಂಶವನ್ನು ಕೊಂಡಾಡಿದ್ದಾನೆ ಕವಿ (ನಂ. ೩೮, ಕ್ರಿ. ವ. ೧೦೮೭). ಕ್ರಿ. ವ. ಸು. ೯೮೦ರ ಸೊಗಲ ಶಾಸನದಲ್ಲಿ ಪರಹಿತಗುಣಚರಿತೆಯಾದ ಮಾತಾರತ್ನ ಎಂದೆನಿಸಿಕೊಂಡ ಧನಗರ ಗೋತ್ರದ ಕಂಚಿಯಬ್ಬೆಯ ಉಲ್ಲೇಖ ಬರುತ್ತದೆ. ಅವಳ ವರ್ಣನ ಪದ್ಯ ಇಂತಿದೆ :

ಹರಚರಣಾಬ್ಜಭೃಂಗಿ ಕಪಟೋದಯವರ್ಜಿತ ನಿರ್ಮ್ಮಲಾಂಗಿ ಭಾ-
ಸುರತರ ಮೂರ್ತ್ತಿ ನಿರ್ಮಳಿನಕೀರ್ತ್ತಿ ದಯಾಪರೆ ದಾನಧರ್ಮ್ಮ ತ-
ತ್ಪರಗುಣಯುಕ್ತೆ ದೇವಗುರುಭಕ್ತೆ ಸುಗೋತ್ರಪವಿತ್ರೆಯೆಂದು ವಿ-
ಸ್ತರದೊಳೆ ಕೀರ್ತ್ತಿಕುಂ ವಸುಧೆ ಸಂತಸದಿಂದಮೆ ಕಂಚಿಕಬ್ಬೆಯ ॥ ೫೫ ॥

ಹಣವುಳ್ಳ ಸಿರಿವಂತರೇನೋ ಯಾವ ಕಾಲಕ್ಕೂ ಅನೇಕರು ಇದ್ದೇ ಇರುತ್ತಾರೆ. ವಿದ್ಯಾಸಂಸ್ಥೆಗಳಿಗೆ, ಪಂಡಿತರಿಗೆ, ಇತರ ಧರ್ಮಕಾರ್ಯಗಳಿಗೆ ಕೊಡುವ ಬುದ್ಧಿ ಎಲ್ಲರಿಗೂ ಇರುವುದಿಲ್ಲ. ಅವರ ಹಣ ದೊರೆಗಳ ಪಾಲು, ಕಳ್ಳರ ಪಾಲು, ಮಣ್ಣಿನ ಪಾಲು. ಅಂತಹ ಲೋಭಿಗಳಿಂದ ಏನು ಪ್ರಯೋಜನ? ಅವರು ವಿಡಂಬನೆಗೇ ಪಾತ್ರರು. ಗುಣಗ್ರಾಹಿಗಳಾದ ಕೊಡುಗೈದೊರೆಗಳನ್ನು ಹೊಗಳುವ ಸಂದರ್ಭದಲ್ಲಿ ಲೋಭಿಗಳನ್ನು ನಮ್ಮ ಶಾಸನಕವಿಗಳು ಚೆನ್ನಾಗಿ ವಿಡಂಬಿಸಿದ್ದಾರೆ. ಬಳ್ಳಾರಿ ತಾಲೂಕು ಕೋಳೂರು ಗ್ರಾಮದ ಶಾಸನದಲ್ಲಿ, ಬೇಡಿದವರ ಎಡರನ್ನು ಕಳೆಯಲೆಂದು ಗಳಿಸುತ್ತಿದ್ದ ಆ ಊರ ಪ್ರಭುವಾದ ಮಾದಿಯನ್ನು ಹೊಗಳುವಾಗ ಕವಿ ಚಿತ್ರಿಸಿದ ಜಿಪುಣರ ನಡೆವಳಿಕೆಯ ವಿಡಂಬನ ಚಿತ್ರವನ್ನು ನೋಡಿರಿ (ನಂ. ೬೯, ಕ್ರಿ. ವ. ೧೧೪೭) :

ಪಣಮುಳ್ಳಂಗೆಲ್ಲಮುಂಟಂತೆಮಗೆ ಬಱಿದೆ ಬಂದಿಷ್ಟರುಂ ಶಿಷ್ಟರುಂ ಮಂ-
ತಣದಿಂ ಕುಳ್ಳಿರ್ದ್ದ ನೀಮೆನ್ನೊಳು ಪಡೆಯಲು ಪೇಳ್ವಂದಿರೇಯೊಯೆಸೀಯೆಂ
ಗುಣಿಗಳ್ಗೀವಂತು ನಾನೇಂ ಮರುಳೆ ಕುಡುವೆನೆನ್ನರ್ತ್ಥಮಂ ಭೂಮಿಪಾಳ-
ಗ್ರ್ಗಣಲೆಂಬೀ ಲೋಭನಂ ಬೇಡದೆ ಬುಧ ಕೊಡುವಂ ಮಾದಿಯಂ ಬೇಡು ನಿಚ್ಚಂ ॥

ಇದೇ ಬಗೆಯ ಲೋಭಿಯ ವಿಡಂಬನೆ ಮುನಿರಾಬಾದು ಶಾಸನದಲ್ಲಿ ಸಾಕ್ಷರೀಕ ಶುಕಚೂತಾರಾಮನಾದ ಸೋಮೇಶ್ವರ ಭಟ್ಟನ ಪ್ರಶಂಸಾಪದ್ಯದಲ್ಲಿಯೂ ಇದೆ (ನಂ.೩೯).

ಈ ರೀತಿಯಾಗಿ ಶಾಸನವಾಙ್ಮಯವನ್ನು ವಿವಿಧ ವಿಷಯಗರ್ಭಿತವಾಗಿ, ನಾನಾವರ್ಣರಂಜಿತವಾಗಿ, ರಸಭರಿತವಾಗಿ, ಪ್ರೌಢವಾಗಿ ಮಾಡಿದ ಶಾಸನಕವಿಗಳು ಎಲ್ಲರೂ ತಮ್ಮ ಹೆಸರನ್ನು ಹೇಳಿಕೊಂಡಿಲ್ಲ. ಈ ಸಂಚಯದಲ್ಲಿ ಬಂದಿರುವ ಶಾಸನಗಳಲ್ಲಿ ಕೆಲವುಗಳ ಕರ್ತೃಗಳ ಹೆಸರುಗಳು ಮಾತ್ರ ತಿಳಿದುಬರುತ್ತವೆ. ಆ ಕವಿಗಳಲ್ಲದೆ ಈ ಕಾಲದಲ್ಲಿ ಆಗಿಹೋದ ಬೇರೆ ಕೆಲವು ಕವಿಗಳ, ಭಾಷಾತಜ್ಞರ, ವ್ಯಾಕರಣ-ಪಂಡಿತರ, ಕಲಾವಿದರ ಉಲ್ಲೇಖಗಳು ಶಾಸನಗಳಲ್ಲಿ ಬಂದಿವೆ. ಅವರ ವಿಷಯವನ್ನು ಸಂಕ್ಷಿಪ್ತವಾಗಿ ಅವಲೋಕಿಸಿ ಈ ಪ್ರಸ್ತಾವನೆಯನ್ನು ಮುಗಿಸುತ್ತೇವೆ.

ಸೊಗಲ ಶಾಸನದಲ್ಲಿ (ಕ್ರಿ. ವ. ಸು. ೯೮೦) ಶಾಸನ ಕವಿ ತನ್ನನ್ನು 'ಕವಿತೇಶ ಮದಪ್ರಭಂಜನ' ಎಂದು ಹೇಳಿಕೊಂಡಿರುವುದರಿಂದ 'ಕವಿತೇಶ' ಎಂಬ ಒಬ್ಬ ಕವಿ ಇದ್ದನೆಂದೆನಿಸುತ್ತದೆ. ೧೦–೧೧ನೆಯ ಶತಮಾನದಲ್ಲಿ ಹುಟ್ಟಿದ ದಾನವುಲಪಾಡು ಶಾಸನದಲ್ಲಿ ದಂಡನಾಯಕ ಶ್ರೀವಿಜಯನು 'ಅನುಪಮ ಕವಿ' ಎಂದು ವರ್ಣಿತನಾಗಿದ್ದಾನೆ. ಮುಳುಗುಂದ ಶಾಸನವು (ಕ್ರಿ. ವ. ೧೦೫೩) ನಯಸೇನ ಪಂಡಿತನು ಶಬ್ದಶಾಸ್ತ್ರ ಪಾರಾವಾರಪಾರಗನಾಗಿದ್ದನೆಂದು, ಶಬ್ದಾನುಶಾಸನ, ಪಾಣಿನೀಯ, ಚಾಂದ್ರ, ಕೌಮಾರ ಮೊದಲಾದ ಸಂಸ್ಕೃತ ವ್ಯಾಕರಣಶಾಸ್ತ್ರಗಳಲ್ಲಿ ಆಯಾ-ಶಾಸ್ತ್ರಕಾರರಷ್ಟೇ ಬಲ್ಲಿದನಾಗಿದ್ದನೆಂದು ಹೇಳುತ್ತದೆ. ಕ್ರಿ ವ. ೧೦೮೧ರ ಲಕ್ಷ್ಮೇಶ್ವರ ಶಾಸನದಲ್ಲಿ ಕೀರ್ತಿತನಾದ ಉದ್ದಾಮ ವಿದ್ವಾಂಸ ನಯಸೇನಸೂರಿ ಈತನೇ ಎಂದು ತೋರುತ್ತದೆ (ನಂ. ೩೫). ಅದರಲ್ಲಿ ಬಂದ ಅವನ ವರ್ಣನಪರ ಪದ್ಯವಿದು :

ಸರಸತಿಯಂ ಮನೋಮುದದೆ ತಾಳ್ದಿದನೆನ್ನನವಜ್ಞೆಗೆಯ್ದನಾ-
ನಿರೆನಪಳಿಕ್ಕೆಗೆ ಚಿಃ ಸವತಿಯೊಳ್ಪುದುವಾಳ್ವುದು ಕಷ್ಟಮೆಂದು ನಿ-
ಷ್ಠುರವಚನಂಗಳಂ ನುಡಿದು ದಿಕ್ಕರಿಯಂ ಪರಿದೇಱಿ ಕೀರ್ತಿ ತಾಂ
ಪುರುಡಿಸಿ ದೂಱಿಪಳ್ವರ ತಪೋನಿಧಿಯಂ ನಯಸೇನಸೂರಿಯಂ ‖

ಪೊಸವಡಂಗಿಲೆ (ಈಗಿನ ಹಿರೇಹಡಗಲಿ) ಪೊಸ ಕಾವ್ಯ, ಪೊಸ ಗೇಯ, ಪೊಸ ವಾದ್ಯ, ಪೊಸ ರಸ, ಪೊಸದೇಸೆಗಳಿಗೆ ನೆಲೆಯಾಗಿತ್ತೆಂದು ಉಕ್ತಿಚಮತ್ಕೃತಿಯಿಂದ ವರ್ಣಿಸಿದೆ. (ನಂ. ೨೬). ಏವೂರು–ಹೂವಿನಹಡಗಲಿ ಶಾಸನಗಳಲ್ಲಿ (ನಂ. ೩೨, ೪೦) ವರ್ಣಿತನಾದ ರವಿಗಚಮೂಪತಿ ಪಂಡಿತನೂ ಅನೇಕ ಲಿಪಿಗಳನ್ನು ಬಲ್ಲವನೂ ಅಲ್ಲದೆ ವಾದನ-ಕಲಾಚತುರನೂ ಆಗಿದ್ದನು. ಅವನ ವಾದನಕೌಶಲದ ವರ್ಣನೆಯ ಪದ್ಯ (ಅತಿಶಕ್ವರೀ ವೃತ್ತ) :

ಇದು ನವಮಧುಧಾರಾಸಾರಮೋ ಮೇಣ್ಸುಧಾಂಭೋ-
ನದಿಯೊ ಕವಿವುದೆಂಬೊಂದಂದದಿಂ ನುಣ್ಪನಿಂಪಂ
ಪುದಿದು ರವಿಚಮೂಪಂ ಬಾಜಿಪೊಂದೋಜೆ ಪೇಳೇ-
ನೊದವಿಸುಗುಮೊ ಕರ್ಣಾನಂದಮಂ ಧಾತ್ರಿಗೆಲ್ಲಂ ‖

ಕ್ರಿ. ವ. ೧೯೯೯ರಲ್ಲಿ ಗುಲುಗೋಜನೆಂಬ ಶಿಲ್ಪಿ 'ಗುಣಪಾ........ರ್ಯ ಪ್ರಣೀತವಾದ ಶಾಸ್ತ್ರಾನುಸಾರವಾಗಿ ಲಕ್ಷಣಯುಕ್ತವಾದ ವಾಸ್ತುನಿರ್ಮಾಣದಲ್ಲಿ ಕುಶಲನಾಗಿದ್ದನು' (ನಂ. ೪೮). ನಯ್ಯಾಯಿಕಾಗ್ರೇಶ್ವರನಾದ ಸೋಮೇಶ್ವರ ಸೂರಿ (ಕ್ರಿ. ವ. ೧೧೦೧) ನಾಟಕಕೋವಿದನೂ ಒಳ್ಗಬ್ಬಗಳನ್ನು ಬಲ್ಲವನೂ ವ್ಯಾಕರಣಜ್ಞನೂ ಆಗಿದ್ದನು (ನಂ. ೫೧). ಕ್ರಿ. ವ. ೧೧೪೮ರಲ್ಲಿ ಸಿರಸಂಗಿಯಲ್ಲಿ ಸುಕವೀಶ್ವರ ತಂಡವಿದ್ದಿತು (ನಂ. ೭೧), ಎಂದರೆ ಇಬ್ಬರು ಮೂವರಾದರೂ ಕವಿಗಳು ಅಲ್ಲಿದ್ದಿರಬಹುದು. ಹೂಲಿಯ ಶಿವೆಯಗೇರಿಯ ದಾಸಿರಾಜ (ಕ್ರಿ. ವ. ೧೧೬೨) ನ ತಂದೆ ಕಾಳಿದಾಸೋತ್ತಮನು ಸುಕವೀಂದ್ರತ್ವದಲ್ಲಿ ಬ್ರಹ್ಮನಿಗೆ ಸಮಾನನಾಗಿದ್ದನು (ನಂ. ೭೯). ವಿಜಯನಗರದ ಕವಿರಾಜ ಲಕ್ಷ್ಮೀಧರಾಮಾತ್ಯನು (ಕ್ರಿ. ವ. ೧೪೧೧) ನೀತಿ ವಾಕ್ಯಾಮೃತ, ರಾಮಾಯಣ, ಕೃಷ್ಣಲೀಲೆ ಎಂಬ ಕಾವ್ಯಗಳನ್ನು ರಚಿಸಿದ್ದಾನೆಂದು ತಿಳಿದುಬರುತ್ತದೆ (ನಂ. ೧೦೭).

ಕವಿಗಮಕಿ ವಾದಿ ವಾಗ್ಮಿ-
ಪ್ರವೇಕ ಸಂಗೀತವಿಷಯ ಸಾಹಿತ್ಯರಸೋ-
ದ್ಭವ ಚತುರ [ವಿಬುಧ*] ಸಂಸ್ತುತ
ವಿವಿಧಕಲಾಭಂಗಿ ಸಂಗಿ ಸಂಗೀತಪುರಂ ॥

(ನಂ. ೧೧೪, ಕ್ರಿ. ವ. ೧೪೮೭)

ಹಾಡುವಳ್ಳಿ ಎಂಬುದು ಇದಕ್ಕೆ ಸಾರ್ಥಕವಾದ ಹೆಸರಾಗಿದೆ.

ಈ ಕೆಳಗಿನ ಕವಿಗಳು ಈ ಸಂಚಯದಲ್ಲಿಯ ಆಯಾ ಶಾಸನಗಳನ್ನು ರಚಿಸಿದ್ದಾರೆ :

೧೩. ಶಾಸನಕವಿ **ಕಮಳಾದಿತ್ಯ,** ಕ್ರಿ. ವ. ಸು. ೯೮೦, ಸೊಗಲಶಾಸನ. ೨೩. **ನಾಗವಾರ,** ಕ್ರಿ. ವ. ೧೦೪೭, ಮೈಲಾರ ಶಾಸನ. ೨೯. ಸತ್ಕವಿ **ರಾಜವಲ್ಲಭ,** ಕ್ರಿ. ವ. ೧೦೬೭, ಹೊಟ್ಟೂರು ಶಾಸನ; ವಾಕ್ಪತಿ ಚಂದ್ರಭಟ್ಟರೂ ಗುರು ಬಡಭದ್ರದೇವರೂ ಈ ಶಾಸನವನ್ನು ತಿದ್ದಿದ್ದಾರೆ. (ಈ ಪದ್ಯ ದೋಷಯುಕ್ತವಾಗಿದ್ದುದರಿಂದ ಉದ್ಧರಿಸಿಕೊಂಡಿಲ್ಲ). ೪೧. **ಮಾಧವಭಟ್ಟ,** ಕ್ರಿ. ವ. ೧೯೯೨, ಸೊರಟೂರು ಶಾಸನ. ಇವನು 'ಬಗೆ ನೇರ್ಪಟ್ಟಿರೆ, ರಸಭಾವಮಾರ್ಗಗೌರವದೊಳ್ ಒಡಂಬಟ್ಟಿರೆ' ಶಾಸನವನ್ನು ರಚಿಸಿದೆನೆಂದು ಹೇಳಿಕೊಂಡಿದ್ದಾನೆ. ೪೪. **ನಾಗಾರ್ಜುನಪಂಡಿತ,** ಕ್ರಿ. ವ. ೧೯೯೪, ಇಂಗಳಿಗಿ ಶಾಸನ. ೪೬. **ಡಾಯಿಮಯ್ಯ,** ಕ್ರಿ. ವ. ೧೯೯೭, ಡೋಣಿ ಶಾಸನ ಇವನು ಮುನಿಚಂದ್ರ ಸಿದ್ಧಾಂತದೇವರ ಶಿಷ್ಯ. ೪೮. **ಶ್ರೀಕಂಠಸೂರಿ,** ಕ್ರಿ. ವ. ೧೯೯೯, ಕುರುವತ್ತಿ ಶಾಸನ. ಕನ್ನಡ ಚಂಪೂರೂಪದ ಈ ಶಾಸನದಲ್ಲಿ ಇವನು ತನ್ನ ಹೆಸರನ್ನು ಸಂಸ್ಕೃತ ಶ್ಲೋಕದಲ್ಲಿ (ಅದನ್ನು ಉದ್ಧರಿಸಿಕೊಂಡಿಲ್ಲ) ಹೇಳಿ ತಾನು ಉಭಯ ಭಾಷಾ ಕವಿಯೆಂಬುದನ್ನು ತೋರಿಸಿಕೊಂಡಿದ್ದಾನೆ. ೪೯. **ಮಲ್ಲ,** ಕ್ರಿ. ವ. ೧೯೯೯, ಚಿಕ್ಕ ಹಂದಿಗೋಳ ಶಾಸನ. ಇದೇ ಶಾಸನದಲ್ಲಿ ವರ್ಣಿತನಾದ ಚತುರನಿಯೋಗಿ ಪ್ರತಿಕಂಠ

ಚಂದನ ತಮ್ಮ ಮಲ್ಲನೇ ಈ ಶಾಸನದ ಕವಿಯಾಗಿರಬಹುದು. ೫೪. **ಬಮ್ಮಣ ಪಂಡಿತದೇವ,** ಕ್ರಿ. ವ. ೧೧೦೮. ಕರಿಗುದರಿ ಶಾಸನ. ಇವನು ನೀಲಕಂಠ ಪಂಡಿತ ದೇವರ ಮಗ. ೭೦. **ಶ್ರೀಮತ್ಕರ್ಣಾಟ** ಸುಕವಿ **ಮುಖ್ಯಪಂಡಿತ,** ಕ್ರಿ. ವ. ೧೧೪೭, ಲಕ್ಷ್ಮೇಶ್ವರ ಶಾಸನ. ೭೭. **ದೇವಭದ್ರಮುನಿ,** ಕ್ರಿ. ವ. ೧೧೬೧, ಹೆಗ್ಗೆರೆ ಶಾಸನ. ಇವನು ತನ್ನ ಕೃತಿ ಉಚಿತ ಪದಾಲಂಕಾರ, ಪ್ರಚುರರಸಗಳನ್ನು ಒಳಗೊಂಡುದೆಂದು ಹೇಳಿದ್ದಾನೆ. ೮೮. **ಭಾಸುರಮತಿ ಸಜ್ಜನತಿಲಕ,** ಕ್ರಿ. ವ. ೧೧೮೬, ಸಿರಸಂಗಿ ಶಾಸನ. ಇವನು ಶಾಸನವನ್ನು 'ಹೊಸಗನ್ನಡದಿಂ ವ್ಯಾವರ್ಣಿಸಿದೆನೆ'ಂದು ಎಂದಿದ್ದಾನೆ. ೯೩. **ಕೇಶವರಾಜ** ಚಮೂಪ, ಕ್ರಿ. ವ. ಸು. ೧೨೦೦, ಅಬಲೂರು ಶಾಸನ. ಇವನು ಹೇಳಿದುದನ್ನು ತಿದ್ದಿ ನಿರಾಯಾಸನೆ ಬರೆದವನು ಶಿವಶರಣನಾದ ಸರಣ. ೯೬-೯೭. **ಬಾಳಚಂದ್ರ,** ಕ್ರಿ. ವ. ೧೨೦೪, ಬೆಳಗಾವಿ ಶಾಸನಗಳು. ಇವನು ಚಾತುರ್ಭಾಷಾ ಕವಿ. ೧೦೭. **ಮಧುರ,** ಕ್ರಿ. ವ. ೧೪೧೧, ಹಂಪೀಶಾಸನ.

ಬೇರೆ ಬೇರೆ ಗ್ರಂಥ-ಸಂಪುಟಗಳಲ್ಲಿ ಪ್ರಕಟವಾಗಿದ್ದ ಅನೇಕ ಕನ್ನಡ ಶಾಸನಗಳಿಂದ ಒಳ್ಳೆಯ ಭಾಗಗಳನ್ನು ಆಯ್ದುಕೊಂಡು ಈ 'ಶಾಸನಸಾಹಿತ್ಯ ಸಂಚಯ'ವನ್ನು ಸಿದ್ಧಗೊಳಿಸಿದ್ದೇವೆ. ಕಲ್ಲ ಮೇಲಿನ ಬರೆಹಗಳನ್ನು ಪರಿಶ್ರಮಪೂರ್ವಕವಾಗಿ ಸಂಗ್ರಹಿಸಿ, ವಿಮರ್ಶಾತ್ಮಕವಾಗಿ ಸಂಪಾದಿಸಿ ಸುಲಭ್ಯವಾಗಿ ಮಾಡಿಟ್ಟಿರುವ ಆ ಎಲ್ಲ ಪಂಡಿತ ಪ್ರವರರು ನಮ್ಮ ಕೃತಜ್ಞತೆಗೆ ಪಾತ್ರರಾಗಿದ್ದಾರೆ. ಡಾ. ಪಾಂ. ಭೀ. ದೇಸಾಯಿ, ಎಂ. ಎ., ಡಿ. ಲಿಟ್., ರೀಡರ ಕರ್ನಾಟಕ ವಿಶ್ವವಿದ್ಯಾಲಯ ಇವರು ತಮ್ಮ 'ಜೈನಿಜಂ ಇನ್ ಸೌಥ ಇಂಡಿಯಾ ಎಂಡ್ ಸಮ್ ಜೈನ ಎಪಿಗ್ರಾಫ್ಸ್' ಎಂಬ ಗ್ರಂಥದಲ್ಲಿ ಸಂಪಾದಿಸಿದ ಶಾಸನಗಳಿಂದ ಆಯ್ದ ಕೆಲವು ಪದ್ಯಗಳನ್ನು ಇದರಲ್ಲಿ ಸೇರಿಸಿಕೊಳ್ಳಲು ಅನುಮತಿಯಿತ್ತುದಕ್ಕಾಗಿ ಅವರಿಗೆ ನಾವು ಆಭಾರಿಯಾಗಿದ್ದೇವೆ. ಕನ್ನಡ ಸಂಶೋಧನ ಸಂಸ್ಥೆಯ ಡಾಯರೆಕ್ಟರರಾದ ಡಾ. ಬಿ ಎ. ಸಾಲೆತ್ತೂರ, ಎಂ. ಎ., ಪಿಎಚ್. ಡಿ. (ಲಂಡನ್), ಡಿ. ಫಿಲ್. (ಗಿಸನ್) ಇವರು ನಮ್ಮ ಕಾರ್ಯದಲ್ಲಿ ವಿಶೇಷ ಸಲಹೆ ನೀಡಿ ಪ್ರೋತ್ಸಾಹಿಸಿದ್ದಕ್ಕೆ ನಾವು ಅವರಿಗೆ ವಿಶೇಷ ಋಣಿಯಾಗಿದ್ದೇವೆ.

ಕನ್ನಡ ಸಂಶೋಧನ ಸಂಸ್ಥೆ
ಧಾರವಾಡ, ತಾ. ೨೫-೬-೬೧

**ಎ. ಎಂ. ಅಣ್ಣೀಗೇರಿ**
**ಮೇವುಂಡಿ ಮಲ್ಲಾರಿ**

# ಸಂಚಯದಲ್ಲಿಯ ಶಾಸನಗಳು

## ( ಜಿಲ್ಲಾನ್ವಯ ವರ್ಗೀಕರಣ )

| ಊರು | ಕ್ರಮಾಂಕ | ಕ್ರಿ. ವ. | ಪುಟ |
|---|---|---|---|
| **ಧಾರವಾಡ ಜಿಲ್ಲೆ** | | | |
| ಅಬಲೂರು | ೫೧ | ೧೧೦೧ | ೭೮ |
| ,, | ೯೩ | ೧೨೦೦ | ೧೩೯ |
| ,, | ೯೯ | ೧೨೧೯ | ೧೫೪ |
| ಅಮ್ಮಿನಭಾವಿ | ೩೦ | ೧೦೭೨ | ೪೭ |
| ಆಲೂರು | ೧೭ | ೧೦೧೦ | ೨೯ |
| ,, | ೬೦ | ೧೦೨೪ | ೯೬ |
| ,, | ೬೧ | ,, | ೯೭ |
| ಕರಿಗುದರಿ | ೫೪ | ೧೧೦೮ | ೮೧ |
| ಕಳಸ | ೭ | ೯೩೦ | ೮ |
| ಕುರ್ತಕೋಟಿ | ೩೮ | ೧೦೮೭ | ೬೧ |
| ಚಿಕ್ಕಹಂದಿಗೋಳ | ೪೯ | ೧೦೯೯ | ೭೬ |
| ಡೋಣಿ | ೪೨ | ೧೦೯೪ | ೬೬ |
| ,, | ೪೬ | ೧೦೯೭ | ೭೩ |
| ನರೇಂದ್ರ | ೬೪ | ೧೧೨೫ | ೧೦೦ |
| ,, | ೬೫ | ೧೧೨೬ | ೧೦೧ |
| ಮುಗುದ | ೬೩ | ೧೧೨೫ | ೯೮ |
| ಮುಳಗುಂದ | ೨೩ | ೧೦೫೩ | ೩೫ |
| ರೋಣ | ೧೯ | ೧೦೨೨ | ೩೨ |
| ,, | ೮೩ | ೧೧೭೯ | ೧೫೭ |
| ಲಕ್ಷ್ಮೇಶ್ವರ | ೩೫ | ೧೦೮೧ | ೫೭ |
| ,, | ೫೨ | ೧೧೦೨ | ೭೯ |
| ,, | ೭೦ | ೧೧೪೭ | ೧೦೭ |
| ,, | ೭೫ ಅ | ೧೧೫೨ | ೧೧೧ |
| | ಆ | ೧೧೬೭ | ,, |
| ಸಾತೇನಹಳ್ಳಿ | ೯೫ | ೧೨೦೪ | ೧೪೮ |
| ಸಿಗ್ಗಾವಿ | ೪ | ೮೬೫ | ೪ |
| ,, | ೨೪ | ೧೦೫೫ | ೩೬ |
| ಸಿಸುವಿನಹಳ್ಳಿ | ೫ | ೮೭೨ | ೫ |
| ಸೊರಟೂರು | ೪೧ | ೧೦೯೨ | ೬೫ |
| ಹಿರೇಹಳ್ಳಿ | ೫೮ | ೧೧೨೧ | ೯೨ |
| ಹೊಟ್ಟೂರು | ೨೧ | ೧೦೩೭ | ೩೪ |
| ,, | ೨೯ | ೧೦೬೭ | ೪೫ |
| **ವಿಜಾಪುರ ಜಿಲ್ಲೆ** | | | |
| ಬಾದಾಮಿ | ೨ | ೭೦೦ | ೨ |
| ಭೈರನಮಟ್ಟಿ | ೨೦ | ೧೦೩೩ | ೩೨ |
| ಮನಗೋಳಿ | ೭೮ | ೧೧೬೧ | ೧೧೫ |
| ಮಹಾಕೂಟ | ೩ | ೭೩೩ | ೪ |
| ಮುತ್ತಿಗೆ | ೩೩ | ೧೦೭೯ | ೫೪ |
| ,, | ೯೦ | ೧೧೮೯ | ೧೩೬ |
| ವಿಜಾಪುರ | ೩೧ | ೧೦೭೫ | ೪೮ |
| ಸಾಲೊಟಗಿ | ೯ | ೯೪೫ | ೧೩ |
| **ಬೆಳಗಾವಿ ಜಿಲ್ಲೆ** | | | |
| ಬೆಳಗಾವಿ | ೯೬ | ೧೨೦೪ | ೧೫೦ |
| ,, | ೯೭ | ,, | ೧೫೧ |
| ,, | ೯೮ | ,, | ೧೫೩ |
| ಸವದತ್ತಿ | ೧೨ | ೯೮೦ | ೧೯ |
| ಸಿರಸಂಗಿ | ೭೧ | ೧೧೪೮ | ೧೦೮ |
| ,, | ೮೬ | ೧೧೮೬ | ೧೩೨ |
| ,, | ೮೭ | ,, | ೧೩೨ |
| ,, | ೮೮ | ,, | ೧೩೩ |
| ಸೊಗಲ | ೧೩ | ೯೮೦ | ೧೯ |
| ಹೂಲಿ | ೭೯ | ೧೧೬೨ | ೧೧೯ |
| **ಕಾರವಾರ ಜಿಲ್ಲೆ** | | | |
| ಕೈಕಿಣಿ | ೧೦೫ | ೧೩೯೮ | ೧೫೯ |
| ,, | ೧೦೯ | ೧೪೧೯ | ೧೬೪ |

| ಊರು | ಕ್ರಮಾಂಕ | ಕ್ರಿ. ವ. | ಪುಟ |
|---|---|---|---|
| ಕೈಕಿಣಿ | ೧೧೩ | ೧೪೮೪ | ೧೭೫ |
| ಹಾಡುವಳ್ಳಿ | ೧೧೦ | ೧೪೨೯ | ೧೬೬ |

**ಬಳ್ಳಾರಿ ಜಿಲ್ಲೆ**

| ಊರು | ಕ್ರಮಾಂಕ | ಕ್ರಿ. ವ. | ಪುಟ |
|---|---|---|---|
| ಉಚ್ಚಂಗಿದುರ್ಗ | ೨೮ | ೧೦೬೪ | ೪೪ |
| ಕ್ಷಡತಿನಿ | ೫೬ | ೧೧೧೯ | ೯೧ |
| ಕುರುಗೋಡು | ೮೧ | ೧೧೭೬ | ೧೨೨ |
| ,, | ೮೨ | ೧೧೭೭ | ೧೨೪ |
| ಕುರುವತ್ತಿ | ೪೮ | ೧೦೯೯ | ೭೪ |
| ,, | ೫೩ | ೧೧೦೪ | ೮೦ |
| ಕೋಗಳಿ | ೨೫ | ೧೦೫೫ | ೩೭ |
| ಕೋಳೂರು | ೬೯ | ೧೧೪೭ | ೧೦೪ |
| ನೀಲಗುಂದ | ೩೪ | ೧೦೭೯ | ೫೬ |
| ಮನ್ನೇರಮಸಲವಾಡ | ೮೫ | ೧೧೮೩ | ೧೩೧ |
| ಮಲಪನಗುಡಿ | ೧೦೮ | ೧೪೧೨ | ೧೬೩ |
| ವೈಲಾರ | ೨೨ | ೧೦೪೬ | ೩೫ |
| ಸೋಗಿ | ೫೭ | ೧೧೨೧ | ೯೨ |
| ಹಂಪಿ | ೧೦೭ | ೧೪೧೧ | ೧೬೧ |
| ಹಿರೇಹಡಗಲಿ | ೨೬ | ೧೦೫೭ | ೩೯ |
| ಹೂವಿನ ಹಡಗಲಿ | ೪೦ | ೧೦೯೦ | ೬೪ |
| ಹೊಳಲು | ೯೧ | ೧೧೭೭ | ೧೩೭ |

**ಕಲಬುರ್ಗಿ ಜಿಲ್ಲೆ**

| ಊರು | ಕ್ರಮಾಂಕ | ಕ್ರಿ. ವ. | ಪುಟ |
|---|---|---|---|
| ಆಳಂದ | ೩೬ | ೧೦೮೨ | ೫೮ |
| ಆಡಕಿ | ೬೨ | ೧೧೧೫ | ೯೮ |
| ಇಂಗಳಗಿ | ೪೪ | ೧೦೯೪ | ೬೯ |
| ಏವೂರು | ೩೨ | ೧೦೭೭ | ೪೮ |
| ನಾಗಾವಿ | ೨೭ | ೧೦೫೮ | ೪೧ |
| ,, | ೩೭ | ೧೦೮೫ | ೫೯ |
| ಸೇಡಂ | ೪೩ | ೧೦೯೪ | ೬೮ |
| ,, | ೯೪ | ೧೨ ಶ. | ೧೪೭ |
| ಹುಣಸಿಹಡಗಲಿ | ೪೭ | ೧೦೯೮ | ೭೩ |

| ಊರು | ಕ್ರಮಾಂಕ | ಕ್ರಿ. ವ. | ಪುಟ |
|---|---|---|---|

**ರಾಯಚೂರು ಜಿಲ್ಲೆ**

| ಊರು | ಕ್ರಮಾಂಕ | ಕ್ರಿ. ವ. | ಪುಟ |
|---|---|---|---|
| ಇಟಗಿ | ೫೫ | ೧೧೧೨ | ೮೩ |
| ಕೊಪ್ಪಳ | ೧೮ | ೧೦೧೭ | ೩೧ |
| ಮುನಿರಾಬಾದು | ೩೯ | ೧೦೮೮ | ೬೩ |

**ಶಿವಮೊಗ್ಗ ಜಿಲ್ಲೆ**

| ಊರು | ಕ್ರಮಾಂಕ | ಕ್ರಿ. ವ. | ಪುಟ |
|---|---|---|---|
| ಕುಪ್ಪಟೂರು | ೧೦೬ | ೧೪೦೮ | ೧೬೧ |
| ಕೊರಗೋಡು | ೪೫ | ೧೦೯೫ | ೭೧ |
| ಹೊಗೇಕೆರೆ | ೧೧೪ | ೧೪೮೭ | ೧೭೮ |

**ಹಾಸನ ಜಿಲ್ಲೆ**

| ಊರು | ಕ್ರಮಾಂಕ | ಕ್ರಿ. ವ. | ಪುಟ |
|---|---|---|---|
| ಅರಸಿಕೆರೆ | ೮೯ | ೧೧೮೮ | ೧೩೬ |
| ಜಾಜೂರು | ೯೨ | ? | ೧೩೮ |
| ಬೆಣ್ಣೆಗುಡ್ಡ | ೧೦೨ | ೧೨೬೫ | ೧೫೬ |
| ಮಾವನೂರ | ೧೦೩ | ೧೨೮೩ | ೧೫೬ |
| ಶ್ರವಣಬೆಳುಗೊಳ | ೧೧ | ೯೭೫ | ೧೭ |
| ,, | ೫೦ | ೧೧೦೦ | ೭೭ |
| ,, | ೫೯ | ೧೧೨೩ | ೯೬ |
| ,, | ೬೭ | ೧೧೩೧ | ೧೦೩ |
| ,, | ೬೮ | ೧೧೪೭ | ೧೦೩ |
| ,, | ೭೬ | ೧೧೫೯ | ೧೧೩ |
| ,, | ೮೦ | ೧೧೭೫ | ೧೨೦ |
| ,, | ೮೪ | ೧೧೮೧ | ೧೩೦ |
| ,, | ೧೦೪ | ೧೩೬೮ | ೧೫೮ |
| ಹಲ್ಮಿಡಿ | ೧ | ೪೫೦ | ೧ |
| ಹಳೇಬೀಡು | ೭೨ | ೧೧೫೦ | ೧೦೮ |

**ತುಮಕೂರು ಜಿಲ್ಲೆ**

| ಊರು | ಕ್ರಮಾಂಕ | ಕ್ರಿ. ವ. | ಪುಟ |
|---|---|---|---|
| ಕೈದಾಳ | ೭೩ | ೧೧೫೧ | ೧೦೯ |
| ನಿಡುಗಲ್ಲು ಬೆಟ್ಟ | ೧೦೦ | ೧೨೩೨ | ೧೫೫ |
| ,, | ೧೦೧ | ೧೨೪೯ | ೧೫೫ |
| ಪಂಡಿತರವಳ್ಳಿ | ೭೪ | ೧೧೬೦ | ೧೧೦ |

| ಊರು | ಕ್ರಮಾಂಕ | ಕ್ರಿ. ವ. | ಪುಟ |
|---|---|---|---|
| ವಾಜರಹಳ್ಳಿ | ೮ | ೯೪೨ | ೧೩ |
| ಹೆಗ್ಗೆರೆ | ೭೭ | ೧೧೬೧ | ೧೧೪ |
| **ಮಂಡ್ಯ ಜಿಲ್ಲೆ** | | | |
| ಆತಕೂರು | ೧೦ | ೯೫೦ | ೧೫ |
| **ಬೆಂಗಳೂರು ಜಿಲ್ಲೆ** | | | |
| ಬೇಗೂರು | ೬ | ೯ನೆ ಶ. | ೩ |
| **ಮಂಗಳೂರು ಜಿಲ್ಲೆ** | | | |
| ಮೂಡಬಿದಿರೆ | ೧೧೧ | ೧೪೩೦ | ೧೬೯ |
| ,, | ೧೧೨ | ,, | ೧೭೨ |
| **ಹೊರನಾಡು** | | | |
| ಜುರ | ೧೫ | ೧೦ನೆ ಶ. | ೨೬ |
| ತಳಂಗೆರೆ | ೧೪ | ,, | ೨೪ |
| ತ್ರಿಪುರಾಂತಕಪುರಂ | ೬೬ | ೧೧೨೬ | ೧೦೨ |
| ದಾನವುಲಪಾಡು | ೧೬ | ೧೦ನೆ ಶ. | ೨೭ |

## ಆಯ್ದ ಶಾಸನಗಳ ಮೂಲಗ್ರಂಥಗಳು


1. Journal of the Bombay Branch Royal Asiatic Society Vol. X.
2. Epigraphia Indica. Vols. I, II, III, IV, V, X, XII, XIII XIV, XV, XVI, XIX, XXIX.
3. Epigraphia Carnatica, Vols. II, VIII Part II, XII, XV.
4. Hyderabad Archaeological Series Nos. V, VIII, XVI.
5. Indian Antiquary, Vols. IX & X.
6. Jainism in South India and Some Jaina Epigraphs. by Dr. P. B. Desai.
7. Karnatak Inscriptions, Vols. I & 1V.
8. Mysore Archaeological Report, 1936.
9. South Indian Inscriptions, Vols. IV, VII, IX Part I, XI, XII Part 1 & II.

# ಶಾಸನ ಸಾಹಿತ್ಯ ಸಂಚಯ

## ೧

**ಹಲ್ಮಿಡಿ,**
**ಬೇಲೂರು ತಾಲೂಕು,**
ಹಾಸನ ಜಿಲ್ಲೆ

**ಕ್ರಿ. ವ. ಸು. ೪೫೦**
**ಕದಂಬ ಕಕುಸ್ಥ**
(ಮೈ. ಆ. ರಿ. ೧೯೩೬, ಪು. ೭೩

ಕ್ರಿ. ವ. ೪೫೦ರ ಸುಮಾರಿನ ಶಾಸನವಿದು ಈವರೆಗೆ ದೊರೆತಿರುವ ಎಲ್ಲ ಕನ್ನಡ ಶಾಸನಗಳಲ್ಲಿ ಇದು ತೀರ ಪುರಾತನವಾದುದು. ಶಾಸನಾರಂಭದಲ್ಲಿ ವಿಷ್ಣುಸ್ತುತಿಯ ಶ್ಲೋಕವಿದೆ. ಬಳಿಕ ಕಲಭೋರನ ವೈರಿಯೂ ತ್ಯಾಗಸಂಪನ್ನನೂ ಆದ ಕದಂಬ ಕಕುಸ್ಥನ ಆಳಿಕೆಯ ಉಲ್ಲೇಖವಿದೆ. ನರಿದಾವಿಳೆ ನಾಡನ್ನು ಮೃಗೇಂದ್ರ, ನಾಗ ಎಂಬವರು ಆಳುತ್ತಿದ್ದರು. ಅವರಿಬ್ಬರೂ ಎಲ್ಲಭಟಾರಿಯ ಮಗ ವಿಜ ಅರಸನಿಗೆ—ಆತನು ಸೇಂದ್ರಕ ಮತ್ತು ಬಣ (ಬಾಣ) ಈ ಎರಡು ದೇಶಗಳ ವೀರರ ಸಮ್ಮುಖದಲ್ಲಿ ಕೇಕಯ ಮತ್ತು ಪಲ್ಲವರನ್ನು ಹಣಿದು ಗೆದ್ದುದಕ್ಕಾಗಿ—ಪಲ್ಮಡಿಯನ್ನೂ ಮೂಳಿವಳ್ಳಿಯನ್ನೂ ಕೊಟ್ಟರೆಂದು ಹೇಳಿದೆ. ಈ ದಾನಕ್ಕೆ ಭಟಾರಿಕುಲದವನಾದ ಅಳುಕದಂಬನ ಅಂಕಿತವಿದೆ. ಕೊನೆಯಲ್ಲಿ ಇಬ್ಬರೂ ಸೆಟ್ಟಿಂಗದರ ವಿಜಾರಸರೂ ಪಲ್ಮಡಿಗೆ ಕುಱುಂಬಿಡಿಯನ್ನು ಬಿಟ್ಟರೆಂದು ಹೇಳಿದೆ. ಆರಂಭದ ಸಂಸ್ಕೃತ ಶ್ಲೋಕದಿಂದ 'ದುಷ್ಟನಿಗ್ರಹ ಶಿಷ್ಟಾನುಗ್ರಹ'ವು ರಾಜನ ಧರ್ಮವೆಂಬುದು ಧ್ವನಿತವಾಗುವುದು.

ಈ ಶಾಸನದ ಭಾಷೆ ಅಭಿಜಾತವಾಗಿದೆ. ಇಲ್ಲಿ ಸಂಸ್ಕೃತ–ಕನ್ನಡಗಳ ಪದಮೈತ್ರಿ ಸುಂದರವಾಗಿದೆ. ಇದರಿಂದ ಕ್ರಿ. ವ. ೪೫೦ಕ್ಕಿಂತ ಕೆಲ ಶತಮಾನ ಪೂರ್ವದಲ್ಲಿಯೆ ಕನ್ನಡ ಮಾತು ಸುಸಂಸ್ಕೃತ ಸಾಹಿತ್ಯದ ಮಟ್ಟವನ್ನು ಹೊಂದಿತ್ತೆಂದು ವಿದಿತವಾಗುವುದು. ಈ ಹಳೆಯ ಹಳಗನ್ನಡದ ಅಥವಾ ಈಗ ತಿಳಿದ ಮಟ್ಟಿಗೆ ಕನ್ನಡದ ಮೊದಲಿನ ರೂಪವನ್ನರಿಯಲು ಇಲ್ಲಿ ವಿಭಕ್ತಿ ಪ್ರತ್ಯಯ, ಆಖ್ಯಾತ ಪ್ರತ್ಯಯಗಳನ್ನು ಗಮನಿಸಬಹುದು. ಉದಾ :

ಪ್ರಥಮಾ ವಿಭಕ್ತಿಗೆ 'ಅನ್' : ಕದಂಬಪನ್, ಸಂಪನ್ನನ್ ಇತ್ಯಾದಿ. 'ಓನ್' ಎಂಬುದೂ ಉಂಟು : ಭರಿತೋನ್.

ದ್ವಿತೀಯೆಗೆ 'ಅನ್' : ಆದಾನ್.

ಚತುರ್ಥಿಗೆ ಬಿಂದುವಿಗೆ ಬದಲು 'ನ್' ಆಗಮ : ಸುತನ್ಗೆ, ಅರಸನ್ಗೆ.

ಷಷ್ಠಿಗೆ 'ಆ' (ದೀರ್ಘಾಂತ) : ಕಲಭೋರನಾ, ದೇಶದಾ ಇ.

ಸಪ್ತಮಿಗೆ 'ಎ' ಮತ್ತು 'ಉಳ್' : ಸಮುಕ್ಷದೆ; ನಾಡುಳ್, ಆಹವದುಳ್.

ಕ್ರಿಯಾವಿಶೇಷಣಾದಿಗಳಿಗೆ ಸೇರುವ 'ಅವನು' ಎಂಬುದರ ರೂಪ 'ಒನ್' 'ಓನ್': ಕುಲದೊನ್, ಕಳ್ದೋನ್, ಅಳಿವೊನ್ (ಕುಲದವನು, ಕದ್ದವನು, ಅಳಿವವನು).

ಆಖ್ಯಾತಪ್ರತ್ಯಯ : ತೃತೀಯಪುರುಷ ಭೂತಕಾಲಕ್ಕೆ ಕೊಟ್ಟಾರ್, ವಿಟ್ಟಾರ್. ವಿ(ಬಿ ಟ್ಟಾರ್, ಇರ್ವ್ವ(ಬ್ಬ), ರಾ—ಈ ಶಬ್ದಗಳನ್ನು ಗಮನಿಸಬೇಕು.

## ವಿಜ ಅರಸನಿಗೆ 'ಬಾಳ್ಗಟ್ಚು'

ಜಯತಿ ಶ್ರೀಪರಿಷ್ವಙ್ಗಶ್ಯಾಙ್ಗ[ವ್ಯಾನತಿ]ರಚ್ಯುತಃ
ದಾನವಾಕ್ಷ್ಣೋರ್ಯುಗಾನ್ತಾಗ್ನಿಃ [ಶಿಷ್ಟಾನಾನ್ತು], ಸುದರ್ಶನಃ ‖ ೧ ‖

ನಮಃ. ಶ್ರೀಮತ್ಕದಂಬಪನ್ತ್ಯಾಗಸಂಪನ್ನನ್ಕಲಭೋರ[ನಾ] ಅರಿ **ಕಕುಸ್ಥ** ಭಟ್ಟೋರನಾಳೆ, ನರಿದಾವಿಳೆ ನಾಡುಳ್ ಮೃಗೇಶನಾಗೇನ್ದ್ರಾಭೀಳಭ್ಭಟಹರಪ್ಪೋರ್ ಶ್ರೀಮೃಗೇಶನಾಗಾಹ್ವಯರಿರ್ವ್ವರಾ ಬಟರಿ ಕುಲಾಮಲವ್ಯೋಮತಾರಾಧಿನಾಥನ್ನಳಪಗಣಪಶುಪತಿ ಮಾದಕ್ಷಿಣಾಪಥ ಬಹುಶತಹವನಾಹವದು[ಳ್] ಪಶುಪ್ರದಾನಶೌರ್ಯೋದ್ಯಮಭರಿತೋ[ನ್ದಾನ]ಪಶುಪತಿಯೆನ್ದು ಪೊಗಟಿಪ್ಪೊಟ್ಟಣ ಪಶುಪತಿ ನಾಮಧೇಯನಾಸರಕ್ಕೆಲ್ಲಭಟರಿಯಾ ಪ್ರೇಮಾಲಯ ಸುತನ್ಗೆ ಸೇನ್ದ್ರಕಬಣೋಭಯದೇಶದಾ ವೀರಾಪುರುಷಸಮಕ್ಷದೆ ಕೇಕಯ ಪಲ್ಲವರಂ ಕಾದೆಱಿದು ಪೆತ್ತಜಯನಾ ವಿಜಅರಸನ್ಗೆ ಬಾಳ್ಗಟ್ಚು ಪಲ್ಮಡಿಉಂ ಮೂಱುವಳ್ಳಿಉಂ ಕೊಟ್ಟಾರ್. ಬಟಾರಿಕುಲದೊನಳುಕದವ್ಪನ್ಕಳ್ದೋನ್ ಮಹಾಪಾತಕನ್. ಇರ್ವ್ವರುಂ ಸಬ್ಬಙ್ಗದರ್ ವಿಜಾರಸರುಂ ಪಲ್ಮಡಿಗೆ ಕುಱುವ್ಬಿಡಿ ವಿಟ್ಟಾರ್. ಅದಾನಳಿವೊನ್ಗೆ ಮಹಾಪಾತಕಮ್. ಸ್ವಸ್ತಿ.

(ಈ ಕಲ್ಲಿನ ಎಡಪಕ್ಕದಲ್ಲಿ)

ಭಟ್ಟರ್ಗ್ಗೀಗಟ್ದಿ ಒಡ್ಡಲಿ ಆಪತ್ತೊನ್ದಿ ವಿಟ್ಟಾರಕರ

## ೨

## ಬಾದಾಮಿ, ಕ್ರಿ. ವ. ಸು. ೭೦೦

### ಬಾದಾಮಿ ತಾಲೂಕು,

ವಿಜಾಪುರ ಜಿಲ್ಲೆ (ಇಂ. ಆ್ಯಂ. ೧೦ ಪು. ೬೧)

ಕಪ್ಪೆಅರಭಟ್ಟನನ್ನು ಕನ್ನಡ ದೇಸಿ ಛಂದಸ್ಸಾದ ತ್ರಿಪದಿಯಲ್ಲಿ ಈ ಶಾಸನ ಬಣ್ಣಿಸುತ್ತಿದೆ. ಇದುವರೆಗೆ ದೊರೆತಿರುವ ತ್ರಿಪದಿಗಳಲ್ಲಿ ಇದು ಎಲ್ಲಕ್ಕೂ ಮೊದಲಿನದು. ಈ ತ್ರಿಪದಿಗಳ ಅಭಿಜಾತ ರೂಪವನ್ನು ನೋಡಿದರೆ, ಆನೆಯ ಶತಮಾನಕ್ಕಿಂತ ಬಹಳ ಹಿಂದೆಯೇ ತ್ರಿಪದಿಗಳು ಬಳಕೆಯಲ್ಲಿದ್ದವೆಂದು ಎನಿಸುತ್ತದೆ. ಹಲ್ಮಿಡಿ (ಕ್ರಿ. ವ. ೪೫೦) ಶಾಸನದ ಮತ್ತು ಇದರ ಭಾಷೆಯನ್ನು ಸರಿಹಚ್ಚಿ

ನೋಡಿದರೆ, ಇಲ್ಲಿ 'ಮಾಧುರ್ಯನ್ಗೆ' ಎಂದಿರದೆ 'ಮಾಧುರ್ಯಂಗೆ' ಎಂದಿರುವುದು, 'ಕೆಟ್ಟಾರ್, ಸತ್ತಾರ್' ಎಂದಿರದೆ 'ಕೆಟ್ಟರ್, ಸತ್ತರ್' ಎಂದಿರುವುದು ಕಂಡುಬರುವುದು. ಪ್ರಥಮೆಯ ರೂಪದಲ್ಲಿ ಮಾತ್ರ ವ್ಯತ್ಯಾಸವಾಗಿರುವುದಿಲ್ಲ; 'ಪ್ರಿಯನ್' 'ಭಟ್ಟನ್' ಇತ್ಯಾದಿಯಾಗಿಯೇ ಇದೆ. ಇದರ ಸಮಕಾಲೀನವಾದ ಮಹಾಕೂಟ ಶಾಸನದಲ್ಲಿ (ಶಾ. ನಂ. ೩) ಷಷ್ಠೀವಿಭಕ್ತಿ ರೂಪದಲ್ಲಿಯೂ ವ್ಯತ್ಯಾಸವಾದುದು ಕಾಣುವುದಿಲ್ಲ.

ಕಪ್ಪೆಅರಭಟ್ಟನ ಉದಾತ್ತ ವಿಚಾರವು, ಅವನ ವ್ಯಕ್ತಿತ್ವವು ಈ ಶಾಸನದಿಂದ ಗೊತ್ತಾಗುವುದು. ಸಂಸ್ಕೃತ ಶ್ಲೋಕವನ್ನು ಇವನ ವರ್ಣನೆಗೆ ಮೊದಲು ಉದ್ಧರಿಸಿ, 'ಮಾನವೇ ಪ್ರಾಣ' ಶ್ಲೋಕದ ತಾತ್ಪರ್ಯ ಎಂಬುದು ಆತನ ವ್ಯಕ್ತಿತ್ವದ ಜೀವಾಳವೆಂದು ಶಾಸನಕಾರ ಸೂಚಿಸಿದ್ದಾನೆ.

ಈ ಶಾಸನದ ಕೆಲವು ಭಾಗ ಬಾದಾಮಿ ಹತ್ತಿರದ ಸಿಡಲ್ಪಡಿ ಎಂಬಲ್ಲಿಯೂ ಕಂಡುಬರುವುದು.

## ಕಲಿಗೆ ವಿಪರೀತ ಕಪ್ಪೆಅರಭಟ್ಟ

ಗದ್ಯ* ॥ **ಕಪ್ಪೆಅರಭಟ್ಟನ್** ಶಿಷ್ಟಜನಪ್ರಿಯನ್ ಕಷ್ಟಜನವರ್ಜಿತನ್ ಕಲಿಯುಗ ವಿಪರೀತನ್.

ಶ್ಲೋಕ* ॥ ವರನ್ತೇಜಸ್ವಿನೋ ಮೃತ್ಯುರ್ನ ತು ಮಾನಾವಖಣ್ಡನಮ್
ಮೃತ್ಯುಸ್ತತ್‌ಕ್ಷಣಿಕೋ ದುಃಖಮ್ಮಾನಭಂಗನ್ದಿನೇ ದಿನೇ ॥ ೨ ॥

ತ್ರಿಪದಿ* ॥ ಸಾಧುಗೆ ಸಾಧು ಮಾಧುರ್ಯ್ಯಂಗೆ ಮಾಧುರ್ಯ್ಯಂ
ಬಾಧಿಪ್ಪ ಕಲಿಗೆ ಕಲಿಯುಗವಿಪರೀತನ್
ಮಾಧವನೀತನ್ಪೆಱನಲ್ಲ ॥ ೩ ॥

ಒಳ್ಳಿತ್ತ ಕೆಯ್ವೊರಾರ್ಪೊಲ್ಲದುಮದಱನ್ತೆ
ಬಲ್ಲಿತ್ತು ಕಲಿಗೆ ವಿಪರೀತಾ ಪುರಾಕೃತ-
ಮಿಲ್ಲಿ ಸನ್ಧಿಕ್ಕುಮದು ಬಂದು ॥ ೪ ॥

ಕಟ್ಟಿದ ಸಿಂಘಮುನ್ ಕೆಟ್ಟೊಡೇನೆಮಗೆನ್ದು
ಬಿಟ್ಟವೊಲ್ಕಲಿಗೆ ವಿಪರೀತಂಗಹಿತರ್ಕ್ಕಳ್
ಕೆಟ್ಟರ್ ಮೇಣ್ ಸತ್ತರವಿಚಾರಮ್ ॥ ೫ ॥

---

* ಮೂಲಶಾಸನದಲ್ಲಿ ಈ ಗದ್ಯ, ಶ್ಲೋಕ, ತ್ರಿಪದಿ ಎಂಬ ಪದಗಳಿಲ್ಲ. ಹಾಗೆಯೆ ಈ ಸಂಗ್ರಹದಲ್ಲಿ ಪ್ರತಿಯೊಂದು ಪದ್ಯಕ್ಕೆ ಅದರ ವೃತ್ತದ ಹೆಸರನ್ನೂ ಗದ್ಯಕ್ಕೆ ವಚನ ಎಂಬುದನ್ನೂ ಸೂಚಿಸಿದ್ದೇವೆ. ಮೂಲ ಶಾಸನಗಳಲ್ಲಿ ಹೀಗೆ ವ್ಯವಸ್ಥಿತವಾಗಿ ಸೂಚಿಸಲಾಗಿಲ್ಲ.

## ೩

**ಮಹಾಕೂಟ,**
**ಬಾದಾಮಿ ತಾಲೂಕು,**
ವಿಜಾಪುರ ಜಿಲ್ಲೆ

**ಕ್ರಿ. ವ. ಸು. ೭೩೩**
**ಚಾಲುಕ್ಯ ವಿಜಯಾದಿತ್ಯ**
( ಇಂ. ಅಂ. ೧೦, ಪು. ೧೦೩ )

೮ನೆಯ ಶತಮಾನ ಆರಂಭ ಕಾಲದ ಕನ್ನಡ ಗದ್ಯದ ಮಾದರಿ ಇಲ್ಲಿದೆ. ಈ ಹಿಂದಿನ ಬಾದಾಮಿ ಶಾಸನವೂ ಇದೂ ಸಮಕಾಲೀನವಾಗಿವೆ. ಆಗಿನ ಭಾಷಾಸ್ವರೂಪದ ಅಭ್ಯಾಸಕ್ಕಾಗಿ ಇವೆರಡನ್ನೂ ಒಟ್ಟಾಗಿ ನೋಡಬಹುದು. ತೃತೀಯಪುರುಷ ಭವಿಷ್ಯತ್ಕಾಲದ ಕ್ರಿಯಾಪದರೂಪ ‘ ಗೊಟ್ಟೋಳ್ ’ ಎಂಬುದಾಗಿ ಇಲ್ಲಿ ಸಿಕ್ಕುತ್ತಿದೆ.

ವಿಜಯಾದಿತ್ಯನ ಸೂಳೆ ವಿನಾಪೋಟಿ ಎಂಬವಳು ದೇವರಿಗೆ ಬಂಗಾರದ ಪೀಠ, ಬೆಳ್ಳಿಯ ಕೊಡೆ ಮಾಡಿಸಿ, ಕೆಲವು ಭೂಮಿಯನ್ನು ಕೊಟ್ಟುದನ್ನು ಇಲ್ಲಿ ಉಲ್ಲೇಖಿಸಿದೆ.

### ಅರಸುಸೂಳೆಯ ಕೊಡುಗೆ

ಸ್ವಸ್ತಿ ॥ ವಿಜಯಾದಿತ್ಯ ಸತ್ಯಾಶ್ರಯ ಶ್ರೀಪೃಥಿವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಭಟಾರರಾ ಪ್ರಾಣವಲ್ಲಭೆ ವಿನಾಪೋಟಿಗಳೆನ್ಬೊರ್ ಸೂಳೆಯರ್— ಇವರಾ ಮುದುತಾಯ್ವಿರ್ ರೇವಮಂಚಳ್ಳಳವರಾ ಮಗಳ್ದಿರ್ ಕುಚಿಪೋಟಿಗಳವರಾ ಮಗಳು ವಿನಾಪೋಟಿಗಳ್—ಇಲ್ಲಿಯೆ ಹಿರಣ್ಯಗರ್ಭಮಿಟ್ಟು, ಎಲ್ಲಾ ದಾನಮಂಗೊಟ್ಟು, ದೇವನಾ ಪೀಠಮಾನ್ ಕಿಸುವಿನೆ ಕಟ್ಟಿ ಬೆಳ್ಳಿಯಾ ಕೊಡೆಯಾನೇಱಿಸಿಯೆ, ಮಂಗಲುಳ್ಳಿ ಅಷ್ಟಶತಂ ಕ್ಷೇತ್ರಂ* ಗೊಟ್ಟೋಳ್. ಇದಾನಳಿದೊನ್ ಪಂಚಮಹಾಪಾತಕನಕ್ಕುಮ್.

## ೪

**ಸಿಗ್ಗಾವಿ,**
**ಸಿಗ್ಗಾವಿ ತಾಲೂಕು,**
ಧಾರವಾಡ ಜಿಲ್ಲೆ

**ಕ್ರಿ. ವ. ಸು. ೮೬೫**
**ರಾಷ್ಟ್ರಕೂಟ ಅಮೋಘವರ್ಷ**
(ಕ. ಇನ್ಸ್. ೧ ಪು ೧೩)

ಈ ಶಾಸನದಲ್ಲಿ ಲೇಖನಸ್ಖಾಲಿತ್ಯದಿಂದ ಭಾಷಾದೋಷಗಳುಂಟಾಗಿದ್ದರೂ, ೯ನೆಯ ಶತಮಾನದ ಮಧ್ಯಕಾಲದ, ಈ ಪ್ರದೇಶದ ವ್ಯಾವಹಾರಿಕ ಗದ್ಯದ ಮಾದರಿಯೆಂದು ಇದನ್ನಾಯ್ದಿದೆ. ಆದಿತ್ಯ ಭಟಾರರ ಸ್ಥಾನವನ್ನು ರಕ್ಷಿಸುವುದಕ್ಕೆ ಗೋಕರ್ಣಪಂಡಿತರೇ ಸಮರ್ಥರೆಂದು ಅವರಿಗೆ ಆ ಸ್ಥಾನ

---

* ಅಷ್ಟಶತಂ ಕ್ಷೇತ್ರಂ : ೮೦೦(ಅಳತೆಯ) ಹೊಲ. ಅಳತೆಯ ಪ್ರಮಾಣ, ಹೆಸರು ಯಾವುದೂ ತಿಳಿಯುವುದಿಲ್ಲ.

ವನ್ನೂ ಮೂಲಸ್ಥಾನ ಮಹಾದೇವರ ಆಸ್ತಿಯನ್ನೂ ಎಳ್ವಣಸೆಯ ಮಹಾಜನಗಳೂ ಗೊರವರೂ ಒಪ್ಪಿಸಿದ ಸಂಗತಿ ಇಲ್ಲಿ ಬಂದಿದೆ. ಇದು ಬ್ರಹ್ಮಚಾರಿ ಸ್ಥಾನ; ಬ್ರಹ್ಮಚರ್ಯಹೀನನನ್ನು ಗೊರವರು ತೆಗೆದುಹಾಕಬೇಕೆಂದು ವಿಧಿಸಿದೆ.

ಸ್ವಸ್ತ್ಯಮೋಘವರ್ಷ ಶ್ರೀಪೃಥಿವೀವಲ್ಲಭ ಮಹಾರಾಜಾಧಿರಾಜ ರಾಜಪರಮೇಶ್ವರ ಭಟರರ ರಾಜ್ಯಾಭಿವೃದ್ಧಿಯೊಳ್ಶಕನೃಪಕಾಳಾತೀತ ಸಂವತ್ಸರಶತಂಗಳೇೞ್ನೂಱೆಣ್ಭತ್ತೇೞನೆಯ ಪಾರ್ತ್ಥಿವಸಂವತ್ಸರಂ ಪ್ರವರ್ತ್ತಿಸೆ, ಪುರಿಗೆಱೆನಾಡ ಕುಪ್ಪೆಯ ನಾಳೆ, ವೈಶಾಖಮಾಸದ ಪೌರ್ಣ್ನಮಾಸೆಯನ್ದೆೞ್ವಣಸೆಯ ನಾಲ್ವದಿಂಬರ್ಮ್ಮಹಾಜನಮುಂ ಮೋನಿಗೊರವರುಂ ಮೂಲಸ್ಥಾನದ ಮಹಾದೇವರಾಳ್ವಿಲಂವಳ್ಳಿಯ ಶಾಸ[ನ*]ಮುಮಾದೇವರ ಮೂಡ ದಿಸೆಯೊಳ್ಮೂಡ ವಡ್ಡವ[ನೆ]ಯ ಪೊಲಮೇರೆಯೇ[1] ತೆಂಕ ದೇವಂಗೆಯ್ಯ ಮೇರೆ, ಪಡುವ ನಿಱುಗಲ್ಮೆರೆ,[2] ಬಡಗ ಕಾಲಡಿಯ ಪೊಲಮೇರೆಯೇ ಮೇರೆ ಮಾಡಿ ಎಣ್ಭತ್ತಯ್ವತ್ತರ್ಕ್ಕೆಯ್ಯು[3] ಮಾಱುದೋಣ್ಬದ ನೆಲನುಮಾದಿತ್ಯ ಭಟರರ ಸ್ಥಾನವುವ ರಕ್ಷಿಸಲ್ವೆೞ್ಚಿಸಲಿವರೆ ಸಮರ್ತ್ಥರೆಂದು ಗೋಕರ್ಣ್ನಪಣ್ಡಿತ ಭಟರರ್ಗ್ಗೆ ಸರ್ವ್ವಬಾಧಾಪರಿಹಾರಂ ಕಾಲಂ ಕೞ್ಚಿ ಕೊಟ್ಟರೀ ಸ್ಥಾನಮನಾಳ್ವ ಗೊರವರಖಂಡಿತ ಬ್ರಹ್ಮಚಾರಿಯಪ್ಪುದು ಬ್ರಹ್ಮಚರ್ಯ್ಯಹೀನರನೀ ಸಮಯದ ಗೊರವರ್ಕ್ಕಳ್ಕಳೆವೊರೀ ಪದ್ಧತಿಯುಂ ಶಿಲಾಲೇಖೆ ಮಾಡಿ ನಿಱಿಸಿದಪ್ಪಣ್ಡಿತ ಭಟಾರರೀ ಧರ್ಮ್ಮವಂ ಕಾದೊಂಗಶ್ವಮೇಧದ ಫಲಂ, ಅೞಿಯಲ್ಬಗೆವೊಂಗೆ ಬ್ರಹ್ಮಾತಿಯ ಪಾಸಮುಕ್ಕುಂ. **ನಾಗದೇವ**ನೀಧರ್ಮ್ಮದೊಳ್ಗೋಷ್ಠಿ ಆದೊಂ. **ಶ್ರೀರೂವಯ್ಯ**ನ **ಲಿ**ಖಿತಂ.

೫

## ಸಿಸುವಿನಹಳ್ಳಿ, ಕ್ರಿ. ವ. ಸು. ೮೭೨

## ನವಿಲುಗುಂದ ತಾಲೂಕು, ರಾಷ್ಟ್ರಕೂಟ ಅಮೋಘವರ್ಷ

ಧಾರವಾಡ ಜಿಲ್ಲೆ (ಬೊಂ. ಕ. ಇನ್ಸ್. ೧೨ ಭಾ. ೧, ಪು. ೧೦)

ಈ ಊರ ೫೦ ಜನ ಬ್ರಾಹ್ಮಣರು ಸಕಲವಿದ್ಯಾಪಾರಂಗತರು, ಈ ಹಿಂದೆ ಆಳಿದ ಚಳುಕ್ಯರಿಂದ ಈ ಊರನ್ನು ಪಡೆದವರು, ಸಕಲ ಯಜ್ಞಹೋಮಾದಿಗಳನ್ನು ಸಾಂಗಮಾಡುತ್ತ ಪ್ರಸಿದ್ಧರಾಗಿದ್ದರು. ಅಮೋಘವರ್ಷದೇವನ ಮಾಂಡಲಿಕನಾಗಿ ಬೆಳ್ವೊಲ–೩೦೦ನ್ನು ಆಳುತ್ತಿದ್ದ ದೇವಣಯ್ಯನು, ಒಂದು ಚಂದ್ರಗ್ರಹಣಕಾಲದಲ್ಲಿ ಈ ಬ್ರಾಹ್ಮಣರನ್ನು ಕರೆಯಿಸಿಕೊಂಡು ದಾನಕೊಟ್ಟನು, ನೃಪತುಂಗ ರಾಜಮಂದಿರದ ಅಂಗಳದಲ್ಲಿ, ಸರ್ವತೀರ್ಥೋದಕಸ್ನಾನದಿಂದ ಪವಿತ್ರನಾಗಿ ಧಾರಾ

1. ಮೇರೆಯೇ ಮೇರೆ ಎಂದಿರಬೇಕು.
2. ಶಾ. ಮೂ. ನಿಱುಗಲ್ಮರೆ.
3 ಎಣ್ಭತ್ತಯ್+ ಮತ್ತರ್+ ಕೆಯ್: ೮೫ ಮತ್ತರು ಗದ್ದೆ.

ಪೂರ್ವಕವಾಗಿ ತುಪ್ಪದ ಸುಂಕವನ್ನು ಅವರಿಗೆ ಬಿಟ್ಟನು. ಈ ಸಂಗತಿಯನ್ನು ಹೇಳುವ ಶಾಸನ-ವಿದು.

## ನೃಪತುಂಗ ರಾಜಮಂದಿರಾಂಗಣದಲ್ಲಿ ದೇವಣಯ್ಯನ ದಾನ

ವ|| ಸ್ವಸ್ತ್ಯಮೋಘವರ್ಷ ಶ್ರೀಪೃಥುವೀವಲ್ಲಭ ಮಹಾರಾಜಾಧಿರಾಜ ಪರ-ಮೇಶ್ವರ ಪರಮಭಟರರಾ ರಾಜ್ಯಮುತ್ತರೋತ್ತರಾಭಿವೃದ್ಧಿಗೆ ಸಲುತ್ತಿರೆ, ಶ್ರೀಮದ-ಮೋಘವರ್ಷದೇವಪಾದಪಂಕಜಭ್ರಮರ[ವಿ]ಶಿಷ್ಟಜನಾಶ್ರಯಂ ಶ್ರೀಮದ್ದೇವಣಯ್ಯಂ ಬೆಳ್ವೊಲಮೂನೂಱುಮನಾಳುತ್ತುಂ, ಸಕ[ನೃ]ಪಕಾಳಾತೀತಸಂವತ್ಸರಂಗಳೆಟ್ನೂಱ-ತೊಮ್ಬತ್ತಮೂಱನೆಯ ಖರಮೆಮ್ಬ ವರಿಷಂ ಪ್ರವರ್ತ್ತಿಸೆ ಫಾಲ್ಗುಣಮಾಸ ಶುದ್ಧಪಕ್ಷ ಪ್ರತಿಪದ ತಿ[ಥಿ] ಬುಧವಾರ ಹಸ್ತ ನಕ್ಷತ್ರದನ್ದು—

[ನೃ]ಪತು[ಙ್ಗ]ರಾಜಮನ್ದಿರಾಂಗಣದೊಳ್ದೇ*ವಣಯ್ಯ[ಶರ್ವ್ವ]ತೀರ್ತ್ಥೋ-ದಕಸ್ನಾನಪವಿತ್ರೀಕೃತಗಾತ್ರಂ ಸ್ವಕೀಯ ಕನ್ನೆರಾಸಿಯೊಳ್ಸೋಮಗ್ರಹಣದೊ[ಳ್ಸಿ]-ಸುಳಹಾಟಿಯ್ಪದಿಂಬರು ಮಹಾಜನಮನವಧಾರಿಸಿ—

## ಸಿಸುವಿನಹಾಳದ ವಿಪ್ರರು

ಕಂ|| ಶ್ರುತಿಯೊಳ್ವಿಶ್ರುತವಿಸ್ಪ-
ಸ್ಮೃತಿಯೊಳ್ವ್ಯಾಕರಣಕಾವ್ಯನಾಟಕತರ್ಕ್ಕ-
ಸ್ಥಿತಿಯೊಳ್ಸರ್ವ್ವಾಗಮದೊ-
ಳ್ಚತುರ್ಮ್ಮುಖಪ್ರತಿಮರಯ್ಪದಿಂಬವ್ವಿಪ್ರ[ರ್] || ೬ ||
**ಮೊದಲೊಳ್ಸಿಸೂಳಹಾಟಿಂ**
ವಿದಿತಶ್ರೀಸಳುಕಿ ರಾಜ್ಯ [ದೊ*]ಳ್ಪಡೆದು ಮಹಾ-
ಸದಮಲ ಸರ್ವ್ವಕ್ರತುಗಳ-
ನುದಾರತರಮಾಗೆ ಬೇ[ಳ್ದ] ವಿಪ್ರೋತ್ತಮರಂ || ೭ ||

ವ|| ಕರೆಯಿಸಿ ಪಾದಪ್ರಕ್ಷಾಳನಪೂರ್ಬ್ಬಕಂ ಸಹಿರಣ್ಯಾಸ್ತುಪ್ರದೇಶಿಯನುಱು-ದೋನೆಲ್ಲಾ ಕಾಲಕ್ಕ(ಂ)ಮಿದನರಸರುಮೂರುಂ ಕಾದೊಡಶ್ವಮೇಧದ ಫಲಮಕ್ಕುಮಿಲ್ಲಿ

*"ನೃಪತುಂಗ ರಾಜಮಂದಿರಾಂಗಣದೊಳ್" ಎಂಬ ಮಾತಿನಿಂದ ಎರಡು ಐತಿಹಾಸಿಕ ಊಹೆ-ಗಳು ಹೊರಡುತ್ತಿವೆ: ೧. ದಾನವನ್ನು ರಾಜಸನ್ನಿಧಿಯಲ್ಲಿ ಕೊಡಬೇಕೆಂದು ದೇವಣಯ್ಯನು ನೃಪ-ತುಂಗನ ರಾಜಧಾನಿಗೆ ಹೋಗಿರಬಹುದು; ಅಥವಾ ೨. ದೇವಣಯ್ಯನ ರಾಜಧಾನಿಯಲ್ಲಿಯೆ ರಾಜನು ಬಂದರೆ ತಂಗುವುದಕ್ಕೆಂದು ಒಂದು ನೃಪತುಂಗ ಮಂದಿರವಿದ್ದಿತೆಂದು ತೋರುವುದು. ಆ ಕಾಲದಲ್ಲಿ ರಾಜನು ಅಲ್ಲಿ ಬಂದುಳಿದಿರಬಹುದು; ಆಗ ಅಲ್ಲಿ ದಾನಕ್ರಿಯೆ ನಡೆದಿರಬಹುದು. ಇವೆರಡೂ ಊಹೆಗಳೇ ಮಾತ್ರ.

ಸೊಲ್ಲಗೆಯ ತುಪ್ಪಮನುಣ್ಬೆನೆಂಬಾತಂ ಬಾರಣಾಸಿಯೊಳ್ಸಾಸಿರಂ ಗೋಬಾಳಸ್ತ್ರೀದ್ವಿಜ-ಗುರುಗಳಂ ಕೊನ್ದ ಮಹಾಪಾತಕರಪ್ಪರ್.

ಶ್ರೀ[ಸ]ಕುಲಮೇರುಗಿರಿವೋ-
ಲಾಸಸಿರವಿಕಿರಣತತಿಗಳುಳ್ಳನ್ನೆಗಮೀ-
ಶಾಸನದ ಶಿಲಾಸ್ತಂಭಂ
ಭಾಸುರತರಮಾಗಿ ನಿಲ್ಕೆ ವಸುಧಾತಳದೊ[ಳ್] ॥ ೮ ॥

೬

## ಬೇಗೂರು,
## ಬೆಂಗಳೂರು ತಾಲೂಕು,
ಬೆಂಗಳೂರು ಜಿಲ್ಲೆ

## ೯ನೆಯ ಶತಮಾನ
## ಗಂಗ ಎಱೆಯಪ್ಪರಸ
(ಎಪಿ. ಇಂ. ೧, ಪು. ೩೫೦)

## ವೀರರಿಗೆ ಪುರಸ್ಕಾರ

ಹಗೆಗಳನ್ನೆಲ್ಲ ಇಲ್ಲದಂತೆ ಮಾಡಿ ಗಂಗವಾಡಿಯನ್ನು ಏಕಚ್ಛತ್ರದಿಂದ ಆಳುತ್ತಿದ್ದ ಎಱೆಯಪ್ಪರಸನು, ತನ್ನ ಅಪ್ಪಣೆಯಂತೆ ಅಯ್ಯಪದೇವನು ವೀರ ಮಹೇಂದ್ರನೊಡನೆ ತುಂಬೆಪಾಡಿಯಲ್ಲಿ ಕಾದಿ ಸತ್ತುದನ್ನು ಕೇಳಿ ಮೆಚ್ಚಿ, ಇರುಗನಿಗೆ ನಾಗತ್ತರ ಪಟ್ಟವನ್ನು ಕಟ್ಟಿ ಬೆಂಪೂರು–ಹನ್ನೆರಡನ್ನಿತ್ತನೆಂದು ಹೇಳಿದೆ. ಮಹೇಂದ್ರನೆಂದರೆ ಚೋಳರಾಜನಿರಬೇಕು. ಇರುಗನು ಕಾದಿ ಮಡಿದ ಅಯ್ಯಪದೇವನ ಮಗನಾಗಿರಬಹುದು.

ಓಂ ಸ್ವಸ್ತಿ. ಸಮಸ್ತಭುವನವಿನುತ ಗಂಗಕುಳಗಗನನಿರ್ಮ್ಮಳತಾರಾಪತಿ ಜಳಧಿಜಳವಿಪುಳವಳಯಮೇಖಳಾಕಳಾಪಾಳಂಕೃತೈಕಾಧಿಪತ್ಯಲಕ್ಷ್ಮೀಸ್ವಯಂವೃತ-ಪತಿತ್ವಾದ್ಯ[1]ಗಣಿತ ಗುಣಗಣವಿಭೂಷಣ ವಿಭೂಷಿತವಿಭೂತಿ ಶ್ರೀಮದೆಱೆಯಪ್ಪರಸಂ ಪಗೆವರೆಲ್ಲಮನ್ನಿ[ಃ]ಕ್ಷತ್ರಮ್ಮಾಡಿ ಗಙ್ಗವಾಡಿ ತೊಮ್ಬತ್ತಾಱು ಸಾಸಿರಮುಮನೇಕ-ಚ್ಛತ್ರಚ್ಛಾಯೆಯೊಳಾಳುತ್ತಮಿರ್ದ್ದು, ಬೀರ ಮಹೇನ್ದ್ರನೊಳ್ಕಾದಲೆನ್ದು ಅಯ್ಯಪ-ದೇವಙ್ಗೆ ಸಾಮನ್ತಸಹಿತಂ ನಾಗತ್ತರನಂ ದಣ್ಡುವೇೞ್ದೊಡೆ ತುಮ್ಬೆಪಾದಿಯೊಳ್ಕಾದಿ ಕಾಳೆಗಮಿಮ್ಬುಱಿದೊಡೆ ಆನೆಯೊಳಾನ್ತಿಱಿದು ಸತ್ತೊಡದಂ ಕೇಳ್ದೆಱೆಯಪಂ ಮೆಚ್ಚಿ ಇರುಗಙ್ಗೆ ನಾಗತ್ತರವಟ್ಟಂಗಟ್ಟಿ ಬೆಂಪೂಪ್ಪ[ೞ*]ನ್ನೆರಡುಮಂ ಶಾಸನಬದ್ಧಂ ಮಾಡಿ ಕಲ್ನಾಡಿತ್ತನವಾವುವೆನ್ದೊಡೆ[2] —

1. ಶಾ. ಮೂ. ಪತಿತಾದ್ವಾ

2. ಕಲ್ನಾಡು : ಒಂದು ಪ್ರದೇಶಕ್ಕೆ ಆಗಿನ ಹೆಸರು. ಇದರಲ್ಲಿ ಬೆಂಪೂರು-೧೨ರ ಊರುಗಳನ್ನು ಶಾಸನದಲ್ಲಿ ಮುಂದೆ ಹೇಳಿದೆ.

# ೭

## ಕಳಸ, ಸಿಗ್ಗಾವಿ ತಾಲೂಕು, ಧಾರವಾಡ ಜಿಲ್ಲೆ

## ಕ್ರಿ. ಶ. ಸು. ೮೩೦ ರಾಷ್ಟ್ರಕೂಟ ೩ನೆಯ ಗೋವಿಂದ

(ಎಪಿ. ಇಂ. ಸಂ. ೧೩ ಪು. ೩೨೯)

ಈ ಶಾಸನದಲ್ಲಿ ಕಳಸ ಎಂಬ ಹೆಸರೇ ಎಲ್ಲಿಯೂ ಬಂದಿಲ್ಲ. ಇಲ್ಲಿ ವರ್ಣಿತವಾದ ಅಗ್ರಹಾರ ಕಾಡಿಯೂರೇ ಕಳಸವಾಗಿರಬಹುದೆಂದು ತೋರುತ್ತದೆ. ಹುಲಿಗೆರೆಯ ನೆರೆಯ ಈ ಕಾಡಿಯೂರು, ಅದರ ಕೊಂಡಲಿಕೆರೆ, ಅಲ್ಲಿಯ ಜನಗಳು ವಿಶದವಾಗಿ, ಸೊಗಸಾಗಿ ಇಲ್ಲಿ ವರ್ಣಿತರಾಗಿದ್ದಾರೆ. ಊರ ಜನಸಾಮಾನ್ಯರ ಗುಣವಿಶೇಷಗಳನ್ನು ಕೂಡ ಬಣ್ಣಿಸಿರುವುದೊಂದು ಈ ಶಾಸನದ ವಿಶೇಷ. ಈ ಅಗ್ರಹಾರದಲ್ಲಿ ವ್ಯಾಕರಣ, ಅರ್ಥಶಾಸ್ತ್ರ, ಸಾಹಿತ್ಯವಿದ್ಯೆ, ಇತಿಹಾಸ, ಏಕಾಕ್ಷರ ಇವೆಲ್ಲವನ್ನೂ—ಅವುಗಳಿಗೆ ಟೀಕೆ ಬರೆಯಬಲ್ಲವರಾಗುವಷ್ಟು—ಸಮಗ್ರವಾಗಿ ಕಲಿಸಲಾಗುತ್ತಿತ್ತು.

ಕೊನೆಯ ಕಂದಪದ್ಯದಲ್ಲಿ ಶಾಸನಕವಿ ತನ್ನನ್ನು ' ಕವಿರಾಜರಾಜ ' ಎಂದುಕೊಂಡಿದ್ದಾನೆ. ಈ ಹೆಸರು ಸೂಚಕವೆಂದು ಅವನು ಇಟ್ಟುಕೊಂಡುದಾಗಿದ್ದರೆ ಕವಿರಾಜ ಎಂಬವನೊಬ್ಬ ಇದ್ದ, ಆತನಿಗೂ ತಾನು ಮೇಲು ಎಂದು ಈ ಕವಿ ಹೇಳಿಕೊಂಡಂತೆ ಆಗುವದು. ತನ್ನ ವಚಃಪ್ರಭಾವವು ಅಲಂಕಾರವಿಶೇಷವುಳ್ಳುದೆಂದು, ಗ್ರಾಮವಾಸಿಗಳ ವರ್ಣನಾಪ್ರಸಂಗದಲ್ಲಿ ಕವಿ ಎಂದಿದ್ದಾನೆ : ' ಕವಿರಾಜವಚಃಪ್ರಭಾವದನ್ತಳಂಕಾರಮುಮನೊಳಕೊಣ್ಡ ಜನಂಗಳಿಂ '

### ಗೊಜ್ಜಿಗದೇವ (ಗೋವಿಂದ)

ಈತನು ಹಗೆಗಳನ್ನು ಜಯಿಸಿ 'ನೃಪತುಂಗ' ಎಂಬ ಬಿರುದನ್ನು ತಳೆದವನು; ಆನೆಯೇರಾಟದಲ್ಲಿ ತನಗೆ ಸರಿಯಿಲ್ಲದವನು ಆಗಿದ್ದನು.

ಮ ವಿ॥ ಪಗೆಗೊಣ್ಡಾಡುವ ಶತ್ರುಭೂಪತಿಗಳಂ ದೋರ್ಗ್ಗರ್ವ್ವದಿಂದೇಱಿದು-
ಗ್ರಗಜೇಂದ್ರಂ ಬೆರಸೋವದನ್ತಕನ ಬಾಯೊಳ್ ತೂಪ್ಪಿ ಮತ್ತಂ ಶರ-
ಣ್ಬುಗಲೆಂದಿರ್ಪ್ಪವನೀಶ್ವರಪ್ರತತಿಯಂ ಕೈಕೊಣ್ಡು ಕಾದೆಯ್ದೆ ಗೊ-
ಜ್ಜಿಗದೇವಂ ನೃಪತುಂಗನೆಂಬಳವನೊಲ್ದಂಗೀಕೃತಂ ಮಾಡಿದ ॥ ೯ ॥

ಕಂ ॥ ಇಭಪರಿಣತಿಯೊಳಮಾನುಷ-
ವಿಭವದೊಳೌದಾರ್ಯ್ಯವೃತ್ತಿಯೊಳ್ ಸಾಹಸದೊಳ್
ಸುಭಟತೆಯೊಳ್ ಗೊಜ್ಜಿಗವ-
ಲ್ಲಭನಂ ಮಿಗಲುರ್ವ್ವಿನೃಪರನಾಂ ಕಣ್ಡಱಿಯೆ ॥ ೧೦ ॥

ಮುನಿದಿದಿರಾಗೆ ಶರಣ್ಬುಗೆ
ಮನಮೊಲ್ದುದನೆರೆಯೆ ಫಲ್ಗುಣಂ ಧಾತ್ರಂ ಕ-
ರ್ಣ್ಣನೆನಲ್ ಗೊಜ್ಜಿಗಭೂಪಾ-
ಳನನೆಯ್ದುವ ಭೂಮಿಪಾಳಕರ್ಕ್ಕಲರೊಳರೆ ॥ ೧೧ ॥

## ರಾಜಮಾನ್ಯತೆಯ ಚಿಹ್ನಗಳು

ವೀಸೋತ್ತರ ಪಂಡಿತನು ರಾಜನಿಂದ ಈ ಕೆಳಗಣ ರಾಜಚಿಹ್ನಗಳನ್ನು ಪಡೆದು ಗೌರವಿತ-ನಾದನೆಂದು ಹೇಳಿದೆ:

ಮ.ಸ್ರ || ಗುಡಿ ಶಂಖಂ ಚಾಮರಂ ಬೆಳ್ಗೊಡೆ ಘಳಿಗೆ ವಿಚಿತ್ರಾತಪತ್ರವ್ರಜಂ ಪೆ-
ರ್ವ್ವಿಡಿ ಸೌಧಂ ಚಿತ್ರದಣ್ಡಂ ಪಳಿಯೆಸೆವ ಝಳಂಬಂ ಗಜೇಂದ್ರಂ ತುರಂಗಂ
ನಡೆಮಾಡಂ ದಣ್ಡನಾಥೋತ್ತಮಪದವಿ ಮಹಾತೂರ್ಯ್ಯವೆಂಬಿಂತಿವಂತುಂ
ಪಡೆದಂ ಚೆಲ್ವಿಂದೆ ವೀಸೋತ್ತರವಿದಿತಧರಾದೇವನಿಷ್ಟಪ್ರಭಾವ ||೧೪||

## ಪುಲಿಗೆಱೆ

ಕಂ|| ಭರತಮಹೀಮಣ್ಡಲಕಾ-
ಭರಣಂ ಕುನ್ತಳ[1] ಧರಾತಳಂ ತದ್ವಿಷಯ-
ಕ್ಕೆರಡಱುನೂಱು ಲಲಾಟಂ
ಪುರಿಕರಜನಪದಮುದಕ್ಕ ನವಪವಿಮುಕುರಂ ||೧೫||

ಆ ಪುಲಿಗೆಱೆನಾಡೊಳಗೆ
ಶ್ರೀಪುಂಜಂ ದೇವತಾನಿವಾಸವಿಳಾಸ-
ವ್ಯಾಪಾರಕೃತಂ ನೆಗಟ್ದ ಮ-
ಹಾಪಟ್ಟಣಮೊಪ್ಪನಾಳ್ದ ಪುಲಿಗೆಱೆಯೆಸೆಗುಂ ||೧೬||

## ಎಱೆಯನ ಕಾಡಿಯೂರ ಸೊಬಗು

ವ|| ಆ ಪುರಿಕರನಗರದ ಪಶ್ಚಿಮಪ್ರದೇಶದೊಳ್

ಚಂ|| ಪೊಱವೊಳಲೊಳ್ಪೊದಳ್ದ ನವಸನ್ದನಬೃನ್ದದಿನೊಪ್ಪನಾಳ್ದ ಪೆ-
ರ್ಗ್ಗಱೆಗಳಿನೊನ್ದೆ ಗಾವರಿಸುತಿರ್ಪ್ಪ ಮದಾಳಿಯಿನೆಯ್ದೆ ಪೂದ[2] ಕಿ-
ಕ್ಕಱಿ ನಿಮಿರ್ದಿರ್ದ್ದ ಪಾದರಿಯಿನೂದುವ ತೆಂಬೆಲರಿಂ ಬೆಡಂಗುವೆ-
ತ್ತೆಱೆಯನ ಕಾಡಿಯೂರ್ವ್ವಯಸಿ ನೋಪ್ಪರ ಕಣ್ಗೆಸೆದೊಪ್ಪಿ ತೋಱುಗು ||

ತುಱುಗಿ ಕವಲ್ದು ಕತ್ತಲಿಪ ಚೂತಕುಜಂಗಳೊಳೊಂದಿ ಕಂಪಿನೊ-
ಳ್ನೆಱೆದು ರಸಂಗಳಂ ತಳೆದ ಪಣ್ಗೊಲೆಯಂ[3] ಗಿಳಿವಿಣ್ದು ಚುಂಚುವಿಂ-
ದಿಱಿದಡೆ ಸೋರೆ ಸೋನೆಯೊಳೆ ದಾಂಗುಡಿ ಮಿನ್ದೆಸೆದಿರ್ಪ್ಪವೊಪ್ಪಿನಿ-
ನ್ದೆಱೆಯನ **ಕಾಡಿಯೂರ** ಲತೆವಳ್ಳಿಯುಮಲ್ಲಿಯು ನಾಗವಲ್ಲಿಯುಂ ||೧೮||

---

1 ಪಾ. ಮೂ. : ಕೂನ್ತಳ
2. ಪೂದ : ಪೂತ
3. ಪಣ್ಗೊನೆಯಂ ಎಂದಿರಬಹುದೆ?

ಪೆ[UUU—U-]ನ್ತು ನೊ[1]ನ [-]ಡೆ ಪ್ರೊಗರ್ತ್ತೆಗಳುಂಬಮೊಳ್ಪವೆ-
ತ್ತೆಱೆಯನಳುರ್ಕ್ಕೆಯಿಂ ನೆಲಸಿದಂ ನೆಲಸಿರ್ದ್ದುದಱಿಂದೆ ಕಾಡಿಯೂ-
ರೆಱೆಯನ ಕಾಡಿಯೂರೆನಿಸಿ[2] ರೂಢಿಯಿನಾವಗಮುರ್ಪ್ಪುಗಾಯ್ದುದಾ-
ರಱವರೊ ಬಣ್ಣಿಸಲ್ ಭುವನಸಾರಮೆನಲ್ಕೆಗಟ್ದಿಗ್ರಹಾರಮು ||೧೮||

## ಕೊಂಡಲಿಗೆಱೆ

ಈ ಕೆರೆ ಭೂತಳಸತಿಯ ಮೇಖಲೆಯೆಂಬ ಸಮುದ್ರದಂತಿದೆ ಎಂದಿರುವುದರಿಂದ ಊರ ಸುತ್ತಲೂ (ಅರ್ಧಕ್ಕಿಂತ ಹೆಚ್ಚು ಭಾಗವಾದರೂ) ಇದು ಬಳಸಿರಬೇಕೆಂದು ತೋರುತ್ತದೆ. ಹಾಗೆಯೇ ‘ಕೊಂಡಲಿ (ಕುಂಡಲ)’ ಎಂಬ ಹೆಸರೂ ಈ ಮಾತನ್ನು ಪೋಷಿಸುತ್ತದೆ.

ಕುಲಗಿರಿ ಭೀತಿ[3]ಯಿನ್ದೆ ಮಱೆವೊಕ್ಕಡೆ ಕೊಂಡ ಸರೋರುಹಾಧರಂ
ನೆಲಸಿದನಬ್ಜವಾಹನನೆಸಲ್ದಿಸರಾಜನಿವಾಸಮಾದ ಭೂ-
ತಳಸತಿಗೊಳ್ಪನಾಳ್ದ ನವಮೇಖಳೆಯೆಂಬ ಸಮುದ್ರದನ್ತೆ ಕೊ-
ಣ್ಡಲಿಗೆಱೆಯೊಪ್ಪಿತೋರ್ಪ್ಪುದೆನೆ[4] ಬಿಣ್ಪಿನೊಳಾವರಿಸಿರ್ದ್ದ ಪೆಂಪಿನೊಳ್ ||

ಕ್ರಮದಿನಳುರ್ಕ್ಕೆವೆತ್ತು ನಿಬಿಡೋನ್ನತಮಾಗಿ ಬೆಡಂಗಿನಿಂ[5] [6]ಚತು-
ಸ್ಸಮಯದ ದೇವತಾನಿಳಯಮೊಪ್ಪುಗುಮಲ್ಲಿಯ ಪೂಜೆಯಲ್ಲಿಯು-
ತ್ತಮಮುನಿನಾಥರಲ್ಲಿಯ ಮಹಾಮಹಸಂಪದಮಲ್ಲಿಯೊಳ್ಪನಾ-
ಳ್ದೆಸೆದಮುರ್ದ್ದೆತ್ತಲುಂ ಮಿಳಿರ್ದ್ದ ಕೇತನರಾಜಿ ಕರಂ ವಿರಾಜಿಸಲ್ ||೧೯||

ಕಂ|| ಬಳಸಿದ ದೇವಾಲಯಮುಂ
ಘಳಿಗೆಯುಮಾಹಾರಧಾನಿಯುಂ ಪ್ರಪೆಯುಂ[7] ಬೆ-

---

1. ಶಾ. ಮೂ. ನೂ. ಮೂಲದ ಸಂಪಾದಕರು ನೊ ಎಂದು ಶುದ್ಧ ಪಾಠ ಕೊಟ್ಟಿದ್ದಾರೆ.
2. ಎಱೆಯನೆಂಬಾತನು ಅಥವಾ ಅಧಿಪತಿ ನೆಲಸಿದ್ದರಿಂದ ಈ ಊರನ್ನು ಎಱೆಯನ ಕಾಡಿಯೂರೆಂದೂ ಜನ ಎನ್ನುತ್ತಿದ್ದರೆಂದು ತೋರುವುದು.
3. ಶಾ. ಮೂ. ಭಿತ್ತಿ
4. ಶಾ. ಮೂ. ತೋಱುವುದೆನೆ.
5. ಶಾ. ಮೂ. ಬೆಡಂಗಿನೇಂ.
6. ಜೈನ, ಬೌದ್ಧ, ಶೈವ, ವೈಷ್ಣವ ಈ ನಾಲ್ಕೂ ಮತಗಳ ದೇವಾಲಯಗಳು.
7. ಪ್ರಪೆ : ಪ್ರಪಾಶಾಲೆ, ಅರವಟ್ಟಿಗೆ.

ಳ್ವಿಳಿಸಿದ್ದ ಶಾಸ್ತ್ರದಾನಮು-
ಮಳವಟ್ಟವೊ ಕಾಡಿಯೂರೊಳಾಣ್ನೋಡುವಡೆ[1] ||೨೦||

## ಕಾಡಿಯೂರ ಜನಗಳು

ವ|| ಮತ್ತಮಲ್ಲಿ ಬಡಿವುದುಂ ಬಿಡುವುದುಂ ಚಾಪವಿದ್ಯೆಯೊಳ್, ಕೃತ್ರಿಮ[2]-ಮುಮನಿತ್ಯಮುಮಿಂದ್ರಜಾಲದೊಳ್, ಕಡಂಗುವುದುಂ ಇಸುವುದುಮುಭ್ರಪಟಳ-ದೊಳ್, ಸರಳತೆಯುಂ ಬಡತನಮುಮಬಳಾಮಧ್ಯದೊಳ್, ನಡುಕಮುಮಾ-ಱಡಿಯುಂ[3] ಚೂತಮಂಜರಿಯೊಳ್, ಕುಂದುಂ ಕಳಂಕಮುಂ ಹರಿಣಾಂಕನೊಳ್, ಉಕ್ಕಾರಮುಂ ಕಂಪಮುಂ[4] ಮಣ್ಡಳಾಗ್ರದೊಳ್, ಸೆಱೆಯುಮೇಱುಂನೆತ್ತಮಾಡುವ-ರೊಳ್, ಲೋಭಮುಮೆಳಿಕೆಯೊನೆ[ಯೊ]ಳ್ಪಿನೊಳ್, ನಿರೋಧಮುಂ ನಿಷ್ಪರಿಗ್ರಹಮುಂ[5] ತಪೋವೃತ್ತಿಯೊಳ್, ಪೆಱತೊಂದೆಡೆಯೊಳಿಲ್ಲೆ ನಿಸಿದ ತಾರ್ಕ್ಷ್ಯಪಕ್ಷದನ್ತ್ಯೈಕ್ಯಪಕ್ಷಪ್ರತಿ-ಪಾಳನೆಯುಮಂ, ಮಕರಕೇತದಂತೆ ಮರ್ಯ್ಯಾದೆಯುಮಂ[6], ಪರ್ವ್ವತರಾಜನನ್ತೆ ಪ್ರತಿಪನ್ನತೆಯುಮನುರ್ವ್ವರೆಯನ್ತೆ ಕ್ಷಾನ್ತಿಯುಮಂ, ಕವಿರಾಜರಾಜಪ್ರಪಂಚಃಪ್ರಭಾವ-ದನ್ತಳಂಕಾರಮುಮನೊಳಕೊಣ್ಡ ಜನಂಗಳಿಂ ಮನಂಗೊಳಿಸುತ್ತಮಿಪ್ಪುದು.

ಚಂ|| ಉದಧಿವೃತಾವನೀತಳದೊಳೇಟಿಪ್ಪೊಡೆವಾಳಿಸೆ ಕಾಡಿಯೂರನೆ-
ಯ್ದಿದಪುವೆ ಮತ್ತಿನೂರ್ ವಿಬುಧರಲ್ಲಿದರನ್ವಿತಸತ್ತ್ವವೀಧ್ರರ-
ಲ್ಲಿದರಭಿಧೀನರಲ್ಲಿದರುದಾರಿಗಳಲ್ಲಿದರಾಗಮಜ್ಞರ-
ಲ್ಲಿದರನವದ್ಯತತ್ತ್ವವಿದರಲ್ಲಿದರಲ್ಲಿದರೆಲ್ಲಮಲ್ಲಿದರ್ ||೨೧||

## ಕಾಡಿಯೂರ ಇನ್ನೂರ್ವರು

ಕಂ|| ನಿರವದ್ಯವೇದವಿದ್ಯಾ-
ಪರಿಣತರತಿವಿಷಮಶಬ್ದವಿದ್ಯಾಗಮಸ-
ತ್ಪರಿಣತರೆನಿಸಿದ್ದಿರ್ಣ್ನೂ-
ರ್ವ್ವರ ಚರಣವಿಪ್ರಕುಳಂ ವಿಚಿತ್ರಾಭರಣಂ ||೨೨||

---

1. ಆರ್+ನೋಡುವಡೆ=ಆಣ್ನೋಡುವಡೆ. ಈ ಶಾಸನದಲ್ಲೆಲ್ಲಾ ಇದೇ ಬಗೆಯಾಗಿ ಸಂಧಿಕಾರ್ಯ ಮಾಡಿಕೊಳ್ಳಲಾಗಿದೆ. ಇರ್+ನೂರ್ವ್ವರ್=ಇರ್ಣ್ನೂರ್ವ್ವರ್. ಇರ್ದ್ದರ್+ನೋಪ್ಪೊಡೆ=ಇರ್ದ್ದಣ್ನೋಪ್ಪೊಡೆ ಇ. ರ್ ಅಕ್ಕರದೊಡನೆ ಸೇರಿದ (ಮಧ್ಯೆ ಸ್ವರ ಮತ್ತು ಕ ಪವರ್ಗಾಕ್ಷರಗಳಿರುವಾಗಲೂ) ನ ಕಾರವು ಣ ಕಾರವಾಗುವುದೆಂಬ ಸಂಸ್ಕೃತಸಂಧಿನಿಯಮ ವನ್ನು ಕವಿ ಇಲ್ಲಿ ಅನ್ವಯಿಸಿಕೊಂಡಿದ್ದಾನೆ.

2 ಶಾ. ಮೂ. ಕಿತ್ತ್ರಿಮ 3 ಶಾ. ಮೂ. ನಡುಕಮುಂಮಾಱಡಿಯುಂ

4 'ಕಂಪಣಮುಂ' ಎಂದಿರಬಹುದೆ? 5. ಶಾ. ಮೂ. ನಿಃಪರಿಗ್ರಹಮುಂ (ಉಪಧ್ಮಾನೀಯಪ್ರಯೋಗ).

6 ಶಾ. ಮೂ. ಮರ್ಯ್ಯಾದೆಯುಂಮುಂ

ಮ.ಸ್ರ.॥ ಶರಧಿವ್ಯಾವೇಷ್ಟಿತೋರ್ವ್ವೀತಳದೊಳೆಸೆಯುತಿರ್ಪ್ಪಗ್ರಹಾರಂಗಳಂ ಧಿ-
ಕ್ಕರಿಸಲ್ಸಾಲ್ದತ್ತು ನಾನಾಫಳವಿಳಸನದಿಂ ಕಾಡಿಯೂರಲ್ಲಿಯಿಣ್ಣೂರ್-
ವ್ವರ ವಿದ್ಯಾಭ್ಯಾಸಮಿಣ್ಣೂರ್ವ್ವರ ವಿಧಿಲಸದಾಚಾರಸಂಪತ್ತಿಯಿಣ್ಣೂರ್-
ವ್ವರ ದಾನೋದಾರಿಯಿಣ್ಣೂರ್ವ್ವರ ವಿಮಳಯಶಃಶ್ರೀವಿಚಿತ್ರಂ ಪವಿತ್ರ॥

ಚಂ॥ ನೆಱೆಯೆ ಬೆಡಂಗನಾವರಿಸಿ ತೋರ್ಪ್ಪ ಮಹಾಪದಕಕ್ಕೆ ಪದ್ಮಜಂ
ಮಿಱುಗುವ ರತ್ನಮಂ ರಚನೆ ಮಾಡಿದವೋಲ್ ನಡೆ ನೋರ್ಪ್ಪವರ್ಗ್ಗೆ ಕಿ-
ಕ್ಕಿಱಿಗಿಱಿದೊಪ್ಪನೊನ್ದು ಮಿಗುವೆನ್ದೊಡಕೊತ್ತಿ ವಿರಾಜಿಸುತ್ತಮಿ-
ರ್ಪ್ಪೆಱೆಯನ ಕಾಡಿಯೂರುಮೆಸೆವಲ್ಲಿಯ ವಿಪ್ರರುಮೊಪ್ಪಿ ತೋಱುಗುಂ॥

ಕಂ॥ ವ್ಯಾಕರಣಮರ್ತ್ಥಶಾಸ್ತ್ರಾ-
ನೀಕಂ ಸಾಹಿತ್ಯವಿದ್ಯೆಯಿತಿಹಾಸಂ ಮಿ-
ಕ್ಕೇಕಾಕ್ಷರಮಿನಿತರ್ಕ್ಕಂ[1]
ಟೀಕಂ ಬರೆಯಲ್ಸಮಗ್ರರಾ[2] ಭ್ಯಾಸಿಸುವರ್ ॥೨೫॥

ಮ ವಿ.॥ ಪಿರಿಯರ್ಮ್ಮೇರುವಿನಿಂ ಧರಾವಳಯದಿಂ[3] ವಾರಾಶಿಯಿಂ ಬಿಣ್ಪಿನೊಳ್
ನಿರಹಂಕಾರತೆಯೊಳ್ ಗಭೀರತೆಯೊಳೆನ್ತುತ್ಯುತ್ತಮರ್ವ್ವರ್ಣ್ಣಿಸು-
ತ್ತಿರೆ ಪೆಂಪಂ ಕ್ಷಮೆಯಂ ಸ್ಥಿರತ್ವಮನುದಾತ್ತತ್ವಮ್ಮಾಡಿ ಸತ್ಕೀರ್ತ್ತಿಗಾ-
ಗರಮಾಗಿರ್ದ್ದ **ಮಹಾಮಹದ್ವಿಜರೊಳೊಳ್ಪಂ ತಾಳ್ದಿದಿಣ್ಣೂರ್-
ವ್ವರುಂ** ॥೨೬॥

ಜಸಮಂ ತಾಳ್ದಿದಿಳಾಮರಪ್ರಚಯಮುತ್ಯುತ್ಸಾಹದಿಂ ಗೆಯ್ದು ಬ-
ಣ್ಣಿಸೆ ತಮ್ಮುನ್ನತಿ ತಮ್ಮ ಸತ್ಯದೆಸಕಂ ತಮ್ಮೋಜೆ ತಮ್ಮಾರ್ಪ್ಪು ತ-
ಮ್ಮ ಸದಾಚಾರತೆ ತಮ್ಮ ನಿರ್ಮ್ಮಳತೆ ತಮ್ಮೌಚಿತ್ಯಸಂಪತ್ತಿ ತ-
ಮ್ಮ ಸಮಗ್ರಾಸ್ಪದಮೊಪ್ಪೆ ವರ್ತ್ತಿಸುತಮಿರ್ದ್ದಣ್ಣೋರ್ಪ್ಪೊಡಿಣ್ಣೂರ್-
ವ್ವರುಂ ॥೨೭॥

ನಿಯಮಂ ತಮ್ಮೊಳುವಾಶ್ರಯಂಬಡೆಯೆ ಷಟ್ಕರ್ಮ್ಮಕ್ರಮಂ ತಮ್ಮೊಳೋ-
ಜೆಯಿನುದ್ಯೋಗಿಸೆ ಪೌರುಷೇಯಕರಣೀಯಂ [4] ತಮ್ಮೊಳನ್ತೊನ್ತೆ ನಿ-
ರ್ಣ್ಣಯಮಾಗುತ್ತಿನ ಕೀರ್ತ್ತಿ ತಮ್ಮೊಳೆಸೆಯುತ್ತುಂ ಬೆಳ್ಪು
ತಳ್ಪೊಯ್ದು ವಾ-
ರ್ದ್ಧಿಯನೆಯ್ದುತ್ತಿರೆ ಧಾತ್ರಿಯೊಳ್ನೆಗಟ್ದರಿನ್ತೊಳ್ಪಿಂದಮಿಣ್ಣೂರ್ವ್ವರುಂ॥

---

1, 2. ಇವೆಲ್ಲಕ್ಕೂ (ಇನಿತರ್ಕಂ) ಮತ್ತು ಎಲ್ಲರೂ (ಸಮಗ್ರರ್) ಎಂದಿಲ್ಲಿ ಅರ್ಥವಾಗುವುದರಿಂದ, ಮೂಲದ ಸಂಪಾದಕರೆಂಬಂತೆ 'ಮುನಿತರ್ಕ್ಕಂ' ಎಂದೂ 'ಸಮಗ್ರಮಭ್ಯಾಸಿಸುವರ್' ಎಂದೂ ತಿದ್ದಿಕೊಳ್ಳುವ ಅಗತ್ಯವಿಲ್ಲ.

3. ಶಾ. ಮೂ. : ವಳಯ ಎಂಬ ಮೂರಕ್ಕರಗಳು ನಷ್ಟವಾಗಿವೆ.

4. 'ತಮ್ಮೊಳೆನ್ತನ್ತೆ ನಿರ್ಣ್ಣಯಮಾಗುತ್ತಿರೆ' ಎಂದಿದ್ದಿರಬೇಕು.

**ಕವಿರಾಜರಾಜ**

ಕಂ|| ಕವಿರಾಜರಾಜ ವಿಬುಧ-
ಪ್ರವರಂ ಶ್ರೀಕಾಡಿಯೂರನಲ್ಲಿಯೆ ಕಮಳೋ-
ದ್ಭವವಂಶಪ್ರೋತ್ತಮರಂ
ನವೀನವರ್ಣ್ಣನೆಯಿನೆಸೆಯಲಭಿವರ್ಣ್ಣಿಸಿದಂ ||೨೯||

೮

## ನಾಜರಹಳ್ಳಿ,

**ಸಿರಾ ತಾಲೂಕು,**
ತುಮಕೂರು ಜಿಲ್ಲೆ

**ಕ್ರಿ. ಶ. ೯೪೨**
**ಪಲ್ಲವ ದಿಲೀಪರಸ**
(ಎಪಿ. ಕ. ೧೨, ಪು. ೨೬೪)

**ಚಿಲ್ಲುಕ ಭಟಾರನ ಪಾಪ-ವಧೆ**

ದಿಲೀಪರಸನಿಂದ ನನ್ನೇಶ್ವರದೇವರಿಗೆ ದತ್ತಿಯನ್ನು ಪಡೆದ, ವಕ್ಕಾಗೆ ಭಟಾರರ ಶಿಷ್ಯನಾದ ಚಿಲ್ಲುಕ ಭಟಾರನು ಶಿವಾಗಮದ ಚೂರಿಯಿಂದ ಪಾಪವನ್ನು ಕೊಂದನೆಂದು ಆತನ ಮಹಾತಪಸ್ಸನ್ನು ಸಮರಕ್ಕೆ ಹೋಲಿಸಿ ಬಣ್ಣಿಸಲಾಗಿದೆ.

ಚಂ|| ಹರನರಸಂ ಸುರನ್ನರದ ಗುಣ್ಡು ಜಟಾವಳಿ ತೊಂಗಲಿನ್ದ್ರುದು-
ರ್ದ್ಧರಗಿರಿ ಸೇತು ಧರ್ಮ್ಮಗಳೆಯುಜ್ಜದ ಮುದ್ದಳೆ ಧೂಮವೇಳೆ ವಿ-
ಸ್ಫುರಿತ ಶಿವಾಗಮುಂ ಸುರಿಗೆಯಾಗಿರೆ ಪಾಪವನೊತ್ತಿ ಕುತ್ತಿ ನಿ-
ಷ್ಠುರಮಿಱಿದಿನ್ತು ಕೊನ್ದ ತಪದಜ್ಕಮಿದೀ **ತಪದಜ್ಕಕಾರನ** ||೩೦||

೯

## ಸಾಲೊಟಗಿ,

**ಬಾಗೇವಾಡಿ ತಾಲೂಕು,**
ವಿಜಾಪುರ ಜಿಲ್ಲೆ

**ಕ್ರಿ. ಶ. ೯೪೫**
**ರಾಷ್ಟ್ರಕೂಟ ೩ನೆಯ ಕೃಷ್ಣ**
(ಎಪಿ. ಇಂ. ೪, ಪು. ೬೩)

**ಸೆಳಱರ ಕುಲದ ಕಂಚಿಗ**

ಈತನು ಸಾಲೆಯ (ಗುಡಿಯ?) ಕಂಬಗಳನ್ನು ತನ್ನ ಹಿಂದೆ ಕಂಬದ ರೂಪದಿಂದ ಧರ್ಮ-ವನ್ನು ನಿಲ್ಲಿಸುವ ಹಾಗೆ, ಕೀರ್ತಿಸ್ತಂಭವನ್ನು ನಿಲ್ಲಿಸುವ ಹಾಗೆ ನಿಲ್ಲಿಸಿದ ಸಂಗತಿ ಇಲ್ಲಿ ಹೇಳಿದೆ. ದಾನದ ಫಲಕ್ಕಿಂತ ಅದನ್ನು ಅನುಪಾಲಿಸುವ ಫಲವೇ ಹಿರಿದು ಎಂದರಿತು, 'ಮಾಡಿಸಿದವನು ನಾನೇನು? ಮಾಡಿಸಿದವನು ಮಾಡಿಸಿದವನೇನು? ಮಾಡಿದುದನ್ನು ಕಾದವನೇ ಮಾಡಿಸಿದವನು' ಎಂದೆಣಿಸುವ ನಿರಹಂಭಾವ ಅವನದು.

ಕಂ॥ ಶ್ರೀಮಾನಧಾಮರಾಜಿತ
ರಾಮಾವಳಿ ಕುಪಣಪುರ[1] ವಿನಿರ್ಗ್ಗತನಭಯಂ
ಭೀಮಬಲಂ ಸೆಳಱರ ಕುಳ-
ಕೀ ಮಹಿಯೊಳ್ ತಿಲಕದನ್ತೆ **ಕಂಚಿಗ**ನೆಂಬೊಂ ॥೨೧॥

ಮೇಲಾಪ್ಪ್ರನಾರ್ದನಾತಂ
ಸೋಲದ ಗಣ್ಡಂ ಪ್ರತಾಪಿ ದಾನದ ಫಲದಿಂ
ಮೇಲಕ್ಕುಂ ಕೊಟ್ಟುದನನು[2]-
ಪಾಲಿಪ ಫಲಮೆಂದು ತನ್ನೊಳಱಿದಿನ್ತೆನ್ದಂ ॥೨೨॥

ಮಾಡಿಸಿದೆನಾನೆ ಶಾಲೆಯು-
ನೀಡಿತದನ್ತಿಪ್ರಿಯಾವನೀಶನವೋಲ್ ಮುಂ-
ಮಾಡಿಸಿದೊಂ ಮಾಡಿಸಿದೊನೆ
ಮಾಡಿಸಿದೊಂ ಮಾಡಿದುದನೆ ಸಲೆ ಕಾದಾತಂ ॥೨೩॥

ಅನ್ದೀ ಸಾಲೆಯ ಕಂಬದ
ಗೊನ್ದಳಮಂ ನಿಱಿಸುವನ್ದು ಕಂಬದ ರೂಪಿಂ
ಪಿನ್ದಱನನ್ನಿಱಿಸುವ[3] ವೋ-
ಲೊನ್ದೆರಡಂ ತಾನೆ ಪಿಡಿದು ನಿಱಿಸಿದೊನಾತಂ ॥೨೪॥

ಜಂಭಾರಿನಿಭಂ ಶಾಲಾ-
ಸ್ತಂಭಮನೊಳ್ಪೊದವೆ ನಿಱಿಸಿದಂ ನಿಜಕೀರ್ತ್ತಿ-
ಸ್ತಂಭಮನೆ ನಿಱಿಸುವನ್ತೆ ಸು-
ಜಂಭಂ ಕಂಚಿಗನಚಂಚಳಾಂಚಿತಧೈರ್ಯ್ಯಂ ॥೨೫॥

ಪಸರಿಸೆ ಸಮ್ಮತಿ ತನ್ನಯೆ
ದಸವನ್ದದ ನೇಸಱಂಗಳೊಳ್ ಕೆ[ಳವ]ನಿದ-
ರ್ಕ್ಕಸದೃಶನಿತ್ತಿತ್ತುದನೀ
ವಸುಧೆಗೆ ನೆಗಟ್ವಿನ್ತು ಶಾಸನಂ[4] ಬರೆಯಿಸಿದಂ ॥೨೬॥

---

1. ಕುಪಣಪುರ : ಕೊಪಣಪುರ : ಕೊಪ್ಪಳ

2. ಶಾ. ಮೂ. : ಮೇಲಕ್ಕು ಕೊಟ್ಟುದನನು. ಇದಕ್ಕೆ ಮೂಲಶಾಸನದ ಸಂಪಾದಕರು 'ಮೇಲಕ್ಕು ಕೊಟ್ಟುದನನುಂ' ಎಂದು ಶುದ್ಧಪಾಠವನ್ನು ಸೂಚಿಸಿದ್ದಾರೆ. ಇದು ಸರಿಯಲ್ಲ. ಕೊಟ್ಟುದಂ + ಅನುಪಾಲಿಪ ಎಂಬುದು ಸರಿ.

3. ಪಿನ್ದು(ಹಿಂದೆ, ತರುವಾಯ) + ಅಱನಂ (ಧರ್ಮವನ್ನು) + ನಿಱಿಸುವ

4. ಶಾ. ಮೂ. : ಶಾಸನಮಂ

## ೧೦

**ಆತಕೂರು,**
**ಮಂಡ್ಯ ತಾಲೂಕು,**
ಮಂಡ್ಯ ಜಿಲ್ಲೆ

**ಕ್ರಿ. ವ. ಸು. ೯೫೦**
**ರಾಷ್ಟ್ರಕೂಟ ೩ನೆಯ ಕೃಷ್ಣ**
(ಎಪಿ. ಇಂ. ೨, ಪು. ೧೭೧)

### ವೀರರಿಗೆ ಪುರಸ್ಕಾರ

ಅಮೋಘವರ್ಷನ ಮಾಂಡಲಿಕನಾದ ಕಚ್ಚೆಗ ಕನ್ನರದೇವನು ಚೋಳ ರಾಜಾದಿತ್ಯನ ಮೇಲೆ ಎತ್ತಿ ಹೋದಾಗ, ಬೂತುಗನೂ ಆತನ ಸೇವಕ ಮನಾಲರನೂ ಕಡುಗಲಿತನದಿಂದ ಕಾದಿದರು. ಕನ್ನರನು ಇಬ್ಬರನ್ನೂ ಮೆಚ್ಚುಗೊಟ್ಟು ಗೌರವಿಸಿದನು. ಬೂತುಗನೂ ತನ್ನ ಸೇವಕ ಮನಾಲರನನ್ನು 'ಬಾಳ್ಗೆ ಮೆಚ್ಚು' (ಖಡ್ಗಕ್ಕೆ ಮೆಚ್ಚು— ವೀರರಿಗೆ ಕೊಡುವ ಪುರಸ್ಕಾರ) ಕೊಟ್ಟು ಮನ್ನಿಸಿದನು. ಈ ಶಾಸನದಲ್ಲಿ ಇದಕ್ಕಿಂತಲೂ ಉದ್ಬೋಧಕವಾದ ಮಾತೆಂದರೆ, ವೀರ ಮನಾಲರನಿಗೆ ವೀರಪ್ರಾಣಿ ಸಾಕುನಾಯಿಯ ಮೇಲಿದ್ದ ಅಪಾರ ಪ್ರೀತಿಯನ್ನು ಪ್ರಕಟಿಸುವ ಪ್ರಾಸಂಗಿಕ ಸಂಗತಿ. ಮೆಚ್ಚಿದ ಕನ್ನರದೇವನು 'ನಿನಗೇನು ಬೇಕು, ಬೇಡಿಕೋ' ಎಂದರೆ ಈತ ಕಾಳಿಯೆಂಬ ನಾಯಿಯನ್ನು ಬೇಡಿ ಪಡೆಯುತ್ತಾನೆ. ಇಷ್ಟೇ ಅಲ್ಲ, ಆ ನಾಯಿ ದೊಡ್ಡ ಹಂದಿಯೊಡನೆ ಕಾದಿ ಅದನ್ನು ಕೊಂದು ತಾನೂ ಸಾಯುತ್ತದೆ,–ಆಗ ಮನಾಲರ ಅದಕ್ಕೊಂದು ವೀರಗಲ್ಲು ನಟ್ಟು, ಅದರ ಪೂಜೆಗಾಗಿ ಹೊಲವನ್ನು ಕೊಟ್ಟು, ಅದನ್ನುಣ್ಣುವ ಗೊರವ ಆ ಕಲ್ಲ ಪೂಜಿಸದೆ ಊಟಮಾಡಿದರೆ ಪಾತಕಿ ಎಂದು ಶಾಸನ ಬರೆಯಿಸಿದ್ದಾನೆ.

ವ|| ಸ್ವಸ್ತಿ. ಅಮೋಘವರಿಷದೇವ ಶ್ರೀಪ್ರಿಥುವೀವಲ್ಲಭ ಪರಮೇಶ್ವರ ಪರಮಭಟ್ಟಾರಕ ಪಾದಪಙ್ಕಜಭ್ರಮ[1]ರಂ ನೃಪ[1] ತ್ರಿಣೇತ್ರನಾನೆವೆಡಙ್ಗಂ ವನಗಜಮಲ್ಲಂ **ಕಚ್ಚೆಗಂ ಕೃಷ್ಣರಾಜಂ** ಶ್ರೀಮತ್ಕನ್ನರದೇವಂ[2] [3]ಅಟಿ[3]ಕ್ಕೇವದೆ[3] **ಚೋಟ ರಾಜಾದಿತ್ಯ**ನ ಮೇಲೆ ಬನ್ದು **ತಕ್ಕೋಲ**ದೊಳ್ಕಾದಿ ಕೊನ್ದು ಬಿಜಯಂಗೆಯ್ಯುತ್ತಿಟ್ಟಿ[4],

ಸ್ವಸ್ತಿ. ಸತ್ಯವಾಕ್ಯ ಕೊಙ್ಗಣಿವರ್ಮ್ಮ ಧರ್ಮ್ಮಮಹಾ[5]ರಾಜಂ[5] ಕೋಳಾಲ ಪುರವರೇಶ್ವರಂ ನನ್ದಗಿರಿನಾಥಂ ಶ್ರೀಮತ್ಪೆರ್ಮ್ಮಾನಡಿಗಳ್ ನನ್ನಿಯ ಗಙ್ಗ ಜಯದುತ್ತರಙ್ಗ ಗಙ್ಗಗಾಙ್ಗೇಯಂ ಗಙ್ಗನಾರಾ[6]ಯಣನಾತನಾಳು[6],

---

1. ಎಪಿ. ಕ.(ಸಂ ೨) ಪಾಠ= ರನಙ್ಕ
2. ಕೃಷ್ಣರಾಜ ಎಂಬ ಹೆಸರು ರೂಢಿಯಲ್ಲಿ ಕನ್ನರ ಎಂದಾಗಿದೆ. ಇಲ್ಲಿ ಎರಡನ್ನೂ ಹೇಳಲಾಗಿದೆ.
3. ಎಪಿ. ಇಂ. (ಸಂ. ೨) ಪಾಠ: . ಟೂವಜಂ
4. ಎಪಿ. ಕ. ಪಾಠ : ಟ್ಟು
5. ಎಪಿ. ಕ. ಪಾಠ : ರಾಜಾಧಿರಾಜಂ
6. ಎಪಿ. ಇಂ. ಪಾಠ : ಯಣ ತನಾಳು

ಸ್ವಸ್ತಿ. ಸಕಳಲೋಕಪರಿ[1]ತಾಪಾವಿಹತಪ್ರಭಾವಾವತಾರಿ[ತ][1] ಗಙ್ಗಾ ಪ್ರವಾಹೋದಾರ ಸಗರವಂಶ **ವಳಭೀಪುರವರೇಶ್ವರ**ನುದಾರಭಗೀರಥನಿಱಿವ ಬೆಡಙ್ಗಂ ಸಗರತ್ರಿಣೇತ್ರಂ ಸೆಣಸೆ ಮೂಗರಿಪೊಂ ಕದನೈಕಶೂದ್ರಕಂ ಬೂತುಗನಙ್ಕಕಾಱಂ,

## ನಾಯಿಗೊಂದು ವೀರಗಲ್ಲು

ಶ್ರೀಮತ್ [2]**ಮನಾಲರಙ್**[3] ಅನುವರದೊಳ್[2] ಮೆಚ್ಚಿ ಬೇಡಿಕೊಳ್ಳೆನೆ ದ್ದಡೆ, ದಯೆಯು ಮೆಱೆ[3]ವೊಳ್ಳೆವ್ಬ ಕಾಳಿಯಂ ದಯೆಗೆಯ್ಯೆನ್ದು ಕೊಣ್ಡೊನಾನಾಯುಂ ಕಳಲೆನಾಡ ಬೆಳತೂರ ಪಡುವಣದೆಸೆಯ ಮೊಱಡಿಯೊಳ್ [3]ಪಿರಿಯ ಪನ್ದಿಗೆ ಪಿಟ್ಟೊಡೆ ಪನ್ದಿಯುಂ ನಾಯುಮೊಡಸತ್ತುಪದಕ್ಕೆಯಾತು[4]ಕೂರೊಳ್ ಚಲ್ಲೇಶ್ವರದ ಮುನ್ದೆ ಕಲ್ಲನ್ನಡಿಸಿ, ಪಿರಿಯಕೆಱೆ[3]ಯ ಕೆಱೆಗೆ ಮಱ್ತ್ತಿಕಾಲಙ್ಗದೊಳಿರ್ಕ್ಕಣ್ಡುಗ ಮಣ್ಣಂ[5] ಕೊಟ್ಟರಾ ಮಣ್ಣನೊಕ್ಕಲ್[6] ನಾಡನಾಳ್ವೊನೂರನಾಳ್ವೊರೀ ಮಣ್ಣನ[7]-ೞಿದೊನಾ ನಾಯ ಗೆಯ್ದ ಪಾಪಮಂ ಕೊಣ್ಡೊನಾ ಸ್ಥಾನಮನಾಳ್ವಾ ಗೊರವನಾ ಕಲ್ಲಂ ಪೂಜಿಸದುಣ್ಡರಪ್ಪೊಡೆ ನಾಯ ಗೆಯ್ದ ಪಾಪಮಂ [8]ಕೊಣ್ಡೊನ್. ಓಂ[8]

## ಕದನೈಕಶೂದ್ರಕ ಬೂತುಗ

ಚಂ || ಉಱದಿದಿರಾನ್ತ ಚೋೞಚತುರಙ್ಗಬಲಙ್ಗಳನಟ್ಟಿ ಮುಟ್ಟಿ ತ-
ಳ್ತಿಱಿವೆಡೆಗೊರ್ವ್ವರಪ್ಪೊಡಮಿದಿರ್ಚ್ಚಪ ಗಣ್ಡರನಾಪ್ಪೆವೆನ್ದು ಪೊ-
ಟ್ಟಳಿಸುವ ಬೀರಮಂ ನೆಱೆ[3]ಯೆ [9]ಕಾಣೆಮೆ[9] ಚೋಳನೆ ಸಕ್ಷಿಯಾಗೆ ತ-
ಳ್ತಿಱಿದುದನಾಮೆ ಕಣ್ಡೆವೆನೆ ಮೆಚ್ಚದೊ[10]ರಾರ್ಸಗರತ್ರಿಣೇತ್ರನಂ ||೩೭||

---

1 ಎಪಿ. ಕ. ಪಾಠ : ತಾಪದಿಳ...ಭಾವಾವತಾರ

2 ಎಪಿ. ಇಂ. ಪಾಠ : ಮಣಲರತ[ಙ್ಗ]ನುವರದೊಳ್

3. ಎಪಿ. ಇಂ. ಪಾಠ : ಪಿರಿ[ದುಂ ಪ]ನ್ದಿಗೆ

4. ಎಪಿ. ಇಂ. ಪಾಠ : ಯತು

5. ಇರ್ಕ್ಕಣ್ಡುಗ ಮಣ್ಣು : ಎರಡು ಕಂಡುಗ ಕಾಳು ಬೆಳೆವ ಭೂಮಿ.

6 ಮಣ್ಣಂ+ಒಕ್ಕಲ್

7 ಮಣ್ಣಂ ಕರ್ಮಪದದ ದ್ವಿರುಕ್ತಿಯಾಗಿದೆ.

8. ಎಪಿ. ಕ. ಪಾಠ : ಕೊಣ್ಡಂ.

9 ಎಪಿ. ಇಂ. ಪಾಠ : ಕೋಣೆಮೆ

10. ಎಪಿ. ಇಂ. ಪಾಠ : ದ

ನರಪತಿ ಬೆನ್ನೊಳಿಟ್ಟೊ[1]ನಿದಿರಾನ್ತುದು ವೈರಿಸಮೂಹಮಿಲ್ಲಿ ಮು-
ಚ್ಚರಿಸುವರೆಲ್ಲರುಂ ಸೆರಗುವಾಬ್ದಿಪೊರಿನ್ನಿ[2]ರೆನೆನ್ದು ಸಿಜ್ಗದ-
ನ್ತಿರೆ ಹರಿ ಬೀರಲಕ್ಷ್ಮಿ ನೆರವಾಗಿರೆ ಚೋಟಿನ ಕೋಟೆಯೆವ್ಪು ಸಿ-
ನ್ಧುರದ ಶಿರಾಗ್ರಮಂ ಬಿರಿಯೆ [3]ಪಾಯಿದನಾ[3] **ಕದನೈಕಶೂದ್ರಕಂ** ||೩೮||

ಓಂ ಸ್ವಸ್ತಿ. ಶ್ರೀಎಱೆಯಪನ ಮಗಂ ರಾಚಮಲ್ಲನಂ ಬೂತುಗಂ ಕಾದಿ ಕೊನ್ದು ತೊಪ್ಪತ್ತಱುಸಾಸಿರಮುಮಂ ಆಳುತ್ತಿರೆ, ಕನ್ನರದೇವ ಚೋೞನಂ ಕಾದುವನ್ದು ಬೂತುಗಂ ರಾಜಾದಿತ್ಯನಂ ಬಿಸುಗೆಯೆ ಕಳನಾಗಿ[4] ಸು[5]ರಿಗಿಱಿದು ಕಾದಿ ಕೊನ್ದು[6] ಬನವಸೆ ಪನ್ನಿರ್ಚ್ಛಾಸಿರಮುಂ ಬೆಳ್ವೊಲ ಮೂನೂಱುಂ ಪುರಿಗೆಱೆ ಮೂನೂಱುಂ ಕಿಸುಕಾಡೆಪ್ಪತ್ತುಂ[7] ಬಾಗೆನಾಡೆಪ್ಪತ್ತುವಂ[8] ಬೂತುಗಙ್ಗೆ ಕನ್ನರ-ದೇವಂ ಮೆಚ್ಚುಗೊಟ್ಟಂ. ಬೂತುಗನುಂ[9]ಮನಾಲರಂ ತನ್ನ[9] ಮುನ್ದೆ ನಿನ್ದಿಱಿದು-ದರ್ಕ್ಕೆ ಮೆಚ್ಚಿ, ಆತುಕೂರ್ಪ್ಪನ್ನೆರಡುಂ **ಬೆಳ್ವೊಲದ [10]ಕೋಟೆಯೂರುಮಂ[10]** ಬಾಳ್ಗೆ ಮೆಚ್ಚುಗೊಟ್ಟಂ. ಮಙ್ಗಳ ಮಹಾಶ್ರೀ.

## (೧೧)

**ಶ್ರವಣಬೆಳುಗೊಳ,** **ಕ್ರಿ.ಶ. ಸು. ೯೭೫**
**ಚೆನ್ನರಾಯಪಟ್ಟಣ ತಾಲೂಕು,** **೨ನೆಯ ಮಾರಸಿಂಹ**
ಹಾಸನ ಜಿಲ್ಲೆ (ಎಪಿ. ಇಂ ೫, ಪು. ೧೭೬)

ಬಲದಲ್ಲನನ್ನು ಓಡಿಸಿ, ವಜ್ಜಳನನ್ನು ಅಟ್ಟಿ, ಪಲ್ಲವರನ್ನು ಕೊಂದ ಈ ಮಂಡಳಿಕತ್ರಿಣೇ-ತ್ರನಾದ ಗುತ್ತಿಯ ಗಂಗ ನೊಳಂಬಕುಲಾಂತಕನ ಪರಾಕ್ರಮದ ಖ್ಯಾತಿ, "ಕಾಪಾಲಿಕರು ಪಲ್ಲವರ

1. ಎಪಿ. ಕಂ. ಪಾಠ : ಱಿಟ್ಟೊ
2. ಎಪಿ. ಇಂ. ಪಾಠ : ನ್ತಿ
3. ಎಪಿ. ಇಂ ಪಾಯಿದಂ; ಎಪಿ. ಕ. ಪೊಯಿದಂ. ಇವೆರಡರಲ್ಲಿ ಪ್ರೋಯಿದಂ ಎಂಬುದು ಪ್ರಭಾವಯುತ ಪ್ರಯೋಗವಾಗಿದೆ. ಆದರೆ, ಛಂದೋನ್ಯೂನತೆಯ ದೆಸೆಯಿಂದ 'ತಾಂ ಪೊಯಿದಂ' ಎಂದೋದಬೇಕಾಗುವುದು.
4. ಎಪಿ. ಇಂ. ಪಾಠ : ಕಲ್ಲನಾಗಿ
5. ಎಪಿ. ಇಂ. ಪಾಠ : ಗು
6. ಕೊನ್ದು : ಇಲ್ಲಿ ಕೊಂದುದಕ್ಕಾಗಿ ಎಂದು ಅರ್ಥ ಹೊಂದಿಸಿಕೊಳ್ಳಬೇಕು.
7–8. ಎಪಿ. ಕ. ಪಾಠ : ಡೆಪ್ಪತ್ತು
9. ಎಪಿ. ಪಾಠ : ಮಣಲರತನ
10. ಎಪಿ. ಕ. ಪಾಠ : ಕಾಡಿಯೂರುಮಂ [ಕಳಸದ ಶಾಸನ(ಶಾ. ನಂ. ೭)ದಲ್ಲಿ ಕಾಡಿ-ಯೂರ ವರ್ಣನೆ ಬರುತ್ತದೆ. ಅದೂ ಈ 'ಬೆಳ್ವೊಲದ ಕಾಡಿಯೂರೂ' ಅಭಿನ್ನವೊ ಏನೋ.]

ಪಸಿದಲೆಗಳನ್ನು ಸರಮಾಡಿ, ಮಿಕ್ಕ ಮಂಡಳಿಕರಿಗೆಲ್ಲ, ' ಅಮ್ಮಾ ! ನೀವೂ ನಿಮ್ಮ ಹಸಿದಲೆಗಳನ್ನು ಈ ಸರಕ್ಕೆ, ಬರುವಂತೆ ಮಾಡಬೇಡಿರಿ. ಈತನನ್ನು ಕಂಡು, ಈತನ ಆಳುಗಳ ಸಾಲಿನಲ್ಲಿ ಬಾಳಿ-ಕೊಂಡು ಇರ್‍ರಿ' ಎಂದು ಸಾರುತ್ತಿರುವಂತೆ '' ಇತ್ತಂತೆ. ತಾಪೀನದಿಯ ದಡದವರೆಗೂ ಹಾರಿದೆ, ಈತನ ವಿಜಯಪತಾಕೆ. ಹಲವೆಡೆಗಳಲ್ಲಿ ಬಸದಿ ಮಾನಸ್ತಂಭಗಳನ್ನು ನಿಲ್ಲಿಸಿ, ಹಲವು ಮಹಾದಾನ-ಗಳನ್ನಿತ್ತು ಈ ಗುತ್ತಿಯ ಗಂಗನು ಕೊನೆಗೆ ಬಂಕಾಪುರದಲ್ಲಿ ಅಜಿತಸೇನಭಟ್ಟಾರಕರ ಸನ್ನಿಧಿಯಲ್ಲಿ ಆರಾಧನಾವಿಧಿಯಿಂದ ಮುಡಿಪಿದನು.

ಚಂ|| ಬಗೆಯುಲಳುಂಬಮುಪ್ಪ ಬಲದಲ್ಲನ[ನೋ]ಡಿಸಿ ಗೆಲ್ದ ಶೌರ್‍ಯ್ಯವಂ
ಪೊಗೞ್ವನೊ೵ಧಾತ್ರಿಯೊಳ್ನೆಗೞ್ದ ವಜ್ಜಳನಂ ಬಿಡೆಯಟ್ಟಿದೇೞ್ಗೆಯುಂ
ಪೊಗೞ್ವನೊ೵ಪಲ್ಲವಾಧಿಪರ .... ಮಂ ತವೆ ಕೊನ್ದ ವೀರಮಂ
ಪೊಗೞ್ವನೊ೵ಪೇೞಿಮೇಪೊಗೞ್ವನೆನ್ದೞಿಯೆಂ ಚಲದುತ್ತರಂಗನಂ||೩೯||

ಉ.ಮಾ.|| ಓಳಿಯೆ ಕೋದು ಪಲ್ಲವರ ಪನ್ದಲೆಯೊಲ್ಲಮನೆಯ್ದೆ ದಟ್ಟಿ ಕಾ-
ಪಾಳಿಕರೂೞಿ ಸಾೞಿ ಪರಮಣ್ಡಳಿಕರ್ಕ್ಕಳನಮ್ಮ ನೀವುಮಿ-
ಯೋ೵ಳಿಗೆ ನಿಮ್ಮ ಪನ್ದಲೆಗಳಂ ಬರಲೀಯದೆ ಕಣ್ಡು ಬಾೞ್ವುದಾ-
ಳೋ೵ಳಿಯೊಳೆಂಬಿನ[ಂ*]ನೆಗೞ್ದುದೊಟ್ಟಜೆ[1] ಮಣ್ಡಳಿಕತ್ರಿಣೇತ್ರನಾ ||೪೦||

ಕಂ || ನುಡಿದನೆ ಕಾವುದನೇ ಎೞ್ದ-
ಗಿಡದಿರು ಜವನಿಟ್ಟ ರಕ್ಕೆ||ನಿನಗೀವುದನೇಂ
ನುಡಿದನೆ ಎಲ್ಲದು ಕಯ್ಯದು|
ನುಡಿದುದು ತಪ್ಪುಗುಮೆ ಗಂಗಚೂಡಾಮಣಿಯಾ|| ||೪೧||

ವ|| ಓಂ. ಇನ್ತು ವಿಂಧ್ಯಾಟವೀನಿಕಟತಾಪೀತಟವುಂ, ಮಾನ್ಯಖೇಟ-ಪುರವರವುಂ, ಗೋ೵ನೂರುಮುಚ್ಚಂಗಿಯುಂ, ಬನವಾಸಿದೇಶವುಂ, ಪಾವಸೆಯ ಕೋಟೆಯುಂ ಮೊದಲಾಗೆ ಪಲವೆಡೆಯೊಳಮರಿಯುರಂ ಪಿರಿಯುರುವಂ ಕಾದಿ ಗೆಲ್ದು, ಪಲವೆಡೆಗಳೊಳಂ ಮಹಾಧ್ವಜಮನೆಟ್ಟಿಸಿ[2], ಮಹಾದಾನಂ ಗೆಯ್ದು ನೆಗೞ್ದ ಗಂಗ ವಿದ್ಯಾಧರಂ, ಗಂಗರೊಳ್ಗಣ್ಡಂ, ಗಂಗರ ಸಿಂಗಂ, ಗಂಗಚೂಡಾಮಣಿ, ಗಂಗ ಕನ್ದರ್ಪ್ಪಂ, ಗಂಗವಜ್ರಂ, ಚಲದುತ್ತರಂಗಂ, ಗುತ್ತಿಯ ಗಂಗಂ, ಧರ್ಮ್ಮಾವತಾರಂ, ಜಗದೇಕವೀರಂ, ನುಡಿದನ್ತೆ ಗಣ್ಡಂ, ಅಹಿತಮಾರ್ತ್ತಣ್ಡಂ, ಕದನಕರ್ಕ್ಕಶಂ, ಮಣ್ಡ-ಳಿಕತ್ರಿಣೇತ್ರಂ ಶ್ರೀಮನ್ನೊೞಂಬಕುಳಾನ್ತಕದೇವಂ ಪಲವೆಡೆಗಳೊಳಂ ಬಸದಿಗಳುಂ ಮಾನಸ್ತಂಭಂಗಳುಮಂ ಮಾಡಿಸಿದಂ. ಮಂಗಳಂ.

---

1. ಶಾ. ಮೂ. : ದೊಟ್ಟಜಿ
2 ಧ್ವಜಮುಂ ನೆಟ್ಟಿಸಿ ಎಂದು ಇರಬಹುದು.

ಓಂ. ಧರ್ಮ್ಮಂಗಳಂ ನಮಸ್ಯಂ ನಡಯಿಸಿ. ಬಟಿಯಮೊನ್ದು ವರ್ಷಂ ರಾಜ್ಯಮುಂ ಪತ್ತುವಿಟ್ಟು, **ಬಂ[ಕಾ]ಪುರದೊಳಜಿತಸೇನಭಟ್ಟಾರಕರ** ಶ್ರೀಪಾದ-ಸನ್ನಿಧಿಯೊಳಾರಾಧನಾವಿಧಿಯಿಂ ಮೂಱು ದಿವಸಂ ನೋನ್ತು ಸಮಾಧಿಯುಂ ಸಾಧಿಸಿದಂ.

## ೧೨

**ಸವದತ್ತಿ, ಕ್ರಿ. ಶ. ೯೮೦**

**ಸವದತ್ತಿ ತಾಲೂಕು, ಚಾಳುಕ್ಯ ೨ನೆಯ ತೈಲಪ**

ಬೆಳಗಾವಿ ಜಿಲ್ಲೆ (ಬೊಂ. ರಾ. ಏ. ಸೊ. ಜ. ೧೦, ಪು. ೨೦೪)

### ರಟ್ಟ ಶಾಂತಿವರ್ಮ

ಇವನು ತೈಲಪನ ಮಹಾಸಾಮಂತ. ಶಾಸನಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ಅನೇಕ ಶಾಸಕರ ಗುಣ-ಯೋಗ್ಯತೆಗಳಿಗಿಂತ, ಕೆಲವೊಂದು ಅಸಾಮಾನ್ಯ ಗುಣಯೋಗ್ಯತೆಗಳು ಶಾಂತಿವರ್ಮನಲ್ಲಿದ್ದವೆಂದು ಈ ಪದ್ಯ ಎತ್ತಿ ತೋರಿಸುತ್ತಿದೆ. ಈತನು ತತ್ತ್ವವಿಚಾರವನ್ನು ಬಲ್ಲವನಾಗಿ ಮಾರ್ಗನಿರ್ಣಯ ಕೊಡುವವನಾಗಿದ್ದನು. ಅಲ್ಲದೆ ಗಮಕಕಲೆ ಕೂಡ ಈತನಿಗೆ ಅವಗತವಾಗಿತ್ತು.

ಮ ವಿ. ‖ ದಯೆಯಿಂದೊಳ್ಪಿನ ತೆಳ್ಪಿನಿಂ ಗುಣಗಣಾಳಂಕಾರದಿಂ ಮಾರ್ಗನಿ-
ರ್ಣ್ಣಯದಿಂ ತತ್ತ್ವವಿಚಾರದಿಂ **ಗಮಕ**ದಿಂದಾಹಾರಭೈಷಜ್ಯನಾ-
ಭಯಶಾಸ್ತ್ರಾಮಳದಾನದಿಂ[1] ದಧಿಕನೆಂದಂದೊಳ್ಪಿನಿಂ **ಶಾನ್ತಿವ-
ರ್ಮ್ಮ**ನ ವಿಖ್ಯಾತಿಯನೊಂದೆ ನಾಲಗೆಯೊಳ[2]ಸ್ನೇವಣ್ಣಿಪಂ ಬಣ್ಣಿಪ[3] ‖

## ೧೩

**ಸೊಗಲ, ಕ್ರಿ. ಶ. ಸು. ೯೮೦**

**ಸವದತ್ತಿ ತಾಲೂಕು, ಚಾಳುಕ್ಯ ೨ನೆಯ ತೈಲಪ**

ಬೆಳಗಾವಿ ಜಿಲ್ಲೆ (ಎಪಿ. ಇಂ. ೧೬, ಪು. ೩)

ತ್ರೇತಾಯುಗದ ಕೊನೆಯಲ್ಲಿ ರಾವಣನ ನಚ್ಚಿನವರಾದ ಮಾಲಿ ಸುಮಾಲಿ ಎಂಬ ದೈತ್ಯರು ಇಲ್ಲಿ ದೇವರನ್ನು ಪ್ರತಿಷ್ಠಾಪಿಸಿದರೆಂದೂ ಸೋಲು(ಸೊಗಲ)-೩೦ನ್ನು ದೇವರಿಗೆ ದತ್ತಿಕೊಟ್ಟ-

---

1. ಚತುರ್ವಿಧ ದಾನಗಳು : ಆಹಾರ, ಔಷಧ, ಅಭಯ, ಶಾಸ್ತ್ರ(ವಿದ್ಯೆ) ಇವುಗಳನ್ನು ಕೊಡುವುದು.
2. ಶಾ. ಮೂ. ನಾಳಿಗೆ
3. ಏವಣ್ಣಿಪಂ ಬಣ್ಣಿಪ[ಂ] = ವರ್ಣ್ಣಿಸುವವನಾದರೂ ಏನು ವರ್ಣಿಸುವ?

ರೆಂದೂ ಸ್ಥಳಪುರಾಣದ ಕಥೆಯ ಉಲ್ಲೇಖ ಇಲ್ಲಿ ಬಂದಿದೆ. ಆವರಿಂದಲೇ ದೇವರಿಗೆ 'ಸುವರ್ಣ ಮಹಾಕ್ಷಿದೇವ' ಎಂದೂ, ಊರಿಗೆ 'ಸುಮಾಲಿ' ಎಂದೂ ಹೆಸರಾಯಿತಂತೆ. ಇಲ್ಲಿಯ ತಪೋ-ವನವರ್ಣನೆ ಒಳ್ಳೆಯ ಮನೋಹರವಾಗಿದೆ. 'ಪುಗಲ್' ಎಂಬ (ಪಾಪಿ ಮೊದಲಾದವರನ್ನು ಒಳಕ್ಕೆ ಬರಬೇಡಿ ಎಂದು ನಿವಾರಿಸುವ ಕೋಗಿಲೆಯ ಕುಕಿಲಿನ ವರ್ಣನೆ ಆದಿಪಂಪನು ಮಾಡಿದ ವರ್ಣನೆಯನ್ನು ನೆನಪಿಗೆ ತರುತ್ತದೆ. ಬೆಳವಾಡಿಯ ಕರಿಯ ಕೇತಿಮಯ್ಯನವಳಾದ (ಹೆಂಡತಿ-ಯಾದ) ಕಂಚಿಕಬ್ಬೆಯ ದಾನಗುಣವನ್ನು ವಿಶೇಷವಾಗಿ ಕೊಂಡಾಡಿರುವುದು, ಅಂದಿನ ಜನಗಳ ಗುಣಗ್ರಾಹಕತೆಯ ಕುರುಹಾಗಿದೆ. ಅಲ್ಲದೆ ಈ ಸನ್ನಿವೇಶದಲ್ಲಿಯೇ, ಫಲಶ್ರುತಿಯನ್ನು ಹೇಳುವು-ದಕ್ಕೆ, ಇಂದ್ರ-ಚಾಂಡಾಳೆಯರ ಸಂಭಾಷಣೆಯನ್ನು ಎತ್ತಿ ಕೊಟ್ಟಿದೂ ಔಚಿತ್ಯಪೂರ್ಣವಾಗಿದೆ. ನೀಚವರ್ಗದವರೆಂದು ಎಣಿಸಲಾದ ಜನಗಳಿಂದಲೂ, ಎಷ್ಟೋ ಸಲ, ಉಚ್ಚವರ್ಗದವರೆಂದು ಭಾವಿಸಿಕೊಂಡವರು ಅರಿವಿನ ಬೆಳಕನ್ನು ಹೊಂದುವುದುಂಟು. 'ನಾಯಿಯ ಮಾಂಸವನ್ನು ಹೆಂಡ-ದೊಡನೆ ತಲೆಬುರುಡೆಯಲ್ಲಿ ಬೇಯಿಸಿ ತಿನ್ನುವವರು ನೀಚರಲ್ಲ, ದತ್ತಾಪಹಾರ ಮಾಡುವವರು ನೀಚರು, ಎಂದು ಚಾಂಡಾಳೆ ಇಂದ್ರನಿಗೆ ತಿಳಿಹೇಳುತ್ತಾಳೆ. ಶಂಕರಾಚಾರ್ಯರು 'ಮುಟ್ಟ!' ಎಂದು-ದಕ್ಕೆ ಚಾಂಡಾಳರೂಪಿಯಾದ ಶಿವನು, 'ತಿಳಿದವರು ಆತ್ಮಗಳಲ್ಲಿ ಭೇದ ಎಣಿಸುವುದೇ ?' ಎಂದು ಕೇಳಿ ಅವರಿಗೆ ತತ್ತ್ವಬೋಧೆ ಮಾಡಿದ ಕತೆ ಸರ್ವಶ್ರುತವಿದೆ.

ಕೊನೆಯ ಕಂದಪದ್ಯದಿಂದ ಇದನ್ನು ರಚಿಸಿದವನು 'ಶಾಸನಕವಿಕಮಲಾದಿತ್ಯ'ನೆಂದು ತಿಳಿಯುತ್ತದೆ. ಕ್ಷೇತ್ರಮಹಿಮೆಯ ಪದ್ಯದಲ್ಲಿ (ಪ. ೪೫) ಕವಿ ತನ್ನನ್ನು 'ಕವಿತೇಶಮದ-ಪ್ರಭಂಜನ' ಎಂದು ಹೇಳಿಕೊಂಡಿದ್ದಾನೆ.

## ಸುವರ್ಣಾಕ್ಷಿದೇವಸ್ತುತಿ

ಕಂ॥ ಶ್ರೀಮದನವರತದನುಜನ-
ರಾಮರಮಣಿಮಕುಟತಟಘಟಿತಪದಪದ್ಮೋ-
ದ್ದಾಮಯುಗಳಂ ತ್ರಿಳೋಕ-
ಸ್ವಾಮಿ ಸುವರ್ಣ್ಣಾಕ್ಷಿದೇವರೀಗೆಮಗೊಳ್ಪ ॥೪೩॥

## ಸೋಲಕ್ಷೇತ್ರ ವರ್ಣನೆ

ಉ.ಮಾ॥ ಪಂಕಜಷಂಡದಿಂದೆಸೆವ ನೆಯ್ದಿಲ ಪೂಗೊಳದಿಂ ತಳಿರ್ತ್ತ ಮಾ-
ವಿಂ ಕುಸುಮೋದಿತಂ ಕೊಸಗು ಪಾದರಿ ನೇಱಿಲಶೋಕ ಬಾಳೆಯಿಂ-
ಬಂಕದ ವೃಕ್ಷಜಾತಿಗಳಿನಿಂಚರದಿಂ ಪುಗಲೆಂಬ ಕೋಕಿಳಾ-
ಳಂಕೃತದಿಂದೆ ಸಾಲ ಬನಮೊಪ್ಪುವುದೀ ವಿಷಯಾಂತರಾಳದೊಳ್ ॥೪೪॥
ಅಲ್ಲಿಯ ನಿರ್ಝ್ಝರೋದಕದಿನೊಪ್ಪುವ ತೀರ್ತ್ಥಮಿದೀ, ಜಗಕ್ಕೆ ಪೆಂ-
ಪೆಲ್ಲಮನಾಂತ್ತ ಶಂಕರ ಸ್ವಯಂಭು[1] ಸುವರ್ಣ್ಣಮಹಾಕ್ಷಿದೇವಪಾ-
ದೋಲ್ಲಸಿತಾಂಬುಜಂಗಳನೆ ಪೂಜಿಪ ಭಕ್ತಜನಕ್ಕೆ ಮುಕ್ತಿ ತ-
ಪ್ಪಿಲ್ಲದೆ ಕೂಡುಗೆಂದು ಪೊಗರ್ದ್ದಂ ಕವಿತೇಶಮದಪ್ರಭಂಜನ ॥೪೫॥

1. ಶಾ. ಮೂ. ಶಯಂಭು

ಕಂ॥ ಪುಲಿಗಳೆ ಧರ್ಮ್ಮಶ್ರವಣಮ-
ನೆಲೆ ಮಿಡುಕದೆ ಕೇಳುತಿರ್ಪ್ಪುವರಗಿಳಿಗಳ್ಮಿ-
ರ್ಮ್ಮಗಳ್ ಮುನಿಪರೋದು[1]ವೋದಂ
ಚಳವಾದೆಡೆಯುಱಿದು ಪೇಳ್ವುವಿರುಳುಂ ಪಗಲುಂ ॥೪೬॥

ವಾನರಸಂಹತಿ ದೇವ-
ಸ್ನಾನಂ ಮಾಡುವರ್ಗ್ಗೆ ಗದ್ದುಗೆಯ ನೀರಂ ಸ-
ನ್ಮಾನದೆ ತನ್ದೀವುವೆನ-
ಲ್ಕಾನಱಿಯೆಂ ಪೊಗಳಲವರ ತಪದುಗ್ರತೆಯ ॥೪೭॥

ಪಾಪಿ ಪುಗಲು ಪುಗಲುಗ್ರದ
ಕೋಪಿ ಪುಗಲು ಪುಗಲಶೇಷಧರ್ಮ್ಮದ್ರೋಹ-
ವ್ಯಾಪಾರಿ ಪುಗಲ್ಪುಗಲೆ-
ನ್ದಾಪೊರ್ತ್ತುಂ ಕೋಕಿಳಂಗಳುಲಿಗುಂ ಬನದೊಳ್ ॥೪೮॥

ಗಳಪುವರಗಿಳಿಯ ಕುಕಿಲುವ
ಕಳಹಂಸೆಯ ಗಾವರಿಪ್ಪ ಪೆಣ್ದುಂಬಿಯ ಬಾ-
ವಳಿಸುವ ಪುರುಳಿಯ [2]ಕೋಡಗ-
ಗಳ ನಗಿಸುವ[2] ರವಮೆ ನಗದ ನಾಲ್ಕುಂ ದೆಸೆಯೊಳ್ ॥೪೯॥

ನೋಡತನು ಮುಟ್ಟೆ ಸಿದ್ಧಂ
ಮಾಡುವ ಸೆಲಿಗನ್ತಶೇಷರಸಮೂಳಿಕೆಗಳ್
ಕೂಡುಗುಮುಮರೇನ್ದ್ರತ್ವಮ-
ನೂಡುವರಚ್ಚರಸಿಯಕ್ಕ[ರ*] ಳಾ ಮುನಿಕುಳಮ ॥೫೦॥

ಇನ್ತೆನಿಸುವ **ಸಿದ್ಧಕ್ಷೇ-**
**ತ್ರಾನ್ತರತೀರ್ತ್ಥಕ್ಕೆ** ಮುಖ್ಯನಾಶ್ರಿತಸುರಭೂ-
ಜಂ ತ್ರಿಭುವನಸಿಂಹಮುನೀ-
ನ್ದ್ರಂ ತಾಪಸಗೋತ್ರವೈರಿಕುಳಗಜಸಿಂಹ ॥೫೧॥

1. ಶಾ. ಮೂ. ಮುನಿಪಶೋದು

2. ಶಾ. ಮೂ ಕೊಡಂಗಳನಗಿಸುವ. ಇದನ್ನು ಮೂಲದ ಸಂಪಾದಕರು 'ಕೊ[೦*]ಡಂಗಳನಗಿಸುವ' ಎಂದು 'ಕುಂಡಗಳನ್ನು ಅಗಿಸುವ' ಎಂಬರ್ಥವಾಗುವಂತೆ ಸರಿಪಡಿಸಿದ್ದಾರೆ. ಆದರೆ ನಾಲ್ಕು ಪ್ರಾಣಿಗಳ ಉಲಿವುಗಳೊಡನೆ ನೆಲ ಅಗಿಸುವ—ಅದೂ ಅಗಿಯುವ ಅಲ್ಲ—ಶಬ್ದವನ್ನು ಕವಿ ಸೇರಿಸಿರಲಿಕ್ಕಿಲ್ಲ. ಕೋಡಗ ಎಂಬುದೇ ಕಂಡರಣೆಕಾರನ ತಪ್ಪಿನಿಂದ ಕೋಡಂ ಆಗಿರಬಹುದೆಂದು ತೋರುತ್ತದೆ.

## ಮಾಲಿ-ಸುಮಾಲಿ

ಉ. ಮಾ. ॥ ನೋಡಿರೆ ರಾಘವದ್ವಿಷನ ನಚ್ಚುವ ಮಾಲಿ ಸುಮಾಲಿ ದಾನವ-
ರ್ಮ್ಮಾಡಿದ ಸುಪ್ರತಿಷ್ಠೆಯದಱಿಂದೆ **ಸುವರ್ಣ್ನಮಹಾಕ್ಷಿದೇವರಿಂ**-
ಬೀಡಿತನಾಮಮಾದುದು ಸುಮಾಲಿ ವೆಸರ್ನ್ನಗರಕ್ಕೆ ರೂಡಿಯೊಳ್
ಕೂಡಿದುದೆಂದೊಡೇವೊಗಳ್ವೆ[1]ಕೊಣ್ಡಿ ಮಹೀವಳಯಾನ್ತರಾಳದೊಳ್ ॥

ಕಂ॥ ಮಾಲಿ ಸುಮಾಲಿ ದ್ವಯ ಭೂ-
ಪಾಲದ್ದೇವಗ್ಗ ಸೋಲು ಮೂವತ್ತಂ ಸ-
ಲ್ಲೀಲೆಯೊಳೆ ಬಿಟ್ಟು ಸುಗತಿಸು-
ಖಾಲಯಮಂ[2] ತ್ರೇತೆಯಂತ್ಯಕಾಲದೆ ಪೊಕ್ಕರ್ ॥೫೩॥

## ಗಂಗರಾಶಿವ್ರತಿ

ಮ. ವಿ. ॥ ತಪಮಂ ಮಾಡುವ ತಾಪಸರ್ಕ್ಕಳಳವಲ್ಲೋಹೋ ತಸುಕ್ಲೇಶಮಂ-
ಬುಪಸರ್ಗ್ಗಕ್ಕಿರದಾನ್ತು ಮೆಯ್ಯನಟವೀಶಾಖಿಂಗಳಂ ತಿನ್ದು ಮಾ-
ಧಿಪನಂ ಪೂಜಿಸಿ ಮುಕ್ತಿಯೊಳ್ಬೆರೆಯು[3]ಲೆಸ್ದಿಪ್ಪಂ ಸುವರ್ಣಾಕ್ಷಿದೇ-
ವಪದಾಂಭೋಜಶಿಳೀಮುಖಾಭನೆನಿಪಂ ಶ್ರೀಗಂಗಾರಾಶಿವ್ರತಿ ॥೫೪॥

## ಧನಗರಗೋತ್ರದ ಕಂಚಿಮಬ್ಬೆ

ಚಂ ॥ ಹರಚರಣಾಬ್ಜಭೃಂಗಿ [4]ಕಪಟೋದಯವರ್ಜಿತನಿರ್ಮ್ಮಲಾಂಗಿ[4] ಭಾ-
ಸುರತರ ಮೂರ್ತ್ತಿ ನಿರ್ಮ್ಮಳಿನಕೀರ್ತ್ತಿ ದಯಾಪರೆ ದಾನಧರ್ಮ್ಮತ-
ತ್ಪರಗುಣಯುಕ್ತೆ ದೇವಗುರುಭಕ್ತೆ ಸುಗೋತ್ರಪವಿತ್ರೆಯೆಂದು ವಿ-
ಸ್ತರದೊಳೆ ಕೀರ್ತ್ತಿಕುಂ ವಸುಧೆ ಸಂತತದಿಂದಮ ಕಂಚಿಕಬ್ಬೆಯ॥೫೫॥

ಕಂ ॥ ಮಾರಾಜನ[5] ಬೆಳಪಾಡಿಯ
ಚಾರುಗುಣಂ ಕರಿಯ ಕೇತಿಮಯ್ಯನವಳು ವಿ-
ಸ್ತಾರಗುಣಾಂಬುಧಿ ಧರ್ಮ್ಮದ
ಮೇರುವನಾ ಕಂಚಿಕಬ್ಬೆಯಂ ಪೊಗಳದರಾರ್ ॥೫೬॥

---

1 ಶಾ. ಮೂ. ವೊಗಳ್ವ ಇದನ್ನು ಮೂಲದ ಸಂಪಾದಕರು 'ವೊಗಳ್ವ[ರೋ*]' ಎಂದು ಶುದ್ಧೀಕರಿಸಿ ಕೊಟ್ಟಿದ್ದಾರೆ. ಆದರೆ, ರೋ ಸೇರಿಸಿದರೆ ಛಂದಸ್ಸು ತಪ್ಪುತ್ತದೆ.

2. ಶಾ ಮೂ. : ಸುಖಾಲಯಮಾ 3. ಶಾ. ಮೂ. : ಮುಕ್ತಿಯೊಳ್ಪರೆ

4. ಶಾ. ಮೂ. ಕಪಟೋಧಯ ನಿರ್ಜ್ಜಿತನಿರ್ಮ್ಮಲಾಂಗಿ

5. ಮೂಲದ ಸಂಪಾದಕರ ಟಿಪ್ಪಣಿ : Or Mārābana–the one letter is not clear.

ಪರಹಿತಗುಣಚರಿತದ **ಧನ-**
**ಗರಗೋತ್ರದ ಕಂಚಿಯಬ್ಬೆ** ಮಾತಾರತ್ನಂ
ಧರೆಗೆಸೆವ ದಾನಧರ್ಮ್ಮದ
ಪರಿಣತಿಕೆಯೆ ಪಿರಿದು ಪರಮಮಾಹೇಶ್ವರಿಯೆ ॥೫೭॥

## ತೈಲರಾಜಾಧಿಪ

ಮ. ವಿ. ॥ ಬಳವಚ್ಚೋಳಮಹೀಧರೇಂದ್ರಕುಳಿಶಂ ಲಾಳೇಭಪಂಚಾನನಂ
ಜಳಭೂಭೃದ್ವನದುರ್ಗ್ಗಮಾರ್ಗ್ಗಜಳಧಿವ್ರಾತಕ್ಕೆಲೇ ಬಾಡವಾ-
ನಳರೂಪಂ ರಣಕಂಭ ಕಕ್ಕಲ ಶಿರಶ್ಛೇದಂ ರಿಪೂಗ್ರಾವನೀ-
ವಿಳಯೋತ್ಪಾಟವಿಕೇತು ಚಕ್ರಿತಿಲಕಂ ಶ್ರೀತೈಲರಾಜಾಧಿಪಂ ॥೫೮॥

## ಫಲಶ್ರುತಿ

ಕಂ॥ ಮೋಳಿಸಿ ನಾಯಡಗಂ ಚಾಂ-
ಡಾಳಿ ಕಪಾಳದೊಳೆ ಕಳ್ಳನೆಱಿದಡುತಂ ತ-
ತ್ಕಾಳದೆ ಕೆಪ್ಪಿಂ ಮುಚ್ಚೆ ಸ-
ಮಾಳೋಕದೊಳಿಂದ್ರನಾಕೆಯುಂ ಬೆಸಗೊಣ್ಡಂ ॥೫೯॥

ದೇವಸ್ವಂ ಬ್ರಹ್ಮಸ್ವಮ-
ನಾವು....ನ್ದ ಪಾತಕನ ಪಾದರಜಂ
ಭಾವಿಸಲಭೋಜ್ಯಮೆನಲಾ-
ದೇವಸ್ವಮನಳಿವನಿಂ ನಿಕೃಷ್ಟರುಮೊಳರೇ[1] ॥೬೦॥

---

1. ಈ ಎರಡು ಕಂದ ಪದ್ಯಗಳಲ್ಲಿಯ ಕಲ್ಪನೆಯ ಸಂಸ್ಕೃತ ಮೂಲಶ್ಲೋಕಗಳು ಇಂತಿವೆ:

ಇಂದ್ರಃ ಪೃಚ್ಛತಿ ಚಾಂಡಾಲೀ ಕಿಮಿದಂ ಪಚ್ಯತೇ ತ್ವಯಾ
ಶ್ವಮಾಂಸಂ ಸುರಯಾ ಸಿಕ್ತಂ ಕಪಾಲೇನ ಚಿತಾಗ್ನಿನಾ ॥
ದೇವಬ್ರಾಹ್ಮಣವಿತ್ತಾನಾಂ ಬಲಾದಪಹರಂತಿ ಯೇ
ತೇಷಾಂ ಪಾದರಜೋಭೀತ್ಯಾ ಚರ್ಮಣಾ ವಿಹಿತಂ ಮಯಾ ॥

ಈ ಶ್ಲೋಕಗಳು ದಕ್ಷಿಣ ಕನ್ನಡ ಜಿಲ್ಲೆಯ ಕೊಲ್ಲೂರು (ಕ್ರಿ. ವ. ೧೪೮೨) ಶಾಸನದಲ್ಲಿ ತಪ್ಪು ತಪ್ಪಾಗಿ ಬಂದಿವೆ. ಇವುಗಳ ಅರ್ಥ :

ಇಂದ್ರನು ಕೇಳುತ್ತಾನೆ : ‘ ಏನು ಬೇಯಿಸುತ್ತಿರುವೆ, ಚಾಂಡಾಲೀ ?’

ಚಾಂಡಾಲಿ ಹೇಳುತ್ತಾಳೆ : ‘ಹೆಂಡ ಬೆರಸಿದ ನಾಯ ಮಾಂಸ; ಹೆಣದ ಬೆಂಕಿಯ ಮೇಲೆ, ತಲೆಬುರುಡೆಯಲ್ಲಿ ಬೇಯಿಸುತ್ತಿದ್ದೇನೆ. ದೇವರ, ಬ್ರಾಹ್ಮಣರ ಸೊತ್ತನ್ನು ಅಪಹರಿಸಿದ ಪಾಪಿಯ ಪಾದಧೂಳಿ ಬಿದ್ದೀತೆಂಬ ಭಯದಿಂದ ಚರ್ಮದಿಂದ ಮುಚ್ಚಿದ್ದೇನೆ !’

**ಶಾಸನಕವಿ**

ಭುವನಂ ವನನಿಧಿ ಸುರಗಿರಿ
ದಿವಕುಳಮಿನಚಂದ್ರರುಳ್ಳಿನಂ ಧರ್ಮ್ಮಮಿದು-
ಧ್ರುವಮಾಗಿ ನಡೆಗೆ **ಶಾಸನ-**
**ಕವಿಕಮಳಾದಿತ್ಯ** ರಚಿತಕಾವ್ಯಾದೇಶಂ ||೬೧||

## ೧೪

## ತಳಂಗೆರೆ, ಕ್ರಿ. ಶ. ೧೦ನೆಯ ಶತಮಾನ

**ಕಾಸರಗೋಡು ತಾಲೂಕು, ಜಯಸಿಂಹ**

ಕೇರಳ (ಎಪಿ. ಇಂ. ೨೯, ಪ್ರ. ೨೦೩)

ಮೊನ್ನೆಮೊನ್ನೆಯವರೆಗೆ ಮಂಗಳೂರು( ದ. ಕ. ) ಜಿಲ್ಲೆಯಲ್ಲಿದ್ದ ಕಾಸರಗೋಡು ತಾಲೂಕು ರಾಜ್ಯಪುನಾರಚನೆಯ ಕಾಲಕ್ಕೆ (೧೯೫೬) ಕೇರಳ ರಾಜ್ಯದಲ್ಲಿ ಸೇರ್ಪಡೆ ಹೊಂದಿದೆ.

ಜಯಸಿಂಹನೆಂಬ ದೊರೆ ತನ್ನರಸಿ ಮೋಚಬ್ಬರಸಿಗೆ ‘ ಕನ್ಯಾದಾನ ’ವಾಗಿ ಭೂಮಿಯನ್ನು ಬಿಟ್ಟುದನ್ನು ಈ ಶಾಸನ ಉಲ್ಲೇಖಿಸುತ್ತದೆ. ಕನ್ಯಾದಾನ ಎಂಬುದನ್ನು ಹೆಣ್ಮಕ್ಕಳಿಗೆ ಕೊಟ್ಟ ಭೂದಾನ ವೆಂಬರ್ಥದಲ್ಲಿ ಬಳಸಿದಂತಿದೆ. ಕನ್ಯಾದಾನ ಕೊಡುವ ತನ್ನ ಅಪೇಕ್ಷೆಯನ್ನು ರಾಜ ತಿಳಿಸಿದಾಗ ಮೋಚಬ್ಬರಸಿ ‘ ಯಾರೂ ಮನ್ನಿಸದ ಊರನ್ನು ’—ಯಾರಿಗೂ ಬೇಡವಾದ ಎಡೆಯನ್ನು—ಬೇಡುತ್ತಾಳೆ. ಆತ ಆಗಲೆಂದು, ‘ ಯಾರೂ ಒಲ್ಲದ ಕಲ್ಕಾಡ ಬೆಟ್ಟವನ್ನು ಸಮತಳಗೊಳಿಸಿ, ಓಡಿಲು ಮನೆ-ತೋಟ-ಕೆಱೆಗಳನ್ನು ಮಾಡಿಸಿ, ಪ್ರವಾಹವನ್ನು ಸೆಱೆಯಿಟ್ಟು, ಒಪಟಿ ನೆಲವನ್ನು ಓರಿದು ಆಯಾಸದಿಂದ ಸುಕ್ಷೇತ್ರವಾಗಿ ಗೆಯ್ಯಿಸಿ ಆಕೆಗೆ ಕೊಡುತ್ತಾನೆ. ಎಂತಹ ತಪ್ಪನ್ನಾದರೂ ಮಾಡಿ ಬಂದವರನ್ನು ಮೂರು ದಿನ ಸರ್ವಪರಿಹಾರಂ ಕಾದು ಕಳಿಸುವುದು ಈ ಊರ ವಿಶೇಷವಾಗಿತ್ತೆಂದು ತಿಳಿಯುತ್ತದೆ. ಅಳಿಯ ಸಂತಾನದ ಕಟ್ಟಳೆಯನ್ನು ಇಲ್ಲಿ ಕೊನೆಯಲ್ಲಿ ಸೂಚಿಸಿದಂತಿದೆ.

**ಕನ್ಯಾದಾನಂಗೊಟ್ಟ ಭೂಮಿ**

ಕಂ || ಶ್ರೀಚಪಳತೆಯುಂ ವಚನ-
ಶ್ರೀಚತುರಾನನವಿರಾಮಮುಮಂ ಬಿಸುಟು ಜಯಂ-
ಶ್ರೀಚಾರುನೇತ್ರೆಯೊಡ ನೆರೆ-
ದಾಚಂದ್ರಾರ್ಕ್ಕಂ ವಿರಾಜಿಸಲ್ ಜಯಸಿಂಹಂ ||೬೨||

ವಚನ || ಕನ್ಯಾದಾನಮುಂ ನಿನಗಿತ್ತೆ[1]ನೆನ್ನೊಡೆ ಪೆತ್ತು ಮೋಚಬ್ಬರಸಿ ಸನ್ತೋಸಂಬಟ್ಟನ್ನೆನ್ನಡೆ,

ಇನ್ನಪ್ಪ ಭೂಪರೆಲ್ಲಂ
ನಿನ್ನೊರೆಗಂ ದೊರೆಗೆವಾರರದಱಿಂದಾರುಂ

---

1. ಶಾ. ಮೂ. ನಿನಗಿತ್ತ

ಮನ್ನಿಸದೂರಂ ಗುಣಸಂ-
ಪನ್ನ ಸಮನ್ನಿೀವುದೆನಗೆ ಕನ್ಯಾದಾನಂ ||೬೩||

ಅಕ್ಕುಮೆಂದು,

ಉತ್ಸಾಹಂ || ಊರ ಕಡೆಯ ತೋಱಿಯ ತಡಿಯ ಕರಿಯಕಲ್ಲ ಮೋಱದಿಂ
ಪುತ್ತೂರ ಪೊಲೆಯರಿಪ್ಪ ಕೇರಿಯೊವಟಿ ನೀರ ಭೂಮಿಯಂ |
ಸಾರ ಭೂರುಹಂಗಳೋಳಿಯೊಳಗೆ ನೆಱಿದ ಕೆಱಿಯನಂ-
ಭೋರುಹಾಕ್ಷಿ ತನ್ನ ಧನದಿನೊಪ್ಪೆ ಮಾಡಿಸಿಟ್ಟುದಂ ||೬೪||

ವಚನ|| ಇನ್ತಾರುಮೊಲ್ಲದ ಕಲ್ಕಾಡಬೆಟ್ಟಂ ಸವತಳಂ ಮಾಡಿಯೋಡಿಲಮನೆ-ಯುಮಂ[1] ನನ್ದನವನವುಮಂ ಮಾಡಿಸಿ, ಕೆಱಿಯಂ ಕಟ್ಟಿಸಿ, ತೋಱಿಯ ಸೆಱಿಯಿ-ಟ್ಟೊವಟಿ ನೆಲನಂ ಪಿರಿದುಮಾಯಾಸದಿಂ ಸುಕ್ಷೇತ್ರಂ ಮಾಡಿಸಿದುದದು ಮುನ್ನ ಮೂಡೆಯಿಂಕ್ಕುವೊವಟಿಪ್ಪುನೆಲದಾ ಭೂಮಿಯನೊಳಕೊಣ್ಡು ಗಟಿನಗಟಿಸಿ, ಆಸನ್ನ ಚಾವುಗಾಮಿಗಳಱಿಯೆ **ಕನ್ಯಾದಾನಂ**ಗೊಟ್ಟ ಭೂಮಿಯಂ ಕಾಲಕಾಲಾನ್ತರದೊ-ಳಾರಾನುಮಿೂ ಧರ್ಮ್ಮಮನಟಿದು ಕೊಳಲಾಟಿಸಿದ ಪಂಚಮಹಾಪಾತಕಂ ತನ್ನ ತಾಯಂ ಕೊಳಲೆನ್ದು ತನ್ನ ತನ್ದೆಯಂ ಕೊನ್ದು, ತನ್ನ ಮಕ್ಕಳ ನೆತ್ತರಂ ಕುಡಿದು, ಪಸುವುಂ ಬ್ರಾಹ್ಮಣರುಮಂ ಕುರುಕ್ಷೇತ್ರದೊಳಟಿದಾತನ ಪುಗುವ ನರಕಮಂ ಪುಗು-ವನಕ್ಕೆ. ಈ ಕನ್ಯಾದಾನಮಂ ಕೊಣ್ಡಾತನಲ್ಪಾಯುಷ್ಯನುಮಪುತ್ರಿಕನುಮಪ್ಪನಕ್ಕೆ.

**ಊರ ಕಟ್ಟಳೆ**

ಕಂ || ಆರಾದೊಡಕ್ಕೆ ಧಾತ್ರೀ-
ಭಾರಮನಾರಾನ್ತೊರಾನ್ತರ ಕಯ್ಯಾನ್ತಾ-
ಬೀರರನಿರದಾಂ ಬೇಡಿದೆ-
ನೋರಂತಿರೆ ಕಾವುದೀ ವ್ಯವಸ್ಥೆಯಿನೂರಂ ||೬೫||

ವಚನ || ಅದೆನ್ತೆನ್ದೊಡೆ,ಅರಸಾಳ್ಗಳೂರಂ ಪೊಕ್ಕನ್ದುಪುಲ್ಲಡಕ್ಕನೆತ್ತುವೊಡ-ಮೇನಾನುಮಂ ಬಿಡದೊಡಂ ಕೊಲೆಗೆ ಸಾಲ್ತರೆನ್ತಪ್ಪ ದ್ರೋಹಂಗೆಯ್ದು ಬನ್ದೂರಂ ಪೊಕ್ಕೊಡವನಂ ಮೂಱು ದಿವಸಂ ಸರ್ವ್ವಪರಿಹಾರಂ ಕಾದು ಕಟಿಪುವುದು.ಊರ್ಮ್ಮೆ ಜೋಗವ್ವೆಯ ವಂಶದೊಳ್ಪೆಣ್ಗೂಸುಗಳಲ್ಲದೆ ಗಣ್ಡುಗೂಸುಗಳ ವಂಶಕ್ಕಡಿಹಾರಮಲ್ಲದೆ ಸಲ್ಲದು. ಪೆಣ್ಗೂಸುಗಳಿಲ್ಲದೊಡೆ ಗಣ್ಡುಮಕ್ಕಳ್ಗೆ ಸಲ್ಕುಂ.

---

1. ಶಾ. ಮೂ. ಮನೆಯು

೧೫

## ಜುರ,
## ಜಬ್ಬಲಪುರದ ಬಳಿ

## ಕ್ರಿ. ವ. ೧೦ನೆಯ ಶತಮಾನ
## ರಾಷ್ಟ್ರಕೂಟ ೩ನೆಯ ಕೃಷ್ಣ

(ಎಪಿ. ಇಂ. ೧೯, ಪು. ೨೮೯)

## ಕನ್ನರದೇವ (ಕೃಷ್ಣ)

ಅಕಾಲವರ್ಷನೆಂದೂ ನೃಪತುಂಗನೆಂದೂ ಕಚ್ಚೆಗನೆಂದೂ ಎನಿಸಿಕೊಂಡ ಈತನಿಗೆ 'ಪರಾಂಗನಾಪುತ್ರಕ' ಎಂಬ ಬಿರುದು ಸಾರ್ಥಕವಾದುದೆಂದು ಇಲ್ಲಿ ಕೊಂಡಾಡಿದೆ ಅಲ್ಲದೆ, ಈತನು ಚೋಳರನ್ನೂ ಪಾಂಡ್ಯರನ್ನೂ ಬೇರುಸಹಿತ ಕಿತ್ತನೆಂದು ಐತಿಹಾಸಿಕ ಮಹತ್ತ್ವದ ಮಾತನ್ನು ಹೇಳಿದೆ.

ವ|| ಸ್ವಸ್ತಿ. ಪರಮಭಟ್ಟಾರಕ ಪರಮೇಶ್ವರ ಶ್ರೀಪೃಥ್ವೀವ[ಲ್ಲಭ]ಮಹಾರಾಜಾ[ಧಿ]ರಾಜ [ನ]ಲ್ಲರ ಮರುಳನಾನೆ[ವೆಡ]ಂಗಂ ಚಲಕೆ ನಲ್ಲಾತಂ [ವೈರಿ] ವಿಳಾಸಂ ಮದ[ಗ]ಜಮಲ್ಲಂ ಪರಾಂಗನಾಪುತ್ರಂ ಗ[ಣ್ಡ]ಮಾರ್ತ್ತಣ್ಡನಕಾಳವರಿಷಂ ನೃ[ಪತು]ಂಗಂ ಕ[ಚ್ಚೆ]ಗಂ ಶ್ರೀಮತ್**ಕನ್ನರದೇವಂ**

ಕನ್ದ|| ....ವನಿತೆಯರ್ಕ್ಕ....
....ಗಳುಂ ಬಮ....ಕಣ್ಬುಂ
ನೋಡದು ಕಣ್ನುಡಿಯದು ಬಾ-
[ಯ್ನು]ಡದು ಚಿತ್ತಂ ಪರಾಂಗನಾಪುತ್ರಕನ ||೬೬||

ಭಾರತದೊಳಿ[ಱಿದನಿ]ನ್ದ್ರನೊ-
ಳೋರಾಸನ[ಜಾ]ಣನೆನಿಪ ಪಾಣ್ಡ್ಯನ [ಕುಲ]ಮಂ
ಬೇರಿನ್ದೆ ಕಿಟ್ಟಿ [ಚೋ]ಟನ
ಬೇರಂ ಬೇರಿ[ನ್ದೆ ಕಿ]ಟ್ಟಿ**ನಾನೆವೆಡಂಗಂ** ||೬೭||

[ಸೋ]ಲದೆ ಪರವನಿತೆಗೆ [ಕ]-
ಣ್ಸೋಲದು ಮೊಲೆವಾಲನೂಡಿ ನಡಪಿದ ತಾಯಿಂ[1]
ಮೇಲೆನೆ ಬಗೆಗುಂ ನೋಡಿರೆ
ಸೋಲದು ಚಿತ್ತಂ ಪರಾಂಗನಾಪುತ್ರಕನ ||೬೮||

ನೋಡಿರೆ ಪರವಧುಗೆ ಮನಂ
ಕೂಡದು [2]ಸೂಟ್ಸೋಟಿ[3]ೊಳೆತ್ತಿ ನಡಪಿದ ತೋಳು-

---

1. ಶಾ. ಮೂ. ತೋಯಂ 2. ಶಾ. ಮೂ. ಸೂಟ್ಸೂಲೊಳೆತ್ತಿ

ಣ್ಡಾಡಿದ ಮೊಲೆ ಬಸಿಱೊಳಗಿ-
ಟ್ಟಾಡಿದ ಚಿತ್ತಂ ಪರಾಂಗನಾಪುತ್ರಕನ ||೬೯||

ಸ್ವಸ್ತಿ. ಉಬ್ಬಿ ಕಾವ್ಯೈಸೆಟ್ಟಿಯ ತಮ್ಮಂ **ತುಯ್ಯಲ ಚನ್ದಯ್ಯಂ** ಪ್ರಶಸ್ತಿಯಂ ಬರೆಯಿದಂ[1]. ಬರೆದನೆ ಚಿಮ್ಮಯ್ಯಂ.

## ೧೬

**ದಾನವುಲಪಾಡು,** **ಕ್ರಿ. ವ. ೧೦-೧೧ ನೆಯ ಶತಮಾನ**

**ಕಡಪ ಜಿಲ್ಲೆ,**

ಆಂಧ್ರರಾಜ್ಯ (ಎಪಿ. ಇಂ. ೧೦, ಪು. ೧೫೦)

ಈ ಶಾಸನದ ೧೧ ಪದ್ಯಗಳಲ್ಲಿ ೮ ಕನ್ನಡ ಕಂದಪದ್ಯಗಳು, ೩ ಸಂಸ್ಕೃತ ಪದ್ಯಗಳು ಇವೆ. ಆ ೩ ರಲ್ಲಿ ಎರಡು ಸಂಸ್ಕೃತಪದ್ಯಗಳು ಕಂದಚ್ಛಂದದಲ್ಲಿರುವುದು ಒಂದು ವಿಶೇಷವೆನ್ನಬಹುದು. ಶಾಸನದ ಕವಿ ಯಾರೆಂದು ತಿಳಿಯುವುದಿಲ್ಲ. ಕೊನೆಯ ಗದ್ಯದಲ್ಲಿ 'ಅನುಪಮಕವಿಯ ಸೇನ ಬೋವಂ ಗುಣವರ್ಮ್ಮಂ ಬರೆದಂ' ಎಂದು ಮಾತ್ರವಿದೆ. ಶಾಸನದಲ್ಲಿ ಕಾಲನಿರ್ದೇಶವಿಲ್ಲ. ಅಕ್ಷರಗಳಿಂದ ೧೦-೧೧ನೆಯ ಶತಮಾನಗಳ ಮಧ್ಯಕಾಲವು ಸೂಚಿತವಾಗುತ್ತದೆ.

### ದಂಡನಾಯಕ ಶ್ರೀವಿಜಯ

ಸಂಸ್ಕೃತ ಕಂದ ಪದ್ಯವೊಂದರಲ್ಲಿ 'ವಸುಧಾಂ ಇಂದ್ರಶಾಸನಾತ್ ಸಂರಕ್ಷನ್' ಎಂದು-ದರಿಂದ ಈತನು ಇಂದ್ರನ ದಂಡನಾಯಕನೆಂದು (ಆ ಇಂದ್ರನೆಂದರೆ ರಾಷ್ಟ್ರಕೂಟ ೩ನೆಯ ಇಂದ್ರ-ನಿರಬಹುದೆಂದು) ತೋರುತ್ತದೆ. ಈ ಶ್ರೀವಿಜಯನ ಕಾರ್ಯ-ಸೇನಾಬಲಗಳ ವರ್ಣನೆ ಮತ್ತು ಆತನು ಸಂನ್ಯಸನ ವಿಧಿಯಿಂದ ಮುಡಿಪಿದ ಸಂಗತಿ ಇವುಗಳಿಗೆ ಈ ಶಾಸನ ಮೀಸಲಾಗಿದೆ. ಇಲ್ಲಿ 'ಅನುಪಮಕವಿ' ಎಂದು ವರ್ಣಿಸಲಾಗಿರುವ ಈತನು ಏನನ್ನಾದರೂ ಕಾವ್ಯವನ್ನು ರಚಿಸಿರಬಹು-ದೆಂಬುದು ಸ್ಪಷ್ಟವಿದೆ. ಆದರೆ ಏನು ಬರೆದಿದ್ದಾನೋ ತಿಳಿಯದು. ನೃಪತುಂಗನ 'ಕವಿರಾಜಮಾರ್ಗ'ದ ಕರ್ತೃವೆಂದು ತಿಳಿಯಲಾಗಿರುವ ಶ್ರೀವಿಜಯನು ಈತನಲ್ಲವೆಂದು ತೋರುತ್ತದೆ. ಏಕೆಂದರೆ 'ಕವಿರಾಜಮಾರ್ಗ'ಕ್ಕಿಂತ ಈ ಶಾಸನ ಒಂದು ನೂರು ವರುಷಗಳಷ್ಟು ಈಚೆಯದಾಗಿದೆ.

ಕಂ || ಪತಿಯ ಬೆಸದಿಂದಮಹಿತರ-
ನತಿಕೋಪದಿನಿಕ್ಕಿ ಗೆಲ್ದು ಪ್ರತಿಪಾಳಿಸಿದಂ
ಚತುರುದಧಿವಳಯಮೆಲ್ಲಮ-
ನತಿರಥನೀ ದಣ್ಡನಾಯಕಂ **ಶ್ರೀವಿಜಯಂ** ||೭೦||

1. ಮೂಲದ ಸಂಪಾದಕರು 'ಬರೆಯಿ[ಸಿ*]ದಂ' ಎಂದು ತಿದ್ದುಪಡಿ ಕೊಟ್ಟಿದ್ದಾರೆ.

ತುರಗದಳಂಗಳನೊಡ್ಡಿದ
ಕರಿಘಟೆಯಂ ಪಿರಿಯ ನೆರವಿಯಂ ಬಲ್ಲಣಿಯಂ
ಧುರದೆಡೆಯೊಳಿಱಿದು ಗೆಲ್ದಂ
ಕರದ[ಸಿ] ಕರಮುರಿದು ರಣದೊಳನುಪಮಕವಿಯ ||೭೧||

ವಸುಮತಿಯೊಳಗಿಟ್ಟೆಣ್ದಿಂ
[ದೆ]ಸೆಗಳ ಕುಸುಕುರುಮನೆಯ್ದೆ ಮಾಣದೆ ಮತ್ತಂ
ಬಿಸರುಹಗರ್ಭಾಣ್ಡಕ್ಕಂ
ಪಸರಿಸಿದುದು ಕೀರ್ತ್ತಿ ನೆಟ್ಟನನುಪಮಕವಿಯ ||೭೨||

ಅಟ್ಟವಿಧಕರ್ಮ್ಮವೆಲ್ಲಮ-
ನಟ್ಟುಂಬರಿಗೊಣ್ಡು ಕೊಡಿಪೆ[ನೆಂ]ಬುದೆ ಬಗೆಯಿಂ
[ಪು]ಟ್ಟಿದನುದಾತ್ತ ಸತ್ತ್ವಂ
ನೆಟ್ಟನೆ ವಿಬುಧೇನ್ದ್ರವನ್ದ್ಯ**ನಱಿವಿಂಗೋಜಮ್** ||೭೩||

ತಾನಱಿದು ತೊ[ಱ]ದು ನೆಟ್ಟನೆ
ಮಾನಿಸವಾಱಾವುದೆಂದು ಸ[ಂ*]ನ್ಯಾಸನದೊಳ್
ಮಾನಸಿಕೆಗಿಡದೆ ಕೊಣ್ಡೊನ-
ನೂನಸುಖಾಸ್ಪದಮನಱ್ತಿಯೊಳ್ ಶ್ರೀವಿಜಯಂ ||೭೪||

ನಿಗ್ಗತಭಯನೀ ನರಸಂ-
ಸಗ್ಗಮು[1] ನಾನೊಲ್ಲೆನೆನ್ದು ಪೇಸಿ ಬಿಸುರ್ವ್ವಂ
ಸ್ವಗ್ಗದ ಭೋಗಮನುಣ್ಡಪ-
ವಗ್ಗಕ್ಕಡಿಯಿಟ್ಟೊನಱಿದೊ**ನನುಪಮಕವಿ**ಯಂ ||೭೫||

ದಣ್ಡಿನ ಸಾಮಗ್ರಿಗೆ ಪರ-
ಮಣ್ಡಳಮುಳ್ಳಾಡೆ [ಸ]ರ್ವ್ವವಿಕ್ರಮತುಂಗಂ
ದಣ್ಡಿನ ಬೀರಶ್ರೀಗೊ-
ಳ್ಗಣ್ಡಂ ಶ್ರೀದಣ್ಡನಾಯಕಂ ಶ್ರೀವಿಜಯಂ ||೭೬||

ಚಣ್ಡಪರಾಕ್ರಮನುಱದರಿ-
ಮಣ್ಡಲಿಕರನಟ್ಟೆ ಪಿಡಿದು ಪತಿಗೊಪ್ಪಿಸುವೊ-
ಳ್ಗಣ್ಡಂ ಪ್ರಚಣ್ಡನೀ ಭೂ-
ಮಣ್ಡಲದೊಳ್ದಣ್ಡನಾಯಕಂ ಶ್ರೀವಿಜಯಂ ||೭೭||

1. ಶಾ. ಮೂ. ಸ್ವರ್ಗಮೂ

## ೧೭

**ಆಲೂರು,** **ಕ್ರಿ. ಶ. ೧೦೧೦**

**ಗದುಗು ತಾಲೂಕು,** **ಚಾಳುಕ್ಯ ಆರನೆಯ ವಿಕ್ರಮಾದಿತ್ಯ**

ಧಾರವಾಡ ಜಿಲ್ಲೆ (ಎಪಿ. ಇಂ. ೧೬, ಪು.೨೮)

ಚಕ್ರವರ್ತಿ, ಮಾಂಡಲಿಕ, ಭಟ್ಟ, ಮಹಾಚಾರ್ಯ–ಇವರ ಪ್ರಶಸ್ತಿಗಳನ್ನೊಳಗೊಂಡ ದಾನಶಾಸನದ ಮಾದರಿ ಇದು. ಆಲೂರನ್ನು ಮಾಳದಾಲೂರು ಎಂದು ಇಲ್ಲಿ ಹೆಸರಿಸಿದೆ.

### ಚಾಳುಕ್ಯ ಪ್ರಶಸ್ತಿ

ವ|| ಸ್ವಸ್ತಿ. ಸಮಸ್ತಭುವನಾಶ್ರಯ ಶ್ರೀಪೃಥ್ವೀವಲ್ಲಭ ಮಹಾರಾಜಾಧಿರಾಜಂ ಪರಮೇಶ್ವರ ಪರಮಭಟ್ಟಾರಕಂ ಚಾಳುಕ್ಯಾಭರಣಂ ಸತ್ಯಾಶ್ರಯಕುಳತಿಳಕಂ ಶ್ರೀಮತ್ತ್ರಿಭುವನಮಲ್ಲದೇವರ ರಾಜ್ಯಮುತ್ತರೋತ್ತರಾಭಿವೃದ್ಧಿ ಪ್ರವರ್ಧಮಾನಮಾಚಂದ್ರಾರ್ಕ್ಕತಾರಂಬರಂ ಸಲುತ್ತಮಿರೆ,

### ಮಾಂಡಲಿಕ ಪಲ್ಲವ ಪ್ರಶಸ್ತಿ

ತತ್ಪಾದಪದ್ಮೋಪಜೀವಿ : ಸ್ವಸ್ತಿ. ಸಮಧಿಗತಪಂಚಮಹಾಶಬ್ದ ಪಲ್ಲವಾನ್ವಯ ಶ್ರೀಪೃಥ್ವೀವಲ್ಲಭಂ ಪಲ್ಲವಕುಳತಿಳಕನೇಕವಾಕ್ಯಂ ಕಾಂಚೀಪುರವರೇಶ್ವರಂ ಮಣ್ಡಳಿಕತ್ರಿಣೇತ್ರಂ ಘಟಿಯಂಕಕಾಱಂ ಶ್ರೀಮದಿಱುವನೊಳಂಬಾಧಿರಾಜಂ ನೊಳಂಬವಾಡಿ ಮೂವತ್ತಿರ್ಚ್ಛಾಸಿರಮುಂ ಕೆಂಗಟಿ[1]ಯೈನೂಱುಂ ಬಲ್ಲಕುನ್ದೆ ಮೂನೂಱುಂ ಕುಕ್ಕನೂರ್ಮ್ಮವತ್ತುಂ ಮಾಸಿಯವಾಡಿ ನಾಡೊಳಗಣ ಪಂಚಬಾಡಂಗಳುಮಂ ದುಷ್ಟನಿಗ್ರಹವಿಶಿಷ್ಟಪ್ರತಿಪಾಳನದಿಂ ಸುಖದಿನಾಳುತ್ತಮಿರೆ,

### ಮಹಾಸೇನಾಧಿಪತಿ ವೆಣ್ಣೆಯಭಟ್ಟ

ಈತನು ಸಪ್ತಗ್ರಾಮಗಳ ಅಗ್ರಗಣ್ಯನು, ಶ್ರೇಷ್ಠ ವಿದ್ವಾಂಸನು, ಉಭಯ (ಸಂಸ್ಕೃತ ಮತ್ತು ಕನ್ನಡ) ಕವೀಂದ್ರನು, ಕವಿರಾಜವಲ್ಲಭನು ಎಂದು ಮುಂತಾಗಿ ವರ್ಣಿತನಾಗಿದ್ದಾನೆ.

ತತ್ಪಾದ ಪದ್ಮೋಪಜೀವಿ : ಸ್ವಸ್ತಿ. ಸಮಸ್ತ ರಾಜ್ಯಭರನಿರೂಪಿತ ಮಹಾಸೇನಾಧಿಪತಿ ಪತಿಹಿತಾಚರಣಂ ರಣರಂಗದುಷ್ಟಂ ದುಷ್ಟನಿಷ್ಠುರಂ **ಕುಟಿಲಕೌಟಿಲ್ಯಂ**[2] ಕ್ಷುದ್ರವಿದ್ರಾವಣಂ ಕಲಿಕಾಲಬೃಹಸ್ಪತಿ ಪರಿವಾಗವಜ್ರಪಂಜರನಹಿತಾಹಿಗರುಡನುಭಯಕವೀನ್ದ್ರಂ ಕವಿರಾಜವಲ್ಲಭಂ ವಾದೀಭಪಂಚಾನನಂ **ಸರಸ್ವತೀ-**

---

1. ಕೋಗಳಿ ಇರಬಹುದೇ ?
2. ಶಾ. ಮೂ. ಕೌಟ್ಲ್ಯಂ

**ವಲ್ಲಭಂ** ಪರನಾರೀದುರ್ಲ್ಲಭಂ ಘಟಿಗನ[1] ಗನ್ಧವಾರಣಂ ನಯಧಾಮಂ ಚಲದೋ-ಜನಟಿ°ಪಿಲ್ಲದಾತಂ ನಲ್ಲರ್ಗ್ಗೆ ನಲ್ಲಂ ಚತುರ ಚತುರ್ಮ್ಮುಖಂ ಕದನವಿನೋದಂ ಮಲೆಯ ಮರ್ದ್ದನಂ ವಿಪ್ರಕುಳಕಮಳಭಾಸ್ಕರಂ ಪಾರ್ವ್ವರೊಳ್ಗಣ್ಡಂ ಸಪ್ತಗ್ರಾಮಾ-ಗ್ರಗಣ್ಯಂ ಕಮ್ಮಕುಳೋದ್ಭವಂ ಧೀತ[2]ಗೋತ್ರಂ ದಿಣ್ಣಪಣ್ಡಿತಪುತ್ರಂ ಛಾತ್ರಕಮಿತ್ರಂ ಪಣ್ಡಿತಮಣ್ಡನಂ ವೆಣ್ಣೆಯ ಭಟ್ಟರುಮೆನಿಸಿದ[3] ಶ್ರೀಮನ್ಮಹಾಪ್ರಚಣ್ಡ ದಣ್ಡನಾಯಕಂ ಘಟಿಯಂಕಕಾಱಂ ಬ್ರಹ್ಮಾಧಿರಾಜರ್ಗ್ಗೆ

## ಭೂದಾನ

ಶಕಭೂಪಾಳಕಾಳಾತಿಕ್ರಾಂತ ಸಂವತ್ಸರ ಶತಂಗಳ್ ೯೩೩ನೆಯ ಸಾಧಾರಣ ಸಂವತ್ಸರ ವೈಶಾಖದ ಪುಣ್ಣಮೆ ಆದಿತ್ಯವಾರದಂದು ಮಾಳದಾಲೂರ ಬಡಗಣ ಪೊಲ-ದೊಳ್ ಸಿರಿವುರದಿಂದಿಟ್ಟಗೆಗೆ ಪೋದ ಬಟ್ಟೆಯ ಕಣ್ಣ ಕುಱಿಂಬನ ಕಲ್ಲ ಬಡಗಣ ದೆಸೆ-ಯೊಳ್ಸಿದ್ಧೇಶ್ವರಗೆಯ್ಯ ಮೂಡಣ ಕಂಬಿವದ್ದದೊಳಲ್ಲೇಶ್ವರಗೆಯ್ಯದಱ ಮೂಡಣ ಕಂಬಿವದ್ದದೊಳ್ ನೂಱು ಮತ್ತರ್ಕ್ಕೆಯ್ಯಂ ಸರ್ವ್ವಬಾಧಾಪರಿಹಾರಂ ನಮಸ್ಯವಾಗೆ ಮಾಳದಾಲೂರಿನ್ನೂರ್ವ್ವರುವಿಱ್ವರೊಡೆಯಂ ಚಟ್ಟವಾರಯ್ಯಂ ವೆಣ್ಣೆಯ ಭಟ್ಟರ ಕಾಲಂ ಕರ್ಚ್ಚಿ ಕುಡೆ, ತತ್ಕಾಳದೊಳ್ ಮಹಾಜನದಧ್ಯಕ್ಷದೊಳ್ ವೆಣ್ಣೆಯಭಟ್ಟರ್ತ್ತ-ಮ್ಮಾರಾಧ್ಯರ್

## ಗುಹೆಯ ಮಠದ ಅಮರಾಚಾರ್ಯ

ಸ್ವಸ್ತಿ. ಯಮನಿಯಮಾಸನ ಪ್ರಾಣಾಯಾಮ ಪ್ರತ್ಯಾಹಾರ ಧಾರಣಾಧ್ಯಾನ ಸಮಾಧಿಸಂಪನ್ನರಪ್ಪ ಶ್ರೀಮತ್ಸಿರಿವುರದ ಗುಹೆಯ ಮಠದ ಅಮರಾಚಾರ್ಯ ಭಟ್ಟಾರಕರ್ಗ್ಗೆ ಪಾದಪ್ರಕ್ಷಾಳನಪೂರ್ವ್ವಕಂ ನೂಱು ಮತ್ತರ್ಕ್ಕೆಯ್ಯುಮಂ ಮಠಮಂ ಮಾಡಿಸಿ[4] ಮಠಕೆ ವಿದ್ಯಾದಾನವಾಗೆ ಪನ್ನಿರ್ವ್ವರ್ಬ್ರಾಹ್ಮಣರ್ಗ್ಗಮಱುವರ್ತ್ತಪೋ-ಧನರ್ಗ್ಗಂ ಸತ್ರಕೆವಿಟ್ಟನದನಿನ್ನೂರ್ವ್ವರುಂ ಸರ್ವ್ವಬಾಧಾಪರಿಹಾರಂ ಕಾದೂಡುವರ್.

**ಪ್ರಾಸಾದಚಕ್ರವರ್ತ್ತಿ ಮರುಳೋಜಂ** ಬರೆದಂ. ಮಂಗಳಂ ||

---

1. ಘಟಿಗ : 'ಘಟಿಯಂಕಕಾಱ' ಎಂಬುದರ ಸಂಕ್ಷಿಪ್ತರೂಪ.

2. ಮೂಲ ಸಂಪಾದಕರ ಟಿಪ್ಪಣಿ : The first letter of this word looks like r. Elliot's Pandit has transcribed the word as *rudita*

3. ಶಾ. ಮೂ. : ಭಟ್ರುಮೆನಿಸಿದ

4 ಶಾ. ಮೂ.: ಮಠಮ ಮೂಡಿಸಿ

# ೧೮

**ಕೊಪ್ಪಳ,** **ಕ್ರಿ. ವ. ೧೦೦೯-೧೦೧೭**

**ಕೊಪ್ಪಳ ತಾಲೂಕು,** **ಚಾಳುಕ್ಯ ೫ನೆಯ ವಿಕ್ರಮಾದಿತ್ಯ**

ರಾಯಚೂರು ಜಿಲ್ಲೆ (ಹೈ. ಆರ್ಕಿ. ಸಿರೀಜ್ ಸಂ ೧೨, ಪು.೯)

ಈ ಶಾಸನದಲ್ಲಿ ಕಾಲನಿರ್ದೇಶವಿಲ್ಲ. ಅಕ್ಷರಗಳ ಸ್ವರೂಪದಿಂದ, ಇದರಲ್ಲಿ ವರ್ಣಿತನಾದ ವಿಕ್ರಮಾದಿತ್ಯನು ಚಾಳುಕ್ಯ ೫ನೆಯ ವಿಕ್ರಮಾದಿತ್ಯನೆಂದು ಪಂಡಿತರು ಗ್ರಹಿಸಿದ್ದಾರೆ. ಬಿಚ್ಚು-ಕುಂದೆಯಲ್ಲಿ ದೇವತೆಗಳು ಸ್ಥಾಪಿಸಿದ (ನಾಗದೇವನ ಬಸದಿಯ) ಜಿನಬಿಂಬವನ್ನು ಕಲ್ಯಾಣಕೀರ್ತಿ ಆರಾಧಿಸಿದನೆಂದೂ ಸಿಂಹನಂದಿ ಇಂಗಿಣಿಮರಣ ಹೊಂದಿದ ಸ್ಥಳದಲ್ಲಿ, ಎತ್ತರವಾದ ಬೆಟ್ಟದ ಮೇಲೆ ಶಾಂತಿನಾಥ ಚೈತ್ಯಾಲಯವನ್ನು ಅವನು ಮಾಡಿಸಿದನೆಂದೂ ಹೇಳಿದೆ.

## ಬಿಚ್ಚುಕುಂದೆಯ ಬಸದಿ

ಕಂ|| ಪೊಸತು ಜಿನಬಿಂಬಮಂ ಪೂ-
ಜಿಸೆ ದಿವಿಜರ್ಬ್ಬಿಚ್ಚುಕುನ್ದೆಯೊಳ್ನಿಱಿಸಿ ಜಗ-
ಕ್ಕೆಸೆದಿರ್ದ್ದ ನಾಗದೇವನ
ಬಸದಿಯ ಕಲ್ಯಾಣಕೀರ್ತ್ತಿ ಕೀರ್ತ್ತಿಸೆ ನೋನ್ತಂ ||೭೮||

ಏಂ ಗಹನಮೊ ನಿಱಿಸಿದನು-
ತ್ತುಂಗಾದ್ರಿಯ ಮೇಗೆ ಸಿಂಹನಂದ್ಯಾಚಾರ್ಯ್ಯಂ ಬಂ[1]
**ದಿಂಗಿಣಿಮರಣಂ**ಗೆಯ್ದೊಡ
ಸಂಗಡೆ ಕಲ್ಯಾಣಕೀರ್ತ್ತಿ ಜಿನಶಾಸನಮಂ ||೭೯||

ಕಡುತಪಮಿಂಗಿಣಿಮರಣದೊ-
ಳೊಡಲಂ ತವೆ[2] ನೋನ್ತು ಸಿಂಹಣಂದ್ಯಾಚಾರ್ಯ್ಯರ್
ಮುಡಿಪಿದೆಡೆಯೊಳ್ಬೆಡೆಂಗಂ
ಪಡೆದಿರೆ ಮಾಡಿಸಿ ಜಿನೇನ್ದ್ರಚೈತ್ಯಾಳಯಮಂ ||೮೦||

ಅತಿಶಯದೆ ಶಾನ್ತಿನಾಥನ
ಪ್ರತಿಷ್ಠೆಯಂ ಬಿಚ್ಚುಕುನ್ದೆಯೊಳ್ಮಾಡಿ ಮಹೋ-
ನ್ನತಧರ್ಮ್ಮಕಾರ್ಯ್ಯದಿಂ ವಸು-
ಮತಿಯೊಳ್ ಕಲ್ಯಾಣಕೀರ್ತ್ತಿ ಮುನಿಪರ್ ನೆಗೞ್ದರ್ ||೮೧||

---

1. ಈ ಸಾಲಿನಲ್ಲಿ ೨ ಮಾತ್ರೆಗಳು ಹೆಚ್ಚಿವೆ. ಚಾರ್ಯ್ಯಂ ಎಂಬಲ್ಲಿಗೇ ನಿಲ್ಲಿಸಿ, ಮುಂದಿನ ಸಾಲನ್ನು ಇಂಗಿಣಿ ಎಂದಾರಂಭಿಸಿದರಾದೀತು.

2. ಪಾ. ಮೂ. ತಾವೆ

## ೧೯

**ರೋಣ,** **ಕ್ರಿ. ಶ. ೧೦೨೨**

**ರೋಣ ತಾಲೂಕು,** **ಚಾಳುಕ್ಯ ೨ನೆಯ ಜಯಸಿಂಹ**

ಧಾರವಾಡ ಜಿಲ್ಲೆ (ಎಪಿ. ಇಂ. ೧೯, ಪು. ೨೨೩)

### ಮಾಚಿಮಯ್ಯ

ಸಜ್ಜನರು, ಭಕ್ತರು ಹೇಗಿರುತ್ತಾರೆಂಬುದಕ್ಕೆ ಈತ ಮಾದರಿಯಾಗಿದ್ದಾನೆ.

ಮ. ವಿ.|| ಒಡಲಂ ತಾಂ ಸುಚರಿತ್ರದೊಳ್ ಧನಮನುದ್ಯದ್ದಾನದೊಳ್ಸನ್ನಿಯಂ
ನುಡಿಯೊಳ್ಭಕ್ತಿಯನೆಯ್ದೆ ತನ್ದೆಯೊಳುದಗ್ರಂ ಚಿತ್ತಮಂ ಸನ್ತತಂ
ಮೃಡಪಾದಾಬ್ಜದೊಳಾವಗಂ ಬ್ಯಸನಮಂ ಸದ್ಧರ್ಮ್ಮದೊಳ್ತಾಳ್ದಿದಂ
ಗಡದೇವಣ್ಣಿಪೆನಣ್ಣ ಸಚ್ಚರಿತಮಂ ಶ್ರೀ **ಮಾಚಿಮಯ್ಯಾಂ**ಕನ[1] ||೮೨||

ಕಂ|| ಜಗತೀಜನ ಹಿತಮಂ ವಿಬು-
ಧಗಣಾಗ್ರಣಿ ಮಾಚಿಮಯ್ಯನುರ್ವ್ವೀವಳಯಂ
ಪೊಗಳಲ್ ರೋಣದ ಮಣಿಯುರ
ನೆಗಳ್ದಾರಮೆಯೊಳಗೆ ಬಾವಿಯಂ ತೋಡಿಸಿದಂ[2] ||೮೩||

## ೨೦

**ಭೈರನಮಟ್ಟಿ,** **ಕ್ರಿ. ಶ. ೧೦೩೩**

**ಬಾಗಲಕೋಟೆ ತಾಲೂಕು,** **ಚಾಳುಕ್ಯ ೨ನೆಯ ಜಯಸಿಂಹ**

ವಿಜಾಪುರ ಜಿಲ್ಲೆ (ಎಪಿ. ಇಂ. ೩, ಪು. ೨೩೦)

ಈ ಶಾಸನ ಮೂರು ಕಾಲಗಳ ಉಲ್ಲೇಖಗಳನ್ನೊಳಗೊಂಡಿದೆ. ಚಾಳುಕ್ಯ ೨ನೆಯ ತೈಲನು ಶಕವರ್ಷ ೯೧೨ರಲ್ಲಿ ಆಳುತ್ತಿದ್ದನೆಂಬುದು, ೨ನೆಯ ಸೋಮೇಶ್ವರನ ಕಾಲದಲ್ಲಿ ಸೇವ್ಯರಸನು ದಾನಕೊಟ್ಟುದು, ೨ನೆಯ ಜಯಸಿಂಹನ ಕಾಲದಲ್ಲಿ ಮಂಡಣೇಶ್ವರ ಸಿಂದನಾಗಾದಿತ್ಯನು ದಾನವಿತ್ತುದು ಇಲ್ಲಿ ಬಂದಿವೆ.

---

1. ಶಾ. ಮೂ. : ಶ್ರೀಮಾಚಿಮಯ್ಯಾಂಕನಂ.
2. ಮೊದಲಿನ ಒಂದು ಪದ್ಯದಲ್ಲಿ ಈ ಮಾಚಿಮಯ್ಯನು ಬ್ರಾಹ್ಮಣರಿಗೆ ಸತ್ರಭೂಮಿಯನ್ನು ಬಿಟ್ಟನೆಂದು ಹೇಳಿದೆ.

## ಸಿಂದ ವಂಶೋತ್ಪತ್ತಿ

ಅಹಿಪತಿ ಭೂಲೋಕವನ್ನು ನೋಡಲೆಂದು ಪ್ರಿಯೆಯೊಡನೆ ಬಂದಾಗ, ಆಕೆ ಸಿಂಧೂ ನದಿಯ ನಡುಗಡ್ಡೆಯ ಅಹಿಚ್ಛತ್ರವೆಂಬಲ್ಲಿ 'ಸಿಂದ' ಎಂಬ ಮಗನನ್ನು ಹೆತ್ತಳು. ಅವನನ್ನು ಹುಲಿ ಜೋಪಾನ ಮಾಡಿ ಬೆಳಸಿತು. ಆತನಿಗೆ ದೀರ್ಘಬಾಹು (ನಿಡುದೋಳ ಸಿಂದ) ಎಂಬ ಮಗನಾದನು. ಅವನು ಕದಂಬರ ಕನ್ನೆಯನ್ನು ಮದುವೆಯಾಗಿ ಮೂವರು ಮಕ್ಕಳನ್ನು ಪಡೆದು ವಂಶವನ್ನು ವಿಸ್ತರಿಸಿದನೆಂದು ಈ ಮೂರು ಪದ್ಯಗಳಲ್ಲಿ ಹೇಳಿದೆ.

ಮ.ಸ್ರ.|| ಧರಣೀಧ್ರಾಹೀಶ್ವರಂ[1] ಮಾನವಭವನುತ ಭೂಲೋಕಮಂ ನೋೞ್ಪೆ-
ನೆಂದಾ-
ದರದಿಂ ತತ್ಸೈನ್ಯಮಂ ಪಿಂತಿರಿಸಿ ವನಿತೆಯುಂ ತಾನುಮಾದಕ್ಕಱಿಂದಂ[2]
ಬರೆ ಗರ್ಬ್ಬಂ ತೋಱಿ[3] ತದ್ವಲ್ಲಭೆಗೆ ಪಡೆದಹಿಚ್ಛತ್ರದೊಳ್ ಪುಟ್ಟಿದಂ ಭಾ-
ಸುರತೇಜೋದ್ಭಾಶಿ **ಸಿಂಧೂನದಿ**ಯ ಕುಱುವದೊಳ್ **ಸಿಂದ**ನೆಂಬ[ಂ*]
ಕುಮಾರ ||೨೪||

ಚಂ|| ಪಡೆದು ವಿಮೋಹಮಂ ಪುಲಿಗಹೀಶ್ವರನೀ ಶಿಶುವಂ ಸುರಕ್ಷಿತಂ
ನಡಪೆನೆ ಪನ್ನಗಾಧಿಪತಿಯೊಳ್ ಬೆಸನೆತ್ತು ಮಹಾಮಹೀಶನಂ
ನಡಪೆ[3] ಕುಮಾರಕಂ ಬಳೆದಿಳಾಧಿಕಶೌರ್ಯದ ದೀರ್ಘಬಾಹುವಂ
ಪಡೆದನೊ ಸಂದ **ಸಿಂದವಿಷಯಾಧಿಪ**ನುನ್ನತವೀರಶಾಸನ ||೨೫||

## ಸಿಂದ-ಕದಂಬ ಶರೀರಸಂಬಂಧ

ಮ.ವಿ.|| ಭರದಿಂದನ್ನಿ**ಡುದೋಳ ಸಿಂದ**ವಿಭು ಕಯ್ಯಂ ಮುಚ್ಚಿ ಕಣ್ಣಂ ಕಡಂ-
ಬರಧೀಶಂ[4] ಪ್ರಿಯದಿಂ ತನೂಭವೆಯನೀಯಲ್ ಕೊಂಡು ತಾನಾ
ಮನೋ-
ಹರಿಯೊಳ್ ಕ್ರೀಡಿಸುತಿಪ್ಪಿನಂ ತನಯರಾದರ್ಮೂವರಾ ಮೂವರಿಂ
ಪರೆದತ್ಯುನ್ನತ[5] ಸಿಂದವಂಶಮಹಿಭೃತ್ಸಂಜಾತರೀಲೋಕದೊಳ್ ||೨೬||

---

1. ಶಾ. ಮೂ. : ಧರಣೇಂದ್ರೇ (ದ್ರಾ)ಹಿ[ೕ*]ಶ್ವರಂ.
2. ಆದ( ಆದಂ ) + ಅಕ್ಕಱಿಂದಂ.
3. ಶಾ. ಮೂ. : ನಡಪೆನೆ
4. ಶಾ. ಮೂ.: ಧೀಶ
5. ಶಾ. ಮೂ. : ಪರೆದತು

೨೧

## ಹೊಟ್ಟೂರು, ಸಿಗ್ಗಾವಿ ತಾಲೂಕು, ಧಾರವಾಡ ಜಿಲ್ಲೆ

## ಕ್ರಿ. ಶ. ೧೦೩೭ ಚಾಳುಕ್ಯ ೨ನೆಯ ಜಯಸಿಂಹ

(ಎಪಿ. ಇಂ. ಸಂ. ೧೬, ಪು.೭೭)

ಪೊಟ್ಟಿಯೂರು (ಹೊಟ್ಟೂರು) ಘಟಿಕಾಸ್ಥಾನವಾಗಿತ್ತು. ಇಲ್ಲಿ ಪ್ರಶಂಸಿಸಲಾದ ಮಾರ. ಗಾವುಂಡನಿಗೆ ಹಾನುಗಲ್ಲು-೫೦೦ ರ ಪ್ರಭುತನವಿತ್ತು. ಹೆಳವರಿಗೆ ಕಾಲನ್ನು ಕೊಡುವಂತಹ ಕೈ-ಗುಣ ಇವನಲ್ಲಿತ್ತು. ಅದರಿಂದಾಗಿ ಈತನನ್ನು ಜನರು 'ಹೆಳವರ ಭಾವ' ಎಂದು ಕರೆಯುತ್ತಿ-ದ್ದರು; ನಡುನಾಡ ತೀರ್ಥನೆಂದೂ ದಕ್ಷಿಣಸೋಮನಾಥನೆಂದೂ ಭಾವಿಸುತ್ತಿದ್ದರು. ಈತನ ಪ್ರಶಸ್ತಿ ಇದೇ ಊರ ಇನ್ನೊಂದು ಶಾಸನದಲ್ಲಿಯೂ (ಕ್ರಿ. ಶ. ೧೦೬೭) ಬಂದಿದೆ.

### ಹೆಳವರ ಭಾವ ಮಾರಗಾವುಣ್ಡ

ವ|| ಸ್ವಸ್ತ್ಯನೇಕ ಗುಣಗಣಾಳಂಕಾರ ಪರನಾರೀದೂರ, ಗೋತ್ರಪವಿತ್ರ ಬುಧ ಜನಮಿತ್ರ, ಶೌಚಾಂಜನೇಯ ಸತ್ಯರಾಧೇಯ, ಸೂರ್ಯ್ಯಂಗೆ ಭಕ್ತ ದುರ್ಜ್ಜನವಿರಕ್ತ, ಕೆಳೆಗೆಯ್ದೆ ಕೂರ್ಪ್ಪಂ ಕೂರ್ತ್ತೀಯುಲಾರ್ಪ್ಪಂ, ಬುಧಜನಾಧಾರ ವಿನಯಾವತಾರ, ಶಿಷ್ಟಪ್ರಸಂಗ ನುತಧೈರ್ಯ್ಯೋತ್ತುಂಗ, ಆಶ್ರಿತಜನಕಲ್ಪವೃಕ್ಷ ಬನ್ಧುಜನಚಿನ್ತಾಮಣಿ ದಾನಚೂಡಾಮಣಿ, ಕಲಿಯುಗ ಮಹೇಶ್ವರ **ಹೆಳವರ ಭಾವ**, ಸೋಮೇಶ್ವರ ದಾಸಿ ವಿನೆಯವಿಳಾಸಿ, **ನಡುನಾಡ ತೀರ್ತ್ಥ ತೆಂಕಣಸೋಮನಾಥ** ನಾಮಾದಿ ಸಮಸ್ತ ಪ್ರಶಸ್ತಿಸಹಿತ ಶ್ರೀಮತು,

ಕಂ|| ದಾನಂ ಪರೋಪಕಾರ[ಂ*]
ಜ್ಞಾನ[ಂ*] ಶಿವಭಕ್ತಿ ಸತ್ಯಮೆಂಬೊಳ್ಗುಣದೊಳ್
ತಾನಧಿಕನೆನಿಸಿ ನೆಗೞ್ದಭಿ-
ಮಾನಧನ[ಂ*] ಪೊಟ್ಟಿಯೂರ **ಮಾರ**ನುದಾರ ||೮೭||

ಚಂ|| ವಿದಿತಯಶೋರ್ತ್ಥನೆಂಬುದು ಬುಧಸ್ತುತನೆಂಬುದು ಸತ್ಯವನ್ತನೆಂ-
ಬುದು ನಯಶಾಳಿಯೆಂಬುದು ದಯಾಪರನೆಂಬುದು ಸುಂದರಾಂಗನೆಂ-
ಬುದು ಮನುಮಾರ್ಗ್ಗಿಯೆಂಬುದು ಗುಣಾಗ್ರಣಿಯೆಂಬುದು ಗೋತ್ರರತ್ನನೆಂ-
ಬುದು ಸಕಳಾ[1]ವನೀತಳದೊಳೀಂ ಪೆಱತೆಂಬುದೆ ಮಾರಗೌಣ್ಡನ[2] ||೮೮||

1. ಶಾ. ಮೂ : ಸಖಳಾ 2. ಶಾ. ಮೂ. : ಮಾರಗಾವುಣ್ಡನ

## ೨೨

**ಮೈಲಾರ,** **ಕ್ರಿ. ವ. ೧೦೪೬**

**ಹಡಗಲಿ ತಾಲೂಕು,** **ಚಾಳುಕ್ಯ ೧ನೆಯ ಸೋಮೇಶ್ವರ**

ಬಳ್ಳಾರಿ ಜಿಲ್ಲೆ (ಸೌ. ಇಂ.ಇನ್ಸ್. ೯, ಭಾಗ ೧, ಪು. ೭೪)

ಮಹಾಮಂಡಳೇಶ್ವರ ಆದಿತ್ಯರಸನ ಹೆಗ್ಗಡೆ ಕಾಳಿದಾಸನು ಸ್ವಯಂಭುದೇವರಿಗೂ ಮೂಲ-ಸ್ಥಾನದೇವರಿಗೂ ದತ್ತಿಕೊಟ್ಟುದನ್ನು ಹೇಳಿದೆ. ಕೊನೆಕೊನೆಯಲ್ಲಿ ಕೆರೆಗಾಗಿ ಕೆಲವೊಂದು ದಂಡ-ಗಳ ಉತ್ಪನ್ನಗಳನ್ನು ಬಿಟ್ಟ ಉಲ್ಲೇಖ ಬರುತ್ತದೆ. ಆ ಪದ್ಯಗಳನ್ನಿಲ್ಲಿ ಕೊಟ್ಟಿದೆ.

ಶಾಸನವನ್ನು ರಚಿಸಿದವನು ನಾಗವಾರನೆಂದೂ ಬರೆದವನು ನಾಗವ್ಮ(ವರ್ಮ)ನೆಂದೂ ಕೊನೆಯ ಪದ್ಯದಿಂದ ತಿಳಿಯುತ್ತದೆ.

ಕಂ || ಬಯ್ದಂಗೆ ಪಣಮುಮೊಂ[ದುಂ]
ಪೊಯ್ದಂಗಾಱು ಪಣಮಿಱಿಯೆ ಪನ್ನೆರಡು ಪಣಂ
ಪಾಯ್ದಱಿದೆ ಸುರಿಗೆಗಿತ್ತಿರ-
ದೆಯ್ದಿದವಂಗೆಂಟು ಪಣಮೆ ದಂಡಂ ಸಿರುತಂ ||೮೯||
ಆಣೆಯನೆ ಮಿಕ್ಕು ಪೋದಡೆ
ಮಾಣದೆ ಕೊಟ್ಟೆರಡು ಪಣಮಿವಂ ಕೆಱಗಿತ್ತಂ
ಕ್ಷೋಣಿಪತಿ ಮಿಕ್ಕ ದಣ್ಡಂ
ಜಾಣೆನರಸಿಂಗಿದೂರ್ಗ್ಗ ಮಾಡಿದ ಸಮೆಯಂ ||೯೦||
ಎಳೆಗೆಸೆಯೆ ಕಾಳಿಗಾಂಕನ
ಕುಳಮೀ ಕೃತಿ ನೆಗಳೆ **ನಾಗವಾರಂ** ಪೇೞ್ದಂ
ಸಿಳಸಾಸನದೊಳು ಮನುಮುನಿ-
ಗಳ ವಾಕ್ಯಮನಱಿಯೆ [1]ನಾಗವರ್ಮ್ಮಂ ಬರೆದಂ ||೯೧||

## ೨೩

**ಮುಳಗುಂದ,** **ಕ್ರಿ. ವ. ೧೦೫೩**

**ಗದುಗು ತಾಲೂಕು,** **ಚಾಳುಕ್ಯ ೧ನೆಯ ಸೋಮೇಶ್ವರ**

ಧಾರವಾಡ ಜಿಲ್ಲೆ (ಎಪಿ. ಇಂ. ೧೬, ಪು. ೫೬)

**ನಯಸೇನ ಪಂಡಿತ**

ಈತನೊಬ್ಬ ವ್ಯಾಕರಣವಿಷಯವನ್ನು ಕುರಿತು ಅಧಿಕಾರವಾಣಿಯಿಂದ ನಿರ್ಣಾಯಕ ವಾಗಿ ಮಾತನಾಡಬಲ್ಲವನೆಂದು ಈ ವರ್ಣನೆಯಿಂದ ತಿಳಿಯುತ್ತದೆ.

---

1. ಶಾ. ಮೂ. : ನಾಗವ್ಮ

ಮ. ವಿ ‖ ನಿನಗೇನೆಂಬೆನೊ ಶಾಕಟಾಯನ ಮುನೀಶನ್ತಾನೆ ಶಬ್ದಾನುಶಾ-
ಸನದೊಳ್ ಪಾಣಿನಿ ಪಾಣಿನೀಯದೊಳೆ ಚನ್ದ್ರಂ ಚಾನ್ದ್ರದೊಳ್ ತಜ್ಜಿನೇ-
ನ್ದ್ರನೆ ಜೈನೇನ್ದ್ರದೊಳಾ ಕುಮಾರನೆ ಗಡಂ ಕೌಮಾರದೊಳ್ಪ್ಪೇಳ್ಪರೆ-
ನ್ತೆನೆ ಪೋಲ**ನ್ನಯಸೇನಪಣ್ಡಿ**ತರೊಳಸ್ಯವ್ರ್ವಾದ್ಧಿವೀತೋವ್ರ್ವಿಯೊಳ್‖

ವ‖ ಇಂತು ಸಮಸ್ತ ಶಬ್ದಶಾಸ್ತ್ರವಾರಾವಾರಪಾರಗನ್ನಯಸೇನ ಪಣ್ಡಿತ ದೇವರ್.

೨೪

**ಸಿಗ್ಗಾವಿ,**
**ಸಿಗ್ಗಾವಿ ತಾಲೂಕು,**
ಧಾರವಾಡ ಜಿಲ್ಲೆ

**ಕ್ರಿ. ವ ೧೦೫೫**
**ಚಾಳುಕ್ಯ ೧ನೆಯ ಸೋಮೇಶ್ವರ**
(ಕ. ಇನ್ಸ್. ೧, ಪು. ೨೧)

## ಲಚ್ಚಲದೇವಿ

ಇವಳು ಬನವಾಸೆ ೧೨೦೦೦ಕ್ಕೆ ಅರಸುಗೆಯ್ಯುತ್ತಿದ್ದ ಕದಂಬ ಹರಿಕೇಸರಿಯ (ಹರಿಗನ) ಅರ್ಧಾಂಗಿ. ಇಲ್ಲಿಯ ಗದ್ಯಪದ್ಯಗಳಲ್ಲಿ ಚಿಕ್ಕ ಚಿಕ್ಕ ವಿಶೇಷಣಗಳಿಂದ ಆಕೆಯ ರೂಪಗುಣಸ್ವಭಾವ-ಗಳನ್ನು ಬಣ್ಣಿಸಿ, ಆಕೆಯ ವ್ಯಕ್ತಿತ್ವವನ್ನು ಮನೋಹರವಾಗಿ ರೂಪಿಸಲಾಗಿದೆ.

ವ‖ ಸ್ವಸ್ತ್ಯನವರತ ಪರಮಕಲ್ಯಾಣಾಭ್ಯುದಯ ಸಹಸ್ರಫಳಭೋಗಭಾಗಿನಿ, ದ್ವಿತೀಯಲಕ್ಷ್ಮೀಸಮಾನೆ ತ್ಯಾಗನಿಧಾನೆ, ಶೃಂಗಾರಗಂಗಾತರಂಗಿಣಿ ದಾನಚಿಂತಾಮಣಿ, ಗಿರಿಲಬ್ಧವರಪ್ರಸಾದೆ ಚಂಪಕಾಮೋದೆ, ವಿವೇಕವಿದ್ಯಾಧರಿ ಸಕಳಕಳಾಧರಿ, ಗೋತ್ರ-ಪವಿತ್ರೆ ದೂವ್ರ್ವಾಂಕುರಶ್ಯಾಮಗಾತ್ರೆ, ಆಸ್ಥಾನರಂಜನೆ ಸವತಿಮದಭಂಜನೆ, ಉಪ್ಪಟ್ಟೆ ವರ್ಷೆ ಧಮ್ರ್ಮಸಂಕರ್ಷೆ, ಶ್ರೀಮಾನ್ ಹರಿಗಮನಸ್ಸರೋವರರಾಜಹಂಸಿ ಸುಭಗ-ವಿಳಾಸಿ, ಹರಿಗನದ್ಧಾಂಗಿ ಪರಿವಾರಸುರಭಿಯರಪ್ಪ ಶ್ರೀಮಲ್ಲಚ್ಚಲದೇವಿಯರು.

ಚಂ ‖ ವಿನಯದ ಮೇರೆ ಧಮ್ರ್ಮದ ತವಮ್ರ್ಮನೆ ಸತ್ಯದ ಜನ್ಮಭೂಮಿ ಮಾಂ-
ತನದಗುನ್ತಿ ಚಾಗದ ಮಹಾನಿಧಿ ಪೆಂಪಿನ ರತ್ನರಾಶಿ ಸ-
ಜ್ಜನಿಕೆಯ ರಮ್ಯಹಮ್ರ್ಯ[1] ಮಱಿವಿಂಗೆಱೆವಟ್ಟು ವಿದಗ್ಧಮುಗ್ಧೆ ಸ-
ಜ್ಜನನುತೆಯೆಂದು ಬಣ್ಣಿಪುದು **ಲಚ್ಚಲದೇವಿ**ಯನೀ ಜಗಜ್ಜನ ‖೯೩‖

1. ಶಾ. ಮೂ. : ಹರ್ಮೆ

## ೨೫

**ಕೋಗಳಿ,** **ಕ್ರಿ. ವ. ೧೦೫೫**

**ಹಡಗಲಿ ತಾಲೂಕು,** **ಚಾಳುಕ್ಯ ೧ನೆಯ ಸೋಮೇಶ್ವರ**

ಬಳ್ಳಾರಿ ಜಿಲ್ಲೆ (ಸೌ. ಇಂ. ಇನ್ಸ್ ೯,-ಭಾ೧,-ಪು.೯೨)

ವಿದ್ಯಾದಾನಕ್ಕೂ ಆಹಾರದಾನಕ್ಕೂ ೨೪ ಮತ್ತರು ಎರೇ ಹೊಲವನ್ನು ಕೊಟ್ಟ ಜೈನಯತಿ ಇಂದ್ರಕೀರ್ತಿ ಎಂಬವನ ಯೋಗ್ಯತೆ ಇಲ್ಲಿ ಸುದೀರ್ಘವಾಗಿ ವರ್ಣಿತವಾಗಿದೆ. ಈತನು ತ್ರೈಲೋಕ್ಯ-ಮಲ್ಲ ೧ನೆಯ ಸೋಮೇಶ್ವರನ ಆಸ್ಥಾನಪಂಡಿತನು. ಇಲ್ಲಿ ಗಮನಾರ್ಹ ವಿಷಯವೆಂದರೆ, ಈ ವರ್ಣನೆ ರಗಳೆ ಛಂದಸ್ಸಿನಲ್ಲಿರುವುದು. ಇಷ್ಟರೊಳಗೇ ಆದಿಕವಿ ಪಂಪನು (ಕ್ರಿ.ವ. ೯೮೦) ತನ್ನ 'ವಿಕ್ರಮಾರ್ಜುನವಿಜಯ'ದಲ್ಲಿ ಹೆಣೆದಿದ್ದ ರಗಳೆಯ ಮತ್ತು ಈ ಶಾಸನದಲ್ಲಿಯ ರಗಳೆಯ ಬಂಧ ಶೈಲಿಗಳಲ್ಲಿ ಬಹಳ ವ್ಯತ್ಯಾಸವಿದೆ. ಶಿವಶರಣರ ಚರಿತ್ರಕಥನಕ್ಕೆ ಪ್ರಭೂತವಾಗಿ, ಅತ್ಯಂತ ಯಶಸ್ವಿಯಾಗಿ ರಗಳೆಯನ್ನು ಬಳಸಿಕೊಂಡ ಹರಿಹರನ (ಕ್ರಿ. ವ. ೧೨೧೩) ರಗಳೆಯ ರಚನೆಯಲ್ಲಿಯೂ ಆತನಿಗಿಂತ ಪೂರ್ವದಲ್ಲಿ ಹುಟ್ಟಿದ ಈ ಶಾಸನದ ರಗಳೆಯ ರಚನೆಯಲ್ಲಿಯೂ ವಿಶೇಷ ಸಾಮ್ಯವು ಕಂಡುಬರುತ್ತಿದೆ. ಈ ಶಾಸನ ಕವಿ ಈ ಲಲಿತರಗಳೆಯನ್ನು 'ತೋಮರರಗಳೆ' ಎಂದು ಹೆಸರಿಸಿದ್ದಾನೆ.

### ಇಂದ್ರಕೀರ್ತಿಮುನಿ

ಮ ವಿ ॥ ಇನನುಂ ಧಾತ್ರಿಯುಮುಳ್ಳಿನಂ ನಡೆಯೆ ವಿದ್ಯಾದಾನಕಿಪ್ಪತ್ತನಾ-
ಲ್ಕೆನೆ ಮತ್ತರ್ಪರಿಸಂಖ್ಯೆಯಾಗೆರೆಯನಿತ್ತಾಹಾರದಾನಕ್ಕೆ ಸ-
ನ್ಮನಿಸಿವರ್ಗರ್ಜ್ಜಿಯರ್ಗ್ಗಿತ್ತರಿಟ್ಟಗೆಯದಕ್ಕರ್ಂ ಬಾಳಕೋರಂ ಕರಂ
ಮನಮೊಲ್ದಿತ್ತರ್ಯಿ**ನಿನ್ದ್ರಕೀರ್ತಿಮುನಿಪರ್** ಶಿಷ್ಟೇಷ್ಟಕಲ್ಪಾಂಘ್ರಿಪರ್

### ತೋಮರರಗಳೆ

ಶ್ರೀಮದರುಹಚ್ಚರಣಸರಸಿರುಹಭೃಂಗನಂ
ಭೂಮಿ ಕೀರ್ತ್ತಿಸೆ ನೆಗಳ್ದ ಗುಣಗಣೋತ್ತುಂಗನಂ ||೯೫||
ಮನುಚರಿತನಿರತನಂ ಗುರುಚರಣಭಕ್ತನಂ
ವಿನಮಿತಜಗಜ್ಜನಂ ಧರ್ಮ್ಮಾನುರಕ್ತನಂ ||೯೬||
ಪರಹಿತದಿಳೀಪನಂ ನೃಗಭೂಪಚರಿತನಂ
ಸುರುಚಿರಯಶೋಧರನನಕಳಂಕಚರಿತನಂ ||೯೭||
ಪಣ್ಡಿತಮುಖಾಂಬುರುಹಷಣ್ಡ[1]ಮಾರ್ತ್ತಣ್ಡನಂ
ಕೊಣ್ಡಕುನ್ದಾನ್ವಯ ಸಮೂಹಮುಖಮಣ್ಡನಂ ||೯೮||

---

1. ಶಾ. ಮೂ. : ಶಣ್ಡ

ದೇಸೀಯಗಣಕುಮುದವನಶರಚ್ಚಂದ್ರನಂ[1]

ತ್ರೈಳೋಕ್ಯಮಲ್ಲಸದಸರಸಿಕಳಹಂಸನಂ
ಭೂಳೋಕತಿಳಕನಂ ಕರ್ಮ್ಮವಿಧ್ವಂಸನಂ ||೯೯||

ಸರ್ವ್ವತೋಭದ್ರಜಿನಗೃಹಸಮುದ್ಧರಣನಂ
ಸರ್ವಶಾಸ್ತ್ರಜ್ಞನಂ ವಿಕಳಜನಶರಣನಂ ||೧೦೦||

ಶಿಷ್ಟಸುರಭೂಜನಂ ಕವಿಕುಮುದರಾಜನಂ
ಇಷ್ಟಸಂತುಷ್ಟನಂ ಖರಕಿರಣತೇಜನಂ ||೧೦೧||

ದಶಧರ್ಮ್ಮಕುಶಳನಂ ಮೇರುಗಿರಿಧೈರ್ಯ್ಯನಂ
ಶಶಿವಿಶದ ಕೀರ್ತ್ತಿಯಂ ದಾನತಾತ್ಪರ್ಯ್ಯನಂ ||೧೦೨||

ತ್ರೈಳೋಕ್ಯಮಲ್ಲೇಂದ್ರಕೀರ್ತ್ತಿಹರಿಮೂರ್ತ್ತಿಯಂ
ಭೂಲೋಕವಿಖ್ಯಾತತರಯಶೋವರ್ತ್ತಿಯಂ ||೧೦೩||

ಎನೆ ವಿನಯನಿಧಿ ವಿಪುಳಗುಣನಿಳಯನೆನಿಸಿದಂ
ಮನುಮತಮೆ ಮತಮೆನಿಸಿ ಬಹುಮತನುಮೆನಿಸಿದಂ ||೧೦೪||

ಗುರುಸೇವೆಗಿಡದುದಟಿನಮರಪತಿಯೆನಿಸಿದಂ
ಧರಣೀಧರತ್ವದಿಂ ಮೇರುನಗಮೆನಿಸಿದಂ ||೧೦೫||

ವಂದಿಬೃಂದಾರಕಮಯೂರಾಂಬುದಾಗಮಂ
ವಂದಿಜನಚೂತವನ ಮುದವಸಂತಾಗಮಂ ||೧೦೬||

ಕವಿ ಗಮಕಿ ವಾದಿ ವಾಗ್ಮೀನ್ದ್ರಕಳ್ಪದ್ರುಮಂ
ಕವಿಕದಂಬಕಕೀರ ಫಳಿತಚೂತದ್ರುಮಂ ||೧೦೭||

ಕೇವಳಮೆ ನೆಗಳ್ದಿನ್ದ್ರಕೀರ್ತ್ತಿ ನೃಪಪೂಜಿತಂ
ಕೇವಳಮೆ ಸಕಳಗುಣಗಣಯಶೋರಾಜಿತಂ[2] ||೧೦೮||

---

1. ಈ ಚರಣದ ಬಳಿಕ ಇನ್ನೊಂದು ಚರಣ ಇರಬೇಕು. ಅಚ್ಚುಹಾಕುವಾಗ ತಪ್ಪಿ ಉಳಿದುಹೋದಂತೆ ತೋರುತ್ತದೆ. ಏಕೆಂದರೆ, ಈ ಶಾಸನದ ಮುದ್ರಿತಪ್ರತಿಯಲ್ಲಿ ಈ ಚರಣವನ್ನೊಳಗೊಂಡ ೨೦ನೆಯ ಸಾಲು– ಇದೊಂದೇ ಸಾಲುಮಾತ್ರ– ಸುಮಾರು ಇಷ್ಟೇ ಶಬ್ದಗಳಷ್ಟು ಮೊಟಕಾಗಿದೆ.

2. ಕೆಲವು ಪದ್ಯಗಳನ್ನು ಮಾತ್ರ ಇಲ್ಲಿ ಸಂಗ್ರಹಿಸಿದೆ.

## ೨೬

## ಹಿರೇಹಡಗಲಿ, ಕ್ರಿ. ಶ. ೧೦೫೭
## ಹಡಗಲಿ ತಾಲೂಕು, ಚಾಳುಕ್ಯ ೧ನೆಯ ಸೋಮೇಶ್ವರ
ಬಳ್ಳಾರಿ ಜಿಲ್ಲೆ (ಸೌ. ಇಂ. ಇ. ೯, ಭಾ. ೧, ಪು. ೯೩)

ಈ ಸುದೀರ್ಘ ಶಾಸನವು ಸೊಗಸಾದ ಕಿರುಗಬ್ಬವಾಗಿದೆ. ಅವರೊಳಗಿನ ಕೆಲ ಪದ್ಯ-ಗಳನ್ನು ಇಲ್ಲಿ ಆಯ್ದಿದೆ.

### ಶಿವಸ್ತುತಿ

ಈ ಶಾಸನಾರಂಭದ ಪದ್ಯದಲ್ಲಿ ಪೊಸವಡಂಗಿಲೆ (ಈಗಿನ ಹಿರೇಹಡಗಲಿ) ಗ್ರಾಮದ ನೂಱಿಪ್ಪದಿಂಬರಿಗೆ ಶ್ರೇಯಸ್ಸನ್ನು ಕೋರಿದೆ.

ಸ್ರ.|| ಶ್ರೀಮದ್ದೇವಾಧಿದೇವಂ ತ್ರಿಭುವನಜನಕಂ ಸರ್ವ್ವಗಂ ವೇದವೇದ್ಯಂ
ಸೋಮಂ ಲೋಕತ್ರಯಾಭ್ಯರ್ಚ್ಚಿತಪದಕಮಳಂ ಶಾಶ್ವತಂ ವಿಶ್ವವಿದ್ಯಾ-
ಧಾಮಂ ನೂಱಿಪ್ಪದಿಂಬರ್ಗ್ಗಭಿಮತಫಳಮಂ ಮಾಳ್ಕೆ ದೇವೇಶನೀಶಂ
ಭೂಮಿನ್ದ್ವಾತ್ಮಾಗ್ನಿತೀಬ್ರದ್ಯುತಿಪವನಜಳವ್ಯೋಮಗಾತ್ರಂ[1] ತ್ರಿಣೇತ್ರಂ||

### ವೀರರನ್ನು ನಡುಗಿಸಿದ ಗಂಗ ಪೆರ್ಮಾಡಿ

ಮ.ಸ್ರ.|| ಪರಿಯಿಟ್ಟೇ ಬಪ್ಪನೀ ಬಪ್ಪನೆ ಕಡುಮುಳಿಸಿಂ ಗಂಗ ಪೆರ್ಮ್ಮಾಡಿರಾಯಂ
ನಿರುತಂ ತಾನೆಂದು ಚೋೞಂ ಮದಮನುಡುಗಿದಂ ಗೌಳನಳ್ಳಾಡಿದಂ ಬ-
ಬ್ಬರರಾಜಂ ಗರ್ಬ್ಬಮಂ ತಾನುಳಿದನಗಿದನಂಧ್ರಂ ತೆರಳ್ದೋಡಿಪೋದಂ
ಮರುಭೂಪಂ ಮಾಳವಂ ಮಗ್ಗಿದನತಿಭಯದಿಂ ಗೂರ್ಜ್ಜರಂ ಗೂಡು-
ಗೊಂಡಂ ||೧೧೦||

### ಪೊಸವಡಂಗಿಲೆ

ಪೊಸವಡಂಗಿಲೆ–ಹೊಸಹಡಗಲಿ–ಈಗ ಹಿರೇಹಡಗಲಿಯಾಗಿದೆ. ಇಲ್ಲಿಯ ನಂದನದ ಸೊಬಗಿನ ವರ್ಣನೆಯಲ್ಲಿ, ಗಿಳಿಗಳು ಪಂಡಿತರ ಮಾತುಗಳನ್ನು ಮರುನುಡಿಯುತ್ತಿರುವವೆಂದಿರು-ವುದೂ ಮನೆಗಳು ದಾನಧರ್ಮದ ತವರುಮನೆಗಳು ಎಂದಿರುವುದೂ ಗಮನಾರ್ಹವಾಗಿವೆ (ಪ. ೧೧೧, ೧೧೨). ಮುಂದಿನ ೧೧೩ನೆಯ ಪದ್ಯ ಈ ಮಾತನ್ನು ಸ್ಪಷ್ಟಗೊಳಿಸುತ್ತಿದೆ. ೧೧೪ನೆಯ ಪದ್ಯ-ದೊಳಗಿನ, ಈ ಊರಲ್ಲಿ ಎಲ್ಲವೂ ಹೊಸಹೊಸದೆಂಬ ಮಾತು ಗಮನಿಸತಕ್ಕ ಇನ್ನೊಂದು ವಿಶೇಷ.

---

1. ಭೂಮಿ + ಇನ್ದು (ಚಂದ್ರ) + ಆತ್ಮ + ಅಗ್ನಿ + ತೀಬ್ರದ್ಯುತಿ (ಸೂರ್ಯ) + ಪವನ (ವಾಯು) + ಜಳ + ವ್ಯೋಮ ಗಾತ್ರಂ (ಇವೆಲ್ಲಾ ದೇಹವಾಗಿ ಉಳ್ಳವನು.)

ಉ.ಮಾ॥ ತೀಡುವ ತಂಬೆಲರ್ಬ್ಬೆಳಸಿ ತದ್ವನ ಲಕ್ಷ್ಮಿಯ ಮುಂದೆ ಮಂಗಳಂ
ಬಾಡುವ ತುಂಬಿ ಕೋಡುವ [1]ಪುಳಿಲ್ಮದೆ ಪಾಡುವ ಹಂಸ ರಾಗದಿಂ-
ದಾಡುವ ಸೋಗೆ ಬಾದಿನೊಳವ್ರೋದಿನೊಳಂ ವಿಬುಧಾಳಿಯಂ ತೊದ-
ಲ್ಮಾಡುವ ಕೀರವೀ **ಪೊಸವಡಂಗಿಲೆ**ಯೊಪ್ಪುವ ನಂದನಂಗಳೊಳ್ ॥

ಚಂ॥ ಪುರಿಲಲನಾದುಕೂಲಮುಗಳೊಳ್ಪರಿರಂಜಿಪ ನಿರ್ಮ್ಮಳಾಂಬು ಭಾ-
ಸುರನವಫೇನರಾಜಿ ಕಳಕಾಂಚಿವೊಲೊಪ್ಪಿರೆ ಕೋಟೆ ಪೀನಪೀ-
ವರಕುಚ ಚಾರುಚೀನಚಳದಂಶುಕದಂತಿರೆ ಕೇತುಮಾಳೆ ವಿ-
ಸ್ತರತರ ದಾನಧರ್ಮ್ಮದ ತವರ್ಮ್ಮನೆಗಳ್ಮನೆಗಳ್ಮನೋಹರ ॥೧೧೨॥

ಮನೆಮನೆ ಶಂಕರಾಚ್ಯುತಬುಧಾತಿಥಿಪೂಜೆಯಿನಗ್ನಿಹೋತ್ರದಿಂ-
ದನುಪಮ ವೇದನಾದ ಮಠಸತ್ರಸಭಾಶಿವವಿಷ್ಣುವಾಗ್ನಿಕೇ-
ತನತತಿ ಕೇರಿಕೇರಿ ಜನರಿಂ ಸಲೆ ತಿಂತಿಣಿ ಬೀದಿಬೀದಿ ತಾ-
ನೆನಿಸುವುದಾಗಳುಂ ಪೊಸವಡಂಗಿಲೆ ವಿಶ್ವಮಹೀತಳಾಗ್ರದೊಳ್ ॥೧೧೩॥

ಕಂ॥ ಪೊಸ ಕಾವ್ಯಂ ಪೊಸ ಗೇಯಂ
ಪೊಸ ವಾದ್ಯಂ ಪೊಸ ವಿನೂತರಸವಂ ವೃತ್ತಂ
ಪೊಸ ವಸ್ತು ವೊಸವಿಳಾಸಂ
ಪೊಸದೇಸೆ ಸಮಂತು ಪೊಸವಡಂಗಿಲೆಗೆಲ್ಲಾ ॥೧೧೪॥

## ವಿಟಚಕ್ರವರ್ತಿ ದೇಮರಸ

ಈ ಊರ ನೂರಿಪ್ಪತ್ತು ಮಹಾಜನರೊಳಗಿನ ದೇಮರಸನು ಮಹಾಮಾತ್ಯನಾಗಿದ್ದನು. ಸಮಸ್ತ ರಾಜ್ಯಭಾರವನ್ನು ಅವನಿಗೆ ಹೊರಿಸಲಾಗಿತ್ತು. ರಣರಂಗರಾಮನೆನಿಸಿದ್ದ ಆತನನ್ನು 'ವಿಟಚಕ್ರವರ್ತಿ' ಎಂದು ಬಣ್ಣಿಸುವ ಆಯ್ದಾರು ಪದ್ಯಗಳು ಸೊಗಸಾಗಿವೆ. ಚೆಲುವನಾದ ಈ ಮಾನವಮನ್ಮಥನು ಮೇನಕಿ ಮೊದಲಾದವರಿಗೆ ಸರಿದೊರೆಯಾದ ವೇಶ್ಯೆಯರ ಕಣ್ಣುಗಳಲ್ಲಿ ತನ್ನ ಹೆಸರನ್ನು ತೆಲುಗು ತಮಿಳು ಕನ್ನಡ ನಾಗರ ಲಿಪಿಗಳಲ್ಲಿ ಬರೆದನೆಂಬ ವರ್ಣನೆಯಿಂದ (ಪ. ೧೦೨) ಈತನ ವಿಲಾಸದ ಕಲ್ಪನೆ ಬರುವುದು.

ಕಂ॥ ವನರುಹ ವದನದ ಮದಪಿಕ-
ನಿನದದ ಗುರುಕುಚದ ಕಂಬುಕಂಠದ ಮೃಗಲೋ-
ಚನದ ಮಳಯರುಹಗಂಧದ
ವನಿತಾನಿಕರಕ್ಕೆ ದೇಮನಭಿನವಕಾಮಂ ॥೧೧೫॥

ಚಂ॥ ಚಲದ ವಿಳಾಸದುನ್ನತಿಯ ಬೀರದುದಾರದ ಜನ್ಮಭೂಮಿಯುಂ
ಮಲೆವರ ಮಾರಿಯುಂ ಮಿಗುವರಾಜ್ಞೆಗದೊಳ್ ಜಯದಂಕಕಾಜನಂ

1. ಪುಳಿಲ್ಮಡೆ ಎಂದಿರಬಹುದೇ?

ಸುಲಲಿತರೂಪನಂ ಸುಬಗಿನಾಗರಮಂ ವಿಟಚಕ್ರವರ್ತಿಯಂ
ಕಲಿಯುಗಕಾಮನಂ ನೆಗಳ್ದ **ದೇಮನ**ನುದ್ಧ್ವಯಶೋಭಿರಾಮನ ||೧೧೬||

ಉ. ಮಾ.|| ಮೇನಕಿ ರಂಭೆಯುರ್ಬ್ಬಸಿ ತಿಳೋತ್ತಮೆಯುನ್ನ[1]ರೆನಿಪ್ಪ ವಾರಕಾಂ-
ತಾನಿಕರಂಗಳುದ್ಧ್ವರಚಕ್ಷುವೊಳೊಪ್ಪೆ[2] ನಿಜಾಂಕಮಾಲೆಯುಂ
ಮಾನವಮನ್ಮಥಂ ಬರೆದನಾದರದಿಂ ವಿಟಚಕ್ರವರ್ತ್ತಿ ಧಾ-
ತ್ರೀನುತವಾಗಿ **ತಿಲ್ ತಿವುಳ ಕನ್ನಡ ನಾಗರದಕ್ಕರಂಗಳ** ||೧೧೭||

## ವಿಷ್ಣುವರ್ಧನನ ಪರಾಕ್ರಮ

ಇದೇ ಕಲ್ಲಲ್ಲಿ ಕಡೆದ, ಕ್ರಿ. ಶ. ೧೧೦೭ರ ಸಂಗತಿಯನ್ನು ಉಲ್ಲೇಖಿಸುವ ಶಾಸನದಲ್ಲಿ ಈ ಪದ್ಯವಿದೆ. ಭ್ರೂಭಂಗಮಾತ್ರದಿಂದಲೇ ಇಷ್ಟೆಲ್ಲ ಸ್ಥಳಗಳು ವಿಷ್ಣುವರ್ಧನನಿಗೆ ವಶವಾದುವೆಂದು ಇಲ್ಲಿ ಹೇಳಿದೆ:

ಮ. ಸ್ರ.|| ತುಳುದೇಶಂ ಚಕ್ರಕೂಟಂ ತಳವನಪುರವುಚ್ಚಂಗಿ ಕೋಳಾಲವೇಳುಂ
ಮಲೆ ವಲ್ಲೂರ್ಕ್ಕಂಚಿ ಕೊಂಗರ್ವ್ವಿಸುವ ಹರಿಯಘಟ್ಟಂ ಬಯಲ್ನಾಡು ನೀಳಾ-
ಚಳದುರ್ಗ್ಗಂ ರಾಯರಾಯೋತ್ತಮಪುರಿ ತೆರೆಯೂರ್ಕ್ಕೋವಲೂರ್ಗ್ಗೊಂದ-ವಾಡಿ-
ಸ್ಥಳಮಂ ಭ್ರೂಭಂಗದಿಂ ಕೊಂಡತುಳಭುಜಬಳಾಟೋಪನೀ ವಿಷ್ಣುಭೂಪಂ||

## ೨೭

**ನಾಗಾವಿ,**
ಕಲಬುರ್ಗಿ ಜಿಲ್ಲೆ

**ಕ್ರಿ. ಶ. ೧೦೫೮**
**ಚಾಳುಕ್ಯ ಆಹವಮಲ್ಲ**
(ಹೈ. ಆ. ಸಿರೀಜ್ ೮, ಪು. ೧೧)

ಆಗಿನ ಈ ಊರ ಹೆಸರು ನಾಗವಾವಿ. ಇದೊಂದು ಮಹಾಗ್ರಹಾರ. ಅಲ್ಲಿಯ ತ್ರೈಪುರುಷ-ದೇವರ ಶಾಲೆ ಘಟಿಕಾಸ್ಥಾನವಾಗಿತ್ತು. ಅಲ್ಲಿಯ ವಿದ್ಯಾದಾನದ ಶ್ರೇಷ್ಠತೆ ಮತ್ತು ವ್ಯಾಪ್ತಿ ಇಲ್ಲಿ ಬಂದ ವಿವರಣೆಯಿಂದ ವ್ಯಕ್ತವಾಗುತ್ತದೆ. ಇನ್ನೂರು ವೇದವಿದ್ಯಾರ್ಥಿಗಳು, ಐವತ್ತು ಶಾಸ್ತ್ರವಿದ್ಯಾರ್ಥಿ-ಗಳು ಇಲ್ಲಿ ಓದುತ್ತಿದ್ದರು. ಸರಸ್ವತೀಭಂಡಾರವೆಂಬ ಗ್ರಂಥಾಲಯವೂ ಇಲ್ಲಿ ಇತ್ತು. ಇವೆಲ್ಲ ವಿದ್ಯೆ-ಗಳನ್ನು ಕಲಿಸಲು ಒಂಬತ್ತು ಜನ ಉಪಾಧ್ಯಾಯರೂ ಆರ್ವರು ಭಂಡಾರಿಗರೂ ಇದ್ದರು. ಇಂತಹ ನಾಗಾವಿ ಅಱುಲು-೩೦೦ ಎಂಬ ನಾಡಿಗೆ ತಿಲಕದಂತಿರುವ ಅಗ್ರಹಾರ ಎನಿಸಿದುದು ಅಚ್ಚರಿಯಲ್ಲ.

1 ಶಾ. ಮೂ. : ಯ್ಯಂನ
2. ಶಾ. ಮೂ. : ಚಕ್ಷು[ವೊ]ಪ್ಪೆ

ಅಲ್ಲಿ ಗುರುವರ್ಗ–ಶಿಷ್ಯವರ್ಗದವರೆಲ್ಲರ ಅಶನವಸನಾದಿಗಳ ಏರ್ಪಾಟಿಗಾಗಿ, ಜೀರ್ಣೋದ್ಧಾರ ಮೊದಲಾದ ಕೆಲಸಗಳಿಗಾಗಿ ೧೦೦೦ ಮತ್ತರು ಭೂಮಿಯ ಉಂಬಳಿಯಿತ್ತು. ಇಲ್ಲಿಯ ಮೊದಲಿನ ಎರಡು ಪದ್ಯಗಳು ಇದನ್ನೆಲ್ಲ ಮಾಡಿಸಿದ ಕಾಳಿದಾಸಯ್ಯ ದಂಡನಾಯಕನ ಗುಣವರ್ಣನಪರ–ವಾಗಿವೆ.[1]

## ಕಾಳಿದಾಸ ದಂಡಾಧಿಪ

ಗೃಹಸ್ಥಾಶ್ರಮವನ್ನು ಪವಿತ್ರವಾಗಿ ನಡಸಿಕೊಂಡು ಬಂದ ಕೃತಕೃತ್ಯನೆಂದು ಈತನನ್ನು ಹೊಗಳಿದೆ.

ಮ ವಿ.॥ ಸಲೆ ಸತ್ಯಕ್ಕೆ ಮೊದಲ್ ಚಲಕ್ಕೆ ನೆಲೆ ಧರ್ಮ್ಮಕ್ಕವರ್ಮ್ಮಮಾಯಕ್ಕಗುಂ-
ದಲೆ ಬೀರಕ್ಕೆ ತವಗ್ಗುಣಕ್ಕೆ ಕಣಿ ಪೆಂಪಿಂಗಿಕ್ಕೆ ಚಾಗಕ್ಕೆ ತಾ-
ಯ್ವೊಲೆ ನೇಣ್ಮಿಂ[ಗೆ ಮಾಂತನಕ್ಕೆ] ಗುಡಿ ಚಾತುರ್ಯ್ಯಕ್ಕೆ ಬೀಡಿಕ್ಕೆ ಕೀ-
[ರ್ತ್ತಿಲತಾವಲ್ಲಿಗ]ಡಪ್ಪು ತಾನೆನಿಸಿದಂ ಸಂಗ್ರಾಮಕಂಠೀರವಂ ॥೧೯॥
ಸತತಂ ಬ್ರಾಹ್ಮಣತರ್ಪ್ಪಣಂ ಯಜನಕಾರ್ಯ್ಯಂ ದೇವತಾಪೂಜೆ ತ-
ಪ್ಪಿತ್ಪಸನ್ತಾನಕೆ ತೃಪ್ತಿ[2] ಬಂದತಿಥಿಸತ್ಕಾರಂ ಜಗನ್ನೂತ ವಿ-
ಶ್ರುತನೈಮಿತ್ತಿಕವೆಂದು ಸಂದ ನಿಗಮಾನುಷ್ಠಾನವುಂ ಮಾಡಲಾ
ಕೃತಕೃತ್ಯಾತ್ಮಕನೀಧರಿತ್ರಿಗೆ ಪವಿತ್ರಂ ತದ್ಗೃಹಸ್ಥಾಶ್ರಮಂ ॥ ೨೦॥

## ಮಹಾಗ್ರಹಾರ ನಾಗವಾವಿ

ವ॥—ಶ್ರೀಮತ್ಕಾಳಿದಾಸಯ್ಯ ದ[ಣ್ಡನಾಯಕಂ] ಪರಮೇಶ್ವರದತ್ತಿ[3] ಯಾಗೆ ತಾಮ್ರ[ಶಾಸನಂ] ಬೆರಸು[4] ಪಡೆದು ಚತುರ್ವ್ವೇದಪಾರವಾರಪಾರಗಮ-ರೆನಿಸಿದ ನಾಲ್ನೂರ್ವ್ವಿಪ್ರೋತ್ತಮರ್ಗ್ಗೆ ಭರಣಂಗೆಯ್ಯಲಭಿನವಬ್ರಹ್ಮಲೋಕ-ಮಿದೆಂಬನ್ತು ನೆಗಟ್ಟಿವೆತ್ತ ಸಕಳವಸುಮತೀತಳಕ್ಕೆ ತಲೆಯಿದೆನಿಸಿ ನೆಗಟ್ದ ಕುನ್ತಳ ಮಹೀತಳಕ್ಕೆ ಮುಖಮಿದೆಂಬನ್ತಿರ್ದ್ದ ಅಱಲು ಮುನ್ನೂರ್ಕ್ಕೆ ತಿಲಕಮಪ್ಪನ್ತಿರ್ದ್ದ

---

1. ಈ ಶಾಸನಕ್ಕೆ ಪೂರಕವಾಗಿ ೩೭ನೆಯ ಶಾಸನವನ್ನು ನೋಡಬೇಕು.

2 ಶಾ. ಮೂ. : ಸಂತಾನಕತೃಪ್ತಿ

3 ಪರಮೇಶ್ವರ ದತ್ತಿ : ದೇವರಿಂದ ದತ್ತಿಯಾಗಿ ಬಂದುದು. ಶ್ರೀರಾಮರ ದತ್ತಿ ಅಗ್ರಹಾರ, ಜನಮೇಜಯ ದತ್ತಿ ಅಗ್ರಹಾರ ಮೊದಲಾದುವೂ ನಮ್ಮ ನಾಡಿನಲ್ಲಿದ್ದುದು ಶಾಸನ-ಗಳಿಂದ ತಿಳಿಯುತ್ತದೆ.

4. ಶಾ.ಮೂ. ಬ್ಬರಸು. ತಾಮ್ರಶಾಸನಸಹಿತವಾಗಿ—ದಾನಪಡೆದವನಿಗೆ ವೈಯಕ್ತಿಕ-ವಾಗಿ ತಾಮ್ರದ ತಗಡುಗಳಲ್ಲಿ ಶಾಸನ ಬರೆದುಕೊಟ್ಟು, ಆ ವಿಷಯವನ್ನು ಸಾರ್ವಜನಿಕರಿಗೆ ತಿಳಿಸಲೆಂದು ಶಿಲಾಶಾಸನ ಬರೆಯಿಸಿ ಗುಡಿಯ ಮುಂದುಗಡೆಯಲ್ಲಿ, ಊರ ಮುಖ್ಯಸ್ಥಳದಲ್ಲಿ ನಿಲ್ಲಿಸುವುದು ಹಿಂದಿನ ಪರಿಪಾಠ.

**ಮಹಾಗ್ರಹಾರಂ ನಾಗವಾವಿಯೊಳನೇಕ** ಜನ್ಮೋಪಾರ್ಜ್ಜಿತಾತ್ಮೀಯಪುಣ್ಯಪುಂಜ-ಮುಮಂ ನಿಜಗುಣಗಣೋಪಾರ್ಜ್ಜಿತ ಯಶೋಲತಾವಿಶಾಲಕನ್ದಮುಮಂ ಅಖಿಳ ಜಗತೀತಳಕ್ಕೆ ಪ್ರತ್ಯಕ್ಷಂ ಮಾಡಿ ತೋಱುವನ್ತೆ ಕಟಕಕಮಳಾರ್ಕ್ಕವೆಸರ ತ್ರೈಪುರುಷ ದೇವರ ಶಾಲೆಯುಮಂ ನಿಜಾಭಿಧಾನಾಭಿರಂಜಿತಮಪ್ಪ ಮಧುಸೂದನಾಲಯ-ಮುಮಂ[1] ರಾಮತೀರ್ತ್ಥಾಭಿರಾಮಮಪ್ಪರಾಮೇಶ್ವರಾಲಯ-ಮುಮಂ ರಾಮತೀರ್ತ್ಥ-ಮುಮಂ ನಿಜಧರ್ಮ್ಮಕಾರಿತಾಧಿಕಾರ ಪದವೀವಿರಾಜಿತನಪ್ಪ ಶಾಳೆಯ [ಕೈಂಕ]-ರ್ಯ್ಯಮಂ ಮಾಡಿಸಿ,

## ಘಟಿಕಾಸ್ಥಾನಮೆನಿಪ್ಪ ಶಾಲೆ

ಶಾಲೆಯುಲೋದುವ ವೇದಾಧ್ಯಾಯಿಗಳಿನ್ನೂರ್ವ್ವರ್ಗ್ಗಂ ಶಾಸ್ತ್ರಾಧ್ಯಾಯಿ-ಗಳಯ್ವ್ವತ್ತಿಂಬರ್ಗ್ಗಂ ತದುಪಾಧ್ಯಾಯಿಗಳು ೩ ಭಟ್ಟದರ್ಶ್ಶನ-ನ್ಯಾಸ-ಪ್ರಭಾ-ಕರ ವ್ಯಾಖ್ಯಾತೃಗಳ್ಮೂವರ್ಗ್ಗಂ, ವೇದ್ದವನೋದಿಸುವುಪಾಧ್ಯಾಯರ್ಮ್ಮೂವರ್ಗ್ಗಂ, **ಸಾಲೆಯ ಸರಸ್ವತೀ ಭಂಡಾರಿಗರ್ಒರ್ವ್ವರ್ಗ್ಗ**ಮನ್ತು ೨೫೭[2] ಮಾಣಸರ ಅಶನಾ-ಚ್ಛಾದನಕ್ಕಂ ಜೀರ್ಣ್ನೋದ್ಧಾರ ಖಂಡಸ್ಫುಟಿತ ನವಸುಧಾಕರ್ಮ್ಮಕ್ಕಂ ಗನ್ಧಾಕ್ಷತಪುಷ್ಪ ಧೂಪದೀಪ ನಿವೇದ್ಯಕ್ಕಂ ತ್ರೈಪುರುಷದೇವರ ಶಾಲೆಯ ಪರಿಷಮಾಣಿಯರ್ಗ್ಗೆ ಸರ್ವ್ವ-ನಮಸ್ಯಮಾಗಿ ಕೊಟ್ಟ ಕೆಯ್ಮಾಣಿಕೇಶ್ವರದಗಟಿಂ ಬಡಗ ಮತ್ತರು ೧೦೦೦; ಆ ಹೊಲಂ ನಾಗವ್ವಾವಿಯ ಧಿಗ್ಗವಿಗೆಯ ಅೞಲೂರ ಎಡೆವಾಱನದ[ಕೆಳ]ಗೆ ಭಾಟ್ಟ-ದರ್ಶನವ್ಯಾಖ್ಯಾತೃಗೆ ಮತ್ತರು ೩೫, ನ್ಯಾಸವ್ಯಾಖ್ಯಾತೃಗೆ ಮತ್ತರು ೩೦, ಪ್ರಭಾಕರ ವ್ಯಾಖ್ಯಾತೃಗೆ ಮತ್ತರು ೪೫, ಸರಸ್ವತೀಭಂಡಾರಿಗೆ ಮತ್ತರು ೩೦, ಘಟಿಕಾ ಪ್ರಹಾರಿಗೆ ಮತ್ತರು ೩೦, ಪಂಚಿಕೇಶ್ವರಕ್ಕೆ ಮತ್ತರು ೪೫, ಚಣ್ಡೇಶ್ವರ ರೆಬ್ಬಂಗೆ ಮತ್ತರು ೨೦, ರಾಮೇಶ್ವರ ಸಿಡಿಲ ಹರಿಕಲ್ಲಗುತ್ತಿ ಪ[ಳ್ಳಿ]ಂ ಮಿರಿಕಿರಿಗೆ ಮಾಲೆಯ [ಕಾಂ]ತ-ಯ್ಯನ ಮಾನ್ಯ ಮನೆ ೧.

1. ಈ ಮಧುಸೂದನಾಲಯವು ವಿದ್ಯಾಗಾರವಾಗಿತ್ತೆಂಬುದು ಮುಂದೆ ಇದೇ ಊರ ಕ್ರಿ. ಶ. ೧೦೬೯ರ ಶಾಸನದಲ್ಲಿ ಬರುವದು.

2. ಈ ಒಟ್ಟು ಸಂಖ್ಯೆಯಂತೆ ತಾಳೆ ನೋಡಿದರೆ, ೨೫೦ (ವೇದ ೨೦೦+ಶಾಸ್ತ್ರ ೫೦) ಛಾತ್ರವರ್ಗವನ್ನುಳಿದು ಶಿಕ್ಷಕರು ಮತ್ತು ಭಂಡಾರಿಗಳ ಒಟ್ಟು ಸಂಖ್ಯೆ ಏಳೆಂದಾಗುತ್ತದೆ. ಆದರೆ ಶಾಸನೋಕ್ತ ವಿವರಣೆಯಂತೆ ಇವರು ಒಟ್ಟು (೩+೩+೩+೬=) ೧೫ ಜನ ಆಗುತ್ತಾರೆ. ಇಲ್ಲಿ ವಿವರವನ್ನು ಬರೆಯುವಲ್ಲಿಯೂ ಓದುವಲ್ಲಿಯೂ ಏನೋ ಗೊಂದಲವಾಗಿರಬೇಕೆಂದು ಎನಿಸು-ತ್ತದೆ. ಬಹುಶಃ 'ಭಂಡಾರಿಗರೊರ್ವ್ವರ್ಗ್ಗಂ' ಎಂದಿದೆಯೋ ಏನೋ. 'ತದುಪಾಧ್ಯಾಯಿಗಳು ೩' ಎಂಬಲ್ಲಿಯ ೩ ಅಂಕಿ ಮುಂದಿನ ಭಟ್ಟದರ್ಶನಾದಿ ಉಪಾಧ್ಯಾಯರಿಗೆ ಸಂಬಂಧಪಟ್ಟುದೆಂದು ತೋರುತ್ತದೆ. ಹೀಗಿದ್ದರೆ, ಒಟ್ಟು ಏಳು ಜನಕ್ಕೆ (ಭಟ್ಟದರ್ಶನಾದಿ ಉ. ೩+ವೇದ ಉ. ೩+ ಭಂ. ೧) ಸರಿಹೋಗುವುದು.

೨೮

## ಉಚ್ಚಂಗಿದುರ್ಗ, ಕ್ರಿ. ವ. ೧೦೬೪

## ಹರಪನಹಳ್ಳಿ ತಾಲೂಕು, ಚಾಳುಕ್ಯ ೧ನೆಯ ಸೋಮೇಶ್ವರ

ಬಳ್ಳಾರಿ ಜಿಲ್ಲೆ (ಸೌ. ಇಂ. ಇನ್ಸ್. ೯, ಭಾಗ ೧, ಪು. ೧೦೭)

### ಉಚ್ಚಂಗಿ

ಈ ಗದ್ಯದಲ್ಲಿ ಉಚ್ಚಂಗಿ ಸ್ಥಳದ ಹಾಗೂ ಅದರ ಪರಿಸರ ಪ್ರದೇಶದ ಪೂರ್ವಪರಿಚಯ ಬಂದಿದೆ. ಉಚ್ಚಂಗಿ ಬೆಟ್ಟಕ್ಕೆ ನಾಲ್ಕು ಯುಗಗಳಲ್ಲಿ ನಾಲ್ಕು ಹೆಸರುಗಳು ಹೇಗೆ ಉಂಟಾದು-ವೆಂಬುದನ್ನು ಈ ಶಾಸನ ಹೇಳುತ್ತದೆ. ಕಲಿಯುಗದಲ್ಲಿ ಉಚ್ಚಂಗಿಯಬ್ಬೆ ಮೊದಲಾದ ಮೂವರು ಕನ್ನೆಯರು ಇಲ್ಲಿ ತಪಸ್ಸು ಮಾಡಿದ್ದರಿಂದ ಇದರ ಹೆಸರು ಉಚ್ಚಂಗಿಯಾಯಿತು. ಪರ್ವತದ ಮೂಡಣ ದಿಕ್ಕಿನಲ್ಲಿ ಹಿಡಿಂಬವನದೊಳಗಿದ್ದ 'ಸ್ವಯಂಭು ಕಲಿದೇವಸ್ವಾಮಿ'ಗೆ ಹಿಡಿಂಬೆಯು ಗುಡಿ ಕಟ್ಟಿಸಿದುದರಿಂದ 'ಹಿಡಿಂಬೇಶ್ವರ' ಎಂದೂ ಆ ಲಿಂಗವು (ಚಂದ್ರಕಳೆಯಂತೆ) ಬೆಳೆಯು-ತ್ತಿದ್ದುದರಿಂದ 'ಕಳೇಶ್ವರ' ಎಂದೂ 'ಅಮೃತಲಿಂಗ' ಎಂದೂ ಹೆಸರಾಯಿತು. ಈ ದೇವರಿಗೆ ಉಚ್ಚಂಗಿ ಮೂವತ್ತನ್ನಾಳುತ್ತಿದ್ದ ದೇವಯ್ಯನು ಅಧಿಷ್ಠಾನ, ಮಠ, ಮಗ್ಗಲು (ಮಳಿಗೆ), ಬಾವಿ-ಗಳನ್ನು ಕಟ್ಟಿಸಿದನು.

ವ|| **ಕದಂಬಾವಾಡಿ ನಾಡ** ಮಧ್ಯದೊಳ್ಮೆರುವಿಪ್ಪಂತಿಟ್ಟಿದುಚ್ಚಂಗಿಯ ಪರ್ವ್ವತಂ. ಅದಕ್ಕೆ ನಾಲ್ಕು ನಾಮವದೆಂತೆಂದೊಡೆ : ಕೃತಯುಗದೊಳು ಮೇ[ಘ-ನಾ]ದನೆಂಬ ರಾಕ್ಷಸನಿವಾಸಮಪ್ಪುದಱಿಂ ಮೇಘನಾದವೆಂಬುದು; ತ್ರೇತೆಯೊಳ್ ಹಿರಣ್ಯಕನಿವಾಸಮಾತನ[ಂ*] ನಾರಾಯಣಂ ವಧೆಗೆಯ್ದಂದಿನೊಸಗೆಯೊಳ್ ಸ್ವರ್ಣ್ನ-ವೃಷ್ಟಿ ಕಱೆದುದಱಿಂ ವೀರಕನಕಗಿರಿಯೆಂಬುದು; ದ್ವಾಪಾರದೊಳುತ್ತುಂಗಮಹರ್ಷಿ ಆಶ್ರಮುಮಪ್ಪುದಱಿಂ ಉತ್ತುಂಗಪರ್ವ್ವತವೆಂಬುದು; ಕಲಿಯುಗದೊಳ್ ಉಚ್ಚಂಗಿ-ಯಬ್ಬೆಯೆಂಬಳು ಮೊದಲಾಗಿ ಮೂವರು ಬ್ರಾಹ್ಮಣಕನ್ನಿಕೆಯರು ತಪಂಗೆಯ್ದೀ-ಶ್ವರವರಪ್ರಸಾದದಿಂ ದೇವತ್ವಮಂ ಪಡೆದರದಱಿಂದುಚ್ಚಂಗಿ[1]ಯ ಪರ್ವ್ವತ-ವೆಂಬುದು.

### ಹಿಡಿಂಬವನ-ಹಿಡಿಂಬೇಶ್ವರ

ಆ ಪರ್ವ್ವತದ ಮೂಡಣದೆಸೆಯೊಳು ಹಿಡಿಂಬವನಮಾ ಬನದೊಳಗೆ ಸ್ವಯಂಭು ಕಲಿದೇವಸ್ವಾಮಿಯೆಂಬುದು. ಆ ದೇವರ್ಗ್ಗೆ ದೇಗುಲವಮ್ಮಾಡಿಸಿದಳು ಹಿಡಿಂಬೆ...[2]ದಿತ್ತ ಹಿಡಿಂಬೇಶ್ವರವೆಂಬುದು. ಆ ಲಿಂಗಂ ಪೆರ್ಚ್ಚೆ ಪೆರ್ಚ್ಚುವ ಕಾರಣದಿಂ

1. ಹಿಂದಿನ ಹೆಸರು 'ಉತ್ತುಂಗ', ಆದರ ತರುವಾಯದ ಹೆಸರು 'ಉಚ್ಚಂಗಿ' ಹಾಗೂ ಉಚ್ಛೃಂಗಿ (ಉತ್ + ಶೃಂಗಿ) 'ಉಚ್ಚಶೃಂಗಿ'—ಈ ಶಬ್ದಗಳ ತತ್ಸಮ ತದ್ಭವ ಸಂಬಂಧವನ್ನೂ ಗಮನಿಸಬಹುದು.

2. ಇಲ್ಲಿ ನಷ್ಟಾಕ್ಷರಗಳು 'ಯಲ್ಲಿಂ' ಎಂದು ಇರಬಹುದು.

ಕಳೇಶ್ವರವುದಮೃತಲಿಂಗದೇ[ವರ್] ಪ್ರಸನ್ನತೆಯಿಂ ಕಣ್ದು ಶ್ರೀಮದ್ದಣ್ಡನಾಯಕ ದೇವಪಯ್ಯ ಉಚ್ಚಂಗಿ ಮೂವತ್ತುಮನಾಳುತ್ತಮಿರ್ದು, **ದೇಗುಲದ ಅಧಿಷ್ಠಾನ**-ಮುಂ ಕಟ್ಟಿಸಿ, ಮಠ ಮಗ್ಗಲು ಬಾವಿಯೆಂಬಿವಂ ಮಾಡಿಸಿ, ಪ್ರಧಾನರ್ಗ್ಗಱಿಪಿದ[1], ದೇವರ್ಗ್ಗೆ ಭೋಗಮಪ್ಪಂತಾಗಿ ಅರಸರ್ಗ್ಗೆ ಬಿನ್ನಹಂಗೆಯ್ಬುದೆಂದೊಡೆ, ಶ್ರೀಮನ್ಮನೆ-ವೆರ್ಗ್ಗಡೆ ದಣ್ಡನಾಯಕ ನಾಗದೇವಯ್ಯನುಂ ದಣ್ಡನಾಯಕ ಎಱಕಪಯ್ಯನುಂ ಶ್ರೀಮತ್ಸಂಧಿವಿಗ್ರಹಿ ದಣ್ಡನಾಯಕ ಮಾರಮಯ್ಯನುಂ ಸಂಧಿವಿಗ್ರಹಿ ಕಾಳಿದಾಸ-ಭಟ್ಟರುಂ ಅರಸರ್ಗ್ಗೆ ಬಿನ್ನಪಂಗೆಯ್ದರು. ರಾವಿಘಟ್ಟಿಪಂ ಬಿಡುವುದೆಂದೊಡರಸರು ಈಚ್ಚಱದರ್....

೨೯

**ಹೊಟ್ಟೂರು,**  **ಕ್ರಿ. ಶ. ೧೦೬೭**

**ಸಿಗ್ಗಾವಿ ತಾಲೂಕು,**  **ಚಾಳುಕ್ಯ ೧ನೆಯ ಸೋಮೇಶ್ವರ**

ಧಾರವಾಡ ಜಿಲ್ಲೆ  (ಎಪಿ. ಇಂ. ೧೬, ಪು. ೮೩)

ಮೊದಲು ಮಾರಗಾವುಂಡನ ಗುಣವರ್ಣನೆಯ ಪದ್ಯಗಳಿವೆ. ಆದರೆ ವಿಶೇಷತಃ ಆತನ ಮಗ ಕೇಶಿ ಗಾವುಣ್ಡನ ಪ್ರಶಸ್ತಿಪರ ಶಾಸನವಿದು. ಕಾದಂಬರಾಜ ಹರಿಗನು ರಾಜ್ಯಚಿಹ್ನಗಳನ್ನೂ ಚಾಳುಕ್ಯವಿಕ್ರಮಾದಿತ್ಯನು 'ಮಗನೆನಗೀತನೆ' ಎಂದು ಮೆಚ್ಚಿ, ನಚ್ಚಿ 'ಚಾಳುಕ್ಯ ಗಂಗಪೆರ್ಮಾಡಿ' ಎಂಬ ಹೆಸರನ್ನೂ, ಗಂಗ ಮತ್ತು ಚಾಳುಕ್ಯರ ರಾಜ್ಯಚಿಹ್ನಗಳನ್ನೂ ಕೊಟ್ಟು ಈತನನ್ನು ಮನ್ನಿಸಿದ್ದಾರೆ.

ಶಾಸನದ ಕೊನೆಯಲ್ಲಿ ಕೆಲವು ಅಕ್ಷರಗಳು ನಷ್ಟವಾದ, ಲಿಪಿದೋಷಗಳುಳ್ಳ ಒಂದು ಚಂಪಕಮಾಲಾವೃತ್ತವಿದೆ. ಅದರಿಂದ ಈ ಶಾಸನವನ್ನು 'ಸ್ಫುರಿತವಚೋವಿಭಾಸಿ ಚ[ಟು]ವಾ[ಣಿ]ಯ ಸತ್ಕವಿ ರಾಜವಲ್ಲಭನು ವಿರಚಿಸಿದನೆ'ಂದೂ, 'ವಿವೇಕನಿಧಿ...(ಅವನೋ) ಸವಿಸ್ತರಿಸಿ ಬರೆದನೆ'ಂದೂ, 'ವಾಕ್ಪತಿ ಚಂದ್ರಭಟ್ಟರು ಮತ್ತು ಗುರು ಬಡಭದ್ರದೇವರು ತಿದ್ದಿದರೆ'ಂದೂ ತಿಳಿಯುತ್ತಿದೆ.

**ಮಾರಗಾವುಂಡ[2]**

ಕಂ॥ ಆ ನಾಡೊಳಖಿಳಘಟಿಕಾ-

ಸ್ಥಾನವಿದೆನಿಸಿತ್ತು ಪೊಟ್ಟಿಯೂರದಱಿಲ್ ಸ-

---

1. ಈ 'ದ' ಹೆಚ್ಚಿನದೆಂದು ತೋರುತ್ತದೆ.

2. ಈ ಹೆಳವರಭಾವ ಮಾರಗಾವುಂಡನ ವರ್ಣನೆ ಈ ಮೊದಲು ೨೧ನೆಯ ಶಾಸನದಲ್ಲಿ ಬಂದಿದೆ.

ಲ್ಲೀನಮತಿ ಮಾರನುಚಿತನ-
ಚೋನಿಧಿ ಗಾವುಣ್ಡಸಾಮ್ಯದೊಳ್ ಸುಖವಿಟ್ಟ ||೧೨೧||

ಮ. ವಿ.|| ಕುಡುವವ್ವೆಂಡಿದೊಡತ್ಥಿಗತ್ಥಚಯಮಂ ಶ್ರೀಮಂತರುಂತೇನುಮಂ
ಕುಡರೀ ಲೋಕದೊಳೊನ್ದಪೂರ್ವವೆನಿಸಲ್ಕಾಲಿಲ್ಲದವ್ವೆಂಡಿ ಬಂ-
ದಡೆ ಕಾಲಂ ನಿಜಶಕ್ತಿಯಿಂ ಪಲಗ್ಗೆಗೊಟ್ಟಂ ಮಾರಗಾವುಣ್ಡನೆ-
ನ್ದಡೆ ತತ್ಸತ್ತ್ವದ ತತ್ತ್ವದುನ್ನತಿಯನಂತಿಂತುಂತೆನಲ್ಬೇರ್ಕುಮೆ ||೧೨೨||

ಕಂ|| ಗುಣದೊಳಳವಿನೊಳಂ ಮನು-
ಗೆಣೆಯೆನೆ ಪೆಳವಂಗೆ ಕಾಲನಿತ್ತುದಱಿಂ ದ-
ಕ್ಷಿಣಸೋಮನಾಥನೆನೆ ಧಾ-
ರಿಣೀತಳಂ ನೆಗಟ್ದನಲ್ತೆ ಮಾರನುದಾರಂ ||೧೨೩||

## ನಡುನಾಡತೀರ್ಥ ಕೇಶಿಗಾವುಂಡ

ವ|| ಇಂತು ಪರಾರ್ತ್ಥವುಂ ಪುರುಷಾರ್ತ್ಥಮುಂ ಬೆರಸು ಗೋಡುವರ ಮಾರಗಾವುಣ್ಡಂ ಗಾವುಣ್ಡುಗೆಯ್ಯುತ್ತಿರೆ, ತತ್ತನೂಭವಂ ಸಮಸ್ತಲೋಕಸ್ತೂಯಮಾನಾನೇಕಗುಣಗಣಾಧಾರಂ ಪರನಾರೀದೂರಂ, ಹಯವತ್ಸರಾಜಂ ಗಣಿಕಾಮನೋಜಂ, ಮಾರನಚಕ್ರನನ್ಯಾಯಚಕ್ರಂ, ಸ್ಥಿತಿಸಾರಸಮುದ್ರಂ ಕದಸ್ಸೈಕರುದ್ರಂ, ಏಕಾಂಗವೀರಂ ವೀರಾವತಾರಂ, ಚಲಕೆ ಬಲ್ಗಣ್ಡಂ ವೈರಿಭೇರುಣ್ಡಂ, ಪರಬಳವಾರ್ತ್ಥಂ ನಡುನಾಡತೀರ್ತ್ಥಂ, ದಾನಚಿನ್ತಾಮಣಿ ವಿಬುಧರಕ್ಷಾಮಣಿ, ಸೋಮೇಶ್ವರದಾಸಿ ವಿನಯವಿಳಾಸಿ, ವೈರಿನಾರಾಯಣಂ ನಾಮಾದಿ ಸಮಸ್ತಪ್ರಶಸ್ತಿಸಹಿತಂ ಶ್ರೀಮಚ್ಚಾಳುಕ್ಯಗಂಗವೆರ್ಮ್ಮಾಡಿ ಕೇಸವಗಾವುಣ್ಡಂ ನಾಟ್ಪ್ರಭುತ್ವದಿಂ ಪೊಟ್ಟೆಯೂಗ್ಗೆ ಗಾವುಣ್ಡುಗೆಯ್ಯುತ್ತವಿಟ್ದು,

ಮ ಸ್ರ|| ಪಡೆದಂ ಕಾದಂಬವಂಶಾಗ್ರಣಿ ಹರಿಗಮಹೀಪಾಳನೊಳ್ ಚಾಮರೌಘಂ
ಗುಡಿ ಚೌಕಂ ಭೇರಿ ಸಂಕಂ ಬರುಹಿ ಬಹಳಪಿಂಛಾತಪಂ ವಾರಣಂ ಬೆ-
ಳ್ಗೊಡೆಯೆಂಬೀ ರಾಜ್ಯಚಿಹ್ನಬ್ರಜಮನುದಿತ ತೀವ್ರಪ್ರಭಾಭಾಸಿ ತಾನೆಂ-
ದಡೆ ಹೋ[1] ಬಾಪ್ಪವ್ವುದಿಂತೀ ಭುವನಭವನದೊಳ್ ಕೇಶಿ ತೇಜೋವಿಳಾಸಂ||

ಕಂ|| ಮಗನೆನಗೀತನೆ ಚಾಳು-
ಕ್ಯಗಂಗವೆರ್ಮ್ಮಾಡಿಯೆಂದು ಪೆಸರ್ಗೊಟ್ಟಂ ಕೇ-
ಸಿಗೆ ಮೆಚ್ಚಿ ನಚ್ಚಿ ಚಾಳು-
ಕ್ಯ ಗಂಗ ವೆರ್ಮ್ಮಾಡಿ [ವಿಕ್ರಮಾದಿತ್ಯ*][2] ನೃಪಂ ||೧೨೪||

---

1 ಶಾ. ಮೂ. ಹು

2. [ವಿಕ್ರಮಾದಿತ್ಯ*] ಎಂಬೀ ಪದವನ್ನು ಮೂಲಪ್ರಕಟನೆಯ ಅಡಿಟಿಪ್ಪಣಿಯಲ್ಲಿ " Perhaps the syllables, ' Vikramāditya ' are omitted before the word ' nṛpam " ಎಂದಿರುವ ಮೇರೆಗೆ ಸೇರಿಸಿದೆ.

ಮ.ವಿ ॥ ಪರಮೋತ್ಸಾಹದಿನಿತ್ತನುತ್ತಮಸಿತಚ್ಛತ್ರಾಸ್ಪದಂ ಹೇಮಚಾ-
ಮರಯುಗ್ಮಂ ಗುಡಿ ವೀರಭೇರಿ ಶಿಖಿಪಿಂಛಚ್ಛತ್ರಮೆಂದಿಂತು ಗಂ-
ಗರ ಚಾಳುಕ್ಯರ ರಾಜ್ಯಚಿಹ್ನಚಯಮಂ ಶ್ರೀವಿಕ್ರಮಾದಿತ್ಯ ಭೂ-
ಧರನೆಂಬುನ್ನತಿ ಕೇಶಿರಾಜವಿಭುವಿಂಗಕ್ಕುಂ ಪೆಱಂಗಕ್ಕುವೇಂ ॥೧೬॥

## ವಿವಿಧ ದಾನಗಳು

ಉದಕಸ್ವರ್ಣ್ಣಚಯಾನ್ನದಾನಗುಣದಿಂ ಗೋದಾನದಿಂ ಭೂಮಿದಾ-
ನದಿನುತ್ಕನ್ಯಪ್ರಜದಾನದಿಂ ವಿವಿಧವಿದ್ಯಾದಾನದಿಂ ನಿತ್ಯದಾ-
ನದಿನುದ್ವೃತ್ತಿಳದಾನದಿಂ ನಿಖಿಳಕನ್ಯಾದಾನದಿಂ ತುಷ್ಟಿ ಮಾ-
ಡಿದನುತ್ಕೃಷ್ಟ[1]ಜನಕ್ಕೆ **ಕೇಶವ**ನಿದೇಂ ಸಚ್ಚಿತ್ತಸಂಪನ್ನನೋ ॥೧೭॥

## ೩೦

ಅಮ್ಮಿನಭಾವಿ, ಧಾರವಾಡ ತಾಲೂಕು, ಧಾರವಾಡ ಜಿಲ್ಲೆ

ಕ್ರಿ. ಶ. ೧೦೭೧-೭೨ ಚಾಳುಕ್ಯ ೬ನೆಯ ವಿಕ್ರಮಾದಿತ್ಯ (ಸೌ.ಇಂ. ಇ. ೧೧, ಪು. ೧೪೯)

### ಅಮ್ಮಯನಭಾವಿಯ ನಾಲ್ಜೂರ್ವರು

ಇಂದಿನ ಅಮ್ಮಿನಭಾವಿಯ ಹಿಂದಿನ ಹೆಸರು ಅಮ್ಮಯನಭಾವಿ. ಮೊದಲು ಅದು ಕುಂದೂರು ನಾಡಿನ ಹಣೆಯ ತಿಲಕದಂತಿದ್ದ ಅಗ್ರಹಾರವಾಗಿತ್ತು. ಕುಂದೂರು ಈಗ ಧಾರವಾಡ ತಾಲೂಕಿನಲ್ಲಿರುವ ನರೇಂದ್ರ ಎಂಬ ಊರು.

ಕಂ ॥ ಜಳನಿಧಿಪರಿವೃತಧರಣಿಗೆ
ಸಲೆ ಕುಂದೂರ್ನ್ನಾಡು ವದನದಂತಿಪ್ಪುದು ತ-
ಲ್ಲಲನೆಗೆ ಲಲಾಟತಿಳಕಂ-
ಬೋಲಿಪ್ಪಮ್ಮಯನಭಾವಿಯಲ್ಲಿಯ ವಿಪ್ರರ್ ॥೧೮॥

ವ॥ ಸ್ವಸ್ತಿ. ಯಮನಿಯಮಸ್ವಾಧ್ಯಾಯ ಧ್ಯಾನಧಾರಣಮೋನಾನುಷ್ಠಾನ-ಪರಾಯಣ ಜಪಸಮಾಧಿ ಶೀಳಸಂಪನ್ನರಪ್ಪ ಶ್ರೀಮದಗ್ರಹಾರವಮ್ಮಯನಭಾವಿಯೂ-ರೊಡೆಯ ಪ್ರಮುಖ ನಾಲ್ಜೂರ್ವ್ವರ್ಮ್ಮಹಾಜನದ ಸನ್ನಿಧಿಯೊಳು—

ಮ.ವಿ॥ ಅಜನೆನ್ನನ್ತೆ ಮತಪ್ರಯುಕ್ತರಿನನೆನ್ನನ್ತುಜ್ಜ್ವಳರ್ ಶಂಕರಾ-
ತ್ಮಜನೆನ್ನನ್ತಿರೆ ದಾನಿಗಳ್[2] ಧನದನೆನ್ನನ್ತರ್ತ್ಥಸಂಯುಕ್ತರಂ-

1. ಶಾ. ಮೂ.: ನುತುಕ್ರಿಷ್ಟ
2. ಶಂಕರನ ಮಗ ಗಣೇಶನಂತೆ ದಾನಿಗಳು.

ಗಜನೆನ್ನನ್ತೆ ಸುರೂಪಿಗಳ್ ಶಿವಪದಾಂಭೋಜಾತಷಟ್ಪಾದರೆಂ-
ದು ಜನಂ ಬಣ್ಣಿಸುಗುಂ ಗುಣಾಗ್ರಣಿಗಳಂ ಶ್ರೀಸಾ ..[ರ್ವ್ವ]ರಂ[1] ||೧೨೯||

## ೩೧

**ವಿಜಾಪುರ,** **ಕ್ರಿ. ಶ. ೧೦೭೫**

**ವಿಜಾಪುರ ತಾಲೂಕು,** **ಚಾಳುಕ್ಯ ೨ನೆಯ ಸೋಮೇಶ್ವರ**

ವಿಜಾಪುರ ಜಿಲ್ಲೆ (ಇಂಡಿ. ಆ್ಯಂ. ೧೦)

### ತ್ರ್ಯಂಬಕ

ಈ ತ್ರ್ಯಂಬಕನು ಸತ್ಯಸೌಜನ್ಯಗಳಿಂದ ಕೃತಯುಗದ ಸುಚರಿತ್ರನಾಗಿದ್ದು ದೋಷಾಕರವಾಗಿದ್ದ ಕಲಿಯುಗವನ್ನು ನಿರ್ಮಲಗೊಳಿಸಿದನೆಂದು ಹೊಗಳಲ್ಪಟ್ಟಿದ್ದಾನೆ.

ಮ.ಸ್ರ|| ತನುದೊಡ್ಡಿಂದಂ ಕಲಿಂಗಿಬ್ಬಿರುಳನವ್ಯತಥಾಮುಂ ಕರಸ್ತೋಮದಿಂದ-
ತ್ಯಮಳಂ ಮಾರ್ಪ್ಪಂತಿರೀಗಳ್ ಕೃತಯುಗಚರಿತಂ ತ್ರ್ಯಂಬಕಂ ಸತ್ಯಸೌಜ-
ನ್ಯಮಹಾಂಭೋರಾಶಿ ದೋಷಾಕರಕಲಿಯುಗಮಂ ನಿರ್ಮ್ಮಲಂ ಮಾಡಿದಂ ಧಾ-
ತ್ರಿ ಮನಂಗೊಳ್ವಂತು ಗಂಗಾಸಲಿಲಶುಚಿಯಶೋರಾಶಿಪೀಯೂಷದಿಂದಂ ||

ಮ ವಿ|| ಅರಿದಪ್ಪೀ ಕಲಿಕಾಲದೊಂದು ಬಿಸುಪಿಂದಂ ನೋಡ ಸೌಜನ್ಯವ-
ಲ್ಲರಿ ಮುಂಪಿಂಬಣ ಬಾಡಿ ಮಾಡಳಿಯಲೆಂದಿಬ್ಬೀಗಳೀಗಳ್ ನಯಂ-
ಬೊರೆದೆತ್ತಂ ತಳಿರ್ವ್ವಾಗಿ ಚೈತ್ರಲತೆವೋಲ್ ಚೆಲ್ವಾಗೆ ತಾಳ್ದಿತ್ತು ಚಿ-
ತ್ತರಮಂ ತ್ರ್ಯಂಬಕಸದ್ಗುಣಾಮೃತಪಯಃಸಂಸೇಕದಿಂ ಲೋಕದೊಳ್ ||೧೩೦||

## ೩೨

**ಏವೂರು,** **ಕ್ರಿ. ಶ. ೧೦೭೭**

**ಸುರಪುರ ತಾಲೂಕು,** **ಚಾಳುಕ್ಯ ೬ನೆಯ ವಿಕ್ರಮಾದಿತ್ಯ**

ಕಲಬುರ್ಗಿ ಜಿಲ್ಲೆ (ಎಪಿ. ಇಂ. ಸಂ. ೧೨, ಪು. ೨೭೮)

ಆಹವಮಲ್ಲ, ಭುವನೈಕಮಲ್ಲ (ಸೋಮೇಶ್ವರ) ಮತ್ತು ವಿಕ್ರಮಾಂಕ ಈ ಮೂವರು ಚಾಳುಕ್ಯ ಚಕ್ರವರ್ತಿಗಳಿಗೂ ಕೈಗನ್ನಡಿಯಾಗಿದ್ದ ರವಿಗಜಮೂಪತಿಯ ವಿವಿಧಮುಖ ಯೋಗ್ಯತೆಯನ್ನು ಈ ಶಾಸನದಲ್ಲಿ ತಿಳಿಸಿದೆ. ಈತನು ಅನೇಕ ಲಿಪಿಗಳನ್ನು ಬಲ್ಲವ, ಅನುಪಮ ವಾದನಪಟು, ಕವಿತ್ವ, ಪಾಣ್ಡಿತ್ಯ, ತತ್ವಜ್ಞಾನಗಳಲ್ಲಿ ಬಲ್ಲಿದನಾಗಿದ್ದನು. ವಿಶೇಷವಾಗಿ ಈತನ ಬಾಜಿಪ ಓಜೆ ಕೇಳುವವರಿಗೆ ಒದವಿಸುವ ಕರ್ಣಾನಂದವನ್ನು ಬಣ್ಣಿಸಲು ಒಂದು ಪದ್ಯವೇ ಮೀಸಲಾಗಿದೆ.[2]

---

1 ನಷ್ಟಾಕ್ಷರಗಳನ್ನು ಹೀಗೆ ತುಂಬಿಕೊಳ್ಳಬಹುದು: 'ಶ್ರೀಸ್ವಾಮಿನಾಲ್ವರ್ವ್ವರಂ'

2 ಹೂವಿನಹಡಗಲಿ ಶಾಸನದಲ್ಲಿಯೂ (ಸಂ. ೪೬) ಈತನ ಪರಿಚಯ ಬಂದಿದೆ.

## ವಿಷ್ಣುವರಾಹಸ್ತುತಿ

ಕಂ || ಆವನ ತುದಿಕೋಡೊಳ್ಸಕ-
ಳಾವನಿ ಕೇದಗೆಯ ಮುಗುಳ ತುದಿಗೆಱಗಿದ ಭೃಂ-
ಗೀವವುವನಿಳಿಸಿ ಸೊಗಯಿಕು-
ಮಾವಿಷ್ಣುವರಾಹಮೂರ್ತ್ತಿ ದಯೆಗೆಯ್ಗೊಳ್ಪಂ ||೧೩೨||

ಉ.ಮಾ|| ವಾರಿಜಪೀತವಕ್ಷವಲಯಂ ಮಣಿಕುಣ್ಡಳಮುಚ್ಚರತ್ತ್ರವೇ-
ದೀರವಮೆಂಬಿವೊಪ್ಪೆ ಜಘನಸ್ಥಳದೊಳ್ ಕರದೊಳ್ ಕಪೋಳದೊಳ್
ಸ್ಮೇರಮುಖಾಬ್ಜದೊಳ್ ತನಗೊಡಂಬಡೆ ತಜ್ಜಲಜಾಕ್ಷನಾಭಿನೀ-
ರೇರುಹಗರ್ಬ್ಭದಿಂದಮೊಗೆದೊಂ ವಿಜಿತಾರ್ಕ್ಕಮಹಂ ಪಿತಾಮಹಂ ||೧೩೩||

## ಮುಕ್ಕುನ್ದಗ್ರಾಮ

ಇದೊಂದು ಅಗ್ರಹಾರವಾಗಿತ್ತು. ಎಡೆದೊಱೆ ಎಂಬ ನಾಡಿಗೆ ಸೇರಿತ್ತು.

ಕಂ || ಪೊಡವಿಗದೆ ತಾನೆ ಮುಖಮೆನಿ-
**ಪೆಡೆದೊಱೆನಾಡಿಂ**ಗೆ ತಿಳಕಪನ್ನದಿನೊಪ್ಪಂ-
ಬಡೆದಿಕ್ಕ್ಯಮೆಸೆವ **ಕಿಱುದೊಱೆ**
ದಡಿಯೊಳ್ **ಮುಕ್ಕುನ್ದೆ**ಯೆಂಬ ವಿಪ್ರಗ್ರಾಮಂ ||೧೩೪||

ಮ. ವಿ.|| ಅದು ತಾಂ ದಕ್ಷಿಣದೇಶದೊಳ್ ನೆಲಸಿಯುಂ ಲೋಕೋತ್ತರಂ ನನ್ದನಾ-
ಸ್ಪದಮಾಗಿರ್ದ್ದುಮಸತ್ಕುಜಾತತತಿ ನಾನಾನೀತಿವಿಖ್ಯಾತ ಸಂ-
ಪದಮಾಗಿರ್ದ್ದುಮನೀತಿಸಂಗತಿ ವಿನೀತಾನೇಕಲೋಕಂಗಳಿಂ
ಪುದಿದಿರ್ದ್ದಂ ಪರಿಭಾವಿಪಾಗಳವಿನೀತಾಧಾನ ಶೋಭಾವಹಂ ||೧೩೫||

## ವಾದನಕಲಾಚತುರ ರವಿಗ ಚಮೂಪತಿ

ಮ. ವಿ || ವನಜಾಕ್ಷಂ ತನಗಿಷ್ಟದೈ[ವ*]ಮಧಿಪಂ ತ್ರೈಲೋಕ್ಯಮಲ್ಲಂ ಜಗ-
ಜ್ಜನವಂದ್ಯಂ ಪಿತೃ **ಕೊಪ್ಪಣಂ**[1] ಜನನಿ ಷಂಪಾದೇವಿ[2] ತಮ್ಮಂ ಮಹೀ-
ವಿನುತಂ ಶ್ರೀವರಸತ್ಯದಾತ್ತಚರಿತಂ ಶ್ರೀನಾಚಿ ತನ್ನಗ್ರನ-
ನ್ದನನೆನ್ದನ್ದೆ ಕೃತಾರ್ತ್ಥನಲ್ತೆ **ರವಿಗಂ** ಭೂಳೋಕಕಲ್ಪದ್ರುಮಂ ||೧೩೬||

---

1 ಕೊಪ್ಪಣ ಎಂಬುದು ರವಿಗನ ತಂದೆಯ ಹೆಸರು.

2. ಈ ಶಾಸನದಲ್ಲಿ ‘ಷಂಪಾದೇವಿ’ ಎಂದಿರುವುದಕ್ಕೆ ಅದರ ಸಂಪಾದಕರು ‘ಪಂಪಾದೇವಿ’ ಇರಬೇಕೆಂದು ತಿದ್ದುಪಡೆ ಸೂಚಿಸಿದ್ದಾರೆ. ಆದರೆ ‘ಪ’ ತಪ್ಪಿ ‘ಷ’ ಆಗಿದೆಯೋ ‘ಚ’ ತಪ್ಪಿ ‘ಷ’ ಆಗಿದೆಯೋ ಎಂಬ ಅನುಮಾನದಿಂದ ಶಾಸನದ ಮೂಲವನ್ನು ಇದ್ದಂತೆ ಇಲ್ಲಿ ಇಟ್ಟುಕೊಂಡಿದೆ.

ಕವಿತಾಕಲ್ಪಲತಾಪ್ರರ್ವಣಕ್ಕೆ ಸುರಭೂಜಂ ಶಬ್ದವಿದ್ಯಾಪಯೋ-
ಬ್ಧಿವಿಳಾಸಕ್ಕಮೃತಾಂಶು ತರ್ಕ್ಕವಿಮಳವ್ಯೋಮಪ್ರಕಾಶಕ್ಕೆ ಭಾ-
ನು ವಿಶುದ್ಧಾಗಮತತ್ತ್ವಕೇಳಿಸದನೋದ್ದ್ಯೋತಕ್ಕೆ ರತ್ನಪ್ರದೀ-
ಪವೆನಿಪ್ಪಂ ಕುಳದೀಪಕಂ ರವಿಚಮೂಪಂ ಬನ್ಧುಕಲ್ಪದ್ರುಮಂ ||೩೭||

ಅನುಮಾನಕ್ಕೆಡೆಯಿಲ್ಲ ಬಾಜಿಪೊಡೆ ರೇಖಾಶುದ್ಧಿ ಬೇಱೊನ್ದೆ ಭಿ-
ತ್ತಿ ನಯಂಬೆತ್ತೆಸೆದಪ್ಪುವೀ ನಿಮಿಟ್ದು ಚಂಚನ್ಮಾತ್ರೆಗಳ್ ಪದ್ಮಗ-
ರ್ಭನುಮೇಂ ಬಲ್ಲನೆ ಪೇಳಿಮಿನ್ನು ಬರೆಯಲ್ಕೆಂಬನ್ನೆಗಂ ತಾನೆ ನೆ-
ಟ್ಟನೆ ಬಲ್ಲಂ ಬರೆಯಲ್ಕನೇಕಲಿಪಿಯಂ ಶ್ರೀವಿಪ್ರವಿದ್ಯಾಧರಂ ||೩೮||

ಅತಿಶಕ್ವರೀವೃತ್ತಂ||[1]

ಇದು ನವಮಧುಧಾರಾಸಾರಮೋ ಮೇಣ್ಸುಧಾಂಭೋ-
ನದಿಯೊ ಕವಿವುದೆಂಬೊನ್ದನ್ದದಿಂ ನುಣ್ಪಿನಿಂಪಂ
ಪುದಿದು ರವಿಚಮೂಪಂ ಬಾಜಿಪೊನ್ದೋಜೆ[2] ಪೇಳೇ-
ನೊದವಿಸುಗುಮೊ ಕರ್ಣ್ಣಾನನ್ದಮಂ ಧಾತ್ರಿಗೆಲ್ಲಂ ||೩೯||

ಕಂ|| ಆ ವಿಭುವಾಹವಮಲ್ಲಮ-
ಹೀವಲ್ಲಭನಲ್ಲಿ ಪಡೆದನುರುತರನಿಜವಿ-
ದ್ಯಾವಿಭವದಿಂದ ಮೆಚ್ಚಿಸಿ
ಭೂವಿನುತಂ ಲಾಳಸನ್ಧಿವಿಗ್ರಹಪದಮಂ ||೪೦||

ಅಧಿಕಾರಂಗಳ ಮೇಲೊಸೆ-
ದಧಿಕಾರಮನಾ ನೃಪೇಶ್ವರಂ ಕುಡೆ ಪಡೆದಂ
ಬುಧನಿಧಿ ನಿಜಾನ್ವಯಾಂಬರ-
ವಿಧು ಬಾನ್ಧವಪದ್ಮಿನೀಪಯೋಧರಮಿತ್ರಂ ||೪೧||

ಮ. ಸ|| ಪಿರಿದುಂ ಕಾರುಣ್ಯದಿಂದಾ ನರಪತಿ ತನಗೊಲ್ದೀಯೆ ಮುಕ್ಕುನ್ದೆಗಂಗಾ-
ಪುರಮೇಹೂರೆಂಬ ಮಿಕ್ಕಗ್ರಳನೆ ಪಡೆದು ಸದ್ಭಕ್ತಿಯಿಂದಂ ತದೀಯೋ-
ರ್ವ್ವರೆಯಂ ಕಾಲ್ಗರ್ಚ್ಚಿ ಕೊಟ್ಟಂ ದಿನಪಶಶಧರರ್ನ್ನಿಲ್ವಿನಂ ಸರ್ವ್ವಬಾಧಾ-
ಪರಿಹಾರಂ ಮಾಡಿ ವಿಪ್ರಾವಳಿಗೆ ನಿಜಕುಳವ್ಯೋಮತಾರಾಧಿನಾಥಂ ||೪೨||

ಕಂ|| ಸೇನಾಧಿಪತ್ಯದೊಡನೆ ಮ-
ಹೀನಾಥಂ ಹೇರಸನ್ಧಿವಿಗ್ರಹಪದಮಂ

---

1. 'ಅತಿಶಕ್ವರೀವೃತ್ತ'ವೆಂದು ಶಾಸನದಲ್ಲಿ ಹೇಳಲಾದ ಈ ಅಕ್ಷರವೃತ್ತದ ಬಳಕೆ ಕನ್ನಡ ಸಾಹಿತ್ಯದಲ್ಲಿ ಬಹುವಿರಳವಾಗಿದೆ.

2 ಶಾ. ಮೂ.: ಬಾಜಿಪಾನ್ದೋಜೆ

ಶ್ರೀನಿಲಯಂ **ಸೋಮೇಶ್ವರ-**
ಭೂನಾಥಂ ಕೊರ್ತ್ತು ರಾಗದಿಂ ಕುಡೆ ಪಡೆದಂ ||೧೪೩||

ಆ **ವಿಕ್ರಮಾಂಕನೃಪ**ಸಖಿ-
ಳಾವನಿಪತಿ ಸಕಳರಾಜ್ಯಚಿಹ್ನಂಗಳನೊ-
ಲ್ದಾವಗಮಿತ್ತಂ ತನಗೆಸ-
ಲೇವಣ್ಣಿಪೆನಿಂ ತದೀಯ ಮಹಿಮೋನ್ನತಿಯಂ ||೧೪೪||

ಇನ್ತೆನೆ ಮೂಱುಂ ರಾಜ್ಯದೊ-
ಳನ್ತಾನೆ ಚಳುಕ್ಯನೃಪರ್ಗ್ಗೆ ಕಯ್ಗನ್ನಡಿಯಾ-
ದನ್ತನ್ನ ಗುಣದಿನಾವನು-
ಮಿನ್ತೆನಿಸಿದನೊಳನೆ ವಿಪ್ರವಂಶಪ್ರಭವಂ ||೧೪೫||

## ಲಕ್ಷ್ಮಿ ಹೆಚ್ಚಿಹೆಚ್ಚಿದಂತೆ ಒಳ್ಗುಣ ಹೆಚ್ಚಿತು

ಚಂ|| ಮಹಿಗೆನಿತಾನುಮಂ ಪರುಸವೇದಿಯು ಬೆಟ್ಟುಗಳಂ ಸುರಾಪನೀ-
ರುಹದ ಬನಂಗಳಂ ಪರಿವ ಸಿದ್ಧರಸಂಗಳ ಬಲ್ಪೊನಂಗಳಂ[1]
ಬಹುವಿಧಯತ್ನದಿಂದೆ ಬಿದಿ ಮಾಡಿದನಲ್ಲದೆ ಲಾಳಸನ್ನಿವಿ-
ಗ್ರಹಿ **ರವಿದೇವ**ನೊರ್ವ್ವನನೆ ಮಾಡಿದನೇ ಸಕಳೋಪಕಾರಿಯಂ ||೧೪೬||

ಕಂ|| ಅಮುಟ್ಟಿಂ[2] ಚನ್ದನಮುಂ ಚಂ-
ದ್ರಮುಯೂಖಮುನೊನ್ದು ಮಾಡಿ ಮಾಡಿದನವನಂ
ಕಮಲಭವನಲ್ಲದಂದೇಂ
ಸಮಸ್ತಹಿತಹೇತುಭೂತನಕ್ಕುಮೆ ಪೇಳಿಂ ||೧೪೭||

ಮ ವಿ || ಮನವೊಲ್ದನ್ದದಿನಣ್ಣ ಬಣ್ಣಿಸಲದಾರ್ಗ್ಗಂ ಸಾಲದೇ ಬಾಪ್ಪುಶಿ-
ಷ್ಟನಿಧಾನಂ ರವಿದೇವನಿಟ್ಟಿ ಭುವನಂ ಲಕ್ಷ್ಮೀಶನಿಟ್ಟಂಬುರಾ-
ಶಿ ನಿಳಿಂಪದ್ರುಮಮಿಟ್ಟಿ ನನ್ದನವನಂ ತಾರೇಶನಿಟ್ಟಂಬರಂ
ವನಜಾತಪ್ರಿಯನಿಟ್ಟಿ ಪೂರ್ವಕುಧರಂ ದೇವೇನ್ದ್ರನಿಟ್ಟಾಸ್ಪದಂ[1] ||೧೪೮||

ಚಂ|| ಇದು ಕಲಿಕಾಲದನ್ದಮುಣಮುಲ್ಲದು ಧರ್ಮ್ಮದ ಬಳ್ಳಿ ಕೂಡೆ ಪ-
ರ್ವ್ವಿದುದು ಖತಾಂಕುರಂ ಬಳೆದು ಪಲ್ಲವಿಸಿತ್ತು ಪರೋಪಕಾರ ಸ-

1 ಬಹುಶಃ 'ಬಲ್ಪೊನಲ್ಗಳಂ' (ದೊಡ್ಡ ಪ್ರವಾಹಗಳನ್ನು) ಎಂದಿರಬೇಕಾಗಿತ್ತೇನೋ.

2 ಅಮರ್ದಂ ಎಂಬುದನ್ನು ಅಮುಟ್ಟಿಂ ಎಂದು ಬರೆಯಲಾಗಿದೆ. ಅಲ್ಲದೆ ಪದ್ಯಗಳಲರಲ್ಲಿ ಇರ್ದ ಎಂಬಲ್ಲೆಲ್ಲ ಇಟ್ಟಿ ಎಂದೇ ಬರೆದುದನ್ನು ಅವಶ್ಯವಾಗಿ ಗಮನಿಸಬೇಕು.

ಸ್ಯದ ತೆನೆ ಕಾಣಲಾದಪುದು ದಾನಘನಂ ಕಱಿದಪ್ಪುದಣ್ಣ ನೋ-
ಡಿದು ರವಿದೇವನೆಂಬ ಪುರುಷೋತ್ತಮನಿಟ್ಟ ಧರಿತ್ರಿಯಾಗದೇ[1] ||೧೪೯||

ಮ.ವಿ.|| ಅದು ಲೋಕೋತ್ತರವೊಪ್ಪದೇ ಪೊಗಳಲಾರ್ಗ್ಗಂ ಬಾಪ್ಪಹಂಕಾರಮಿ-
ಲ್ಲದ ನಿತ್ಯೋನ್ನತಿ ಮಿಥ್ಯೆಯಿಲ್ಲದಱಿವನ್ಯಸ್ತ್ರೀರತಾಸಕ್ತಿಯಿ-
ಲ್ಲದ ಶೌಚವ್ರತ[2]ಮೂನವಿಲ್ಲದೆಸಕಂ ಪೊಳ್ಳಿಲ್ಲದಾಪ್ಪಾರ್ಗ್ಗವಂ-
ಜದ ವಿದ್ಯಾಮಹಿಮೋದಯಂ ಭುವನದೊಳ್ ಶ್ರೀವಿಪ್ರಮಾಣಿಕ್ಯನ[3] ||

ಇದು ನೋಡಚ್ಚರಿ ನೋಡೆ ನೋಡೆ ಶಶಿಯಿಂದತ್ತತ್ತ ತಾರಾಸಮೂ-
ಹದಿನತ್ತತ್ತ ಕುಳಾದ್ರಿಸಂಕುಳದಿನತ್ತತ್ತರ್ಣ್ಣವಾನೀಕತೀ-
ರದಿನತ್ತತ್ತ ದಿಶಾಗಜೋತ್ಕರದಿನತ್ತತ್ತಬ್ಜಗರ್ಭಾಂಡಖಂ-
ಡದಿನತ್ತತ್ತ ಪೊದಳ್ದನಿಟ್ಟಪ್ಪುದು ಜಸಂ ಶ್ರೀವಿಪ್ರಮಾಣಿಕ್ಯನ[3] ||೧೫೧||

ಕಂ|| ಎನಿತೆನಿತೆ ಲಕ್ಷ್ಮಿ ಪೆರ್ಚ್ಚುಗು-
ಮನಿತನಿತೊಳ್ಗುಣಮೆ ಕೆಡುಗುಮುಳಿದೊರ್ಗ್ಗನ್ತ-
ಲ್ತೆನಿತೆನಿತು ಲಕ್ಷ್ಮಿ ಪೆರ್ಚ್ಚುಗು-
ಮನಿತನಿತೊಳ್ಗುಣಮನಲ್ತೆ ರವಿಗಂ ತಳೆದಂ ||೧೫೨||

## ಏಹೂರ ಸ್ವಯಂಭುದೇವರು

ತಾಂ ಪಡೆ**ದೇಹೂರೊ**ಳ್ ಲೋ-
ಕಂ ಪೊಗೞ್ವಿನೆಗಂ ಸ್ವಯಂಭುದೇವಾಲಯಮಂ
ಸಂಪನ್ನಿಧಿ ಮಾಡಿಸಿದಂ
ಸಂಪೂರ್ಣ್ಣಮನೋರಥಂ ಮಹೋತ್ಸವದಿನ್ದಂ || ೫೩||

ವ|| ಅದೆನ್ತೆನೆ

ವ ವಿ.|| ಎಸೆವೆನ್ನುನ್ನತಿ ನಿನ್ನದುಂಟೆ ಪುದಿದೆನ್ನೀ ಸೌಧಶುಂಭತ್ಪ್ರಭಾ-
ಪ್ರಸರಶ್ರೀ ನಿನಗುಂಟೆ ಚೆಲ್ವು ನಿನಗೆನ್ನನ್ತುಂಟೆ ಪೇಳೆನ್ದು ರೋ-
ಡಿಸಿ ರೌಪ್ಯಾಚಳಕೂಟಮಂ ಸ್ವಜಠರವ್ಯಾನದ್ಧಘಂಟಾಮುಖ-
ಪ್ರಸರಧ್ವಾನದಿನಾಗಡುಂ[4] ನಗುವವೋಲಿರ್ಕ್ಕುಂ ತದೀಶಾಲಯಂ ||೧೫೪||

ವ|| **ತತ್ಸ್ವಯಂಭುದೇವ**ಪ್ರಭಾವ ಮೇದೊರೆತೆನೆ

1. ಶಾ. ಮೂ.: ಧರಿತ್ರಿಯಾಗಡೇ
2. ಶಾ. ಮೂ.: ಶೌಚಪ್ರತ
3. ಶಾ. ಮೂ.: ಮಾಣಿಕ್ಯನಂ
4. ಆಗಡುಂ : ಆಗಳುಂ : ಯಾವಾಗಲೂ

ಕಂ|| ಅಹಿ ಕೊಂಟಡೆ ತೇಳ್ತಿನ್ದಡೆ
ದಹನಂ ಪತ್ತಿದಡೆ ಬನ್ದು ತತ್ಕ್ಷಣದೊಳ್ ತ-
ದ್ಗೃಹವಂ ಬಲಗೊಳೆ ತದ್ವಿಷ-
ರಹಿತತೆ ಮನುಜರ್ಗ್ಗೆ ನಿಮಿಷಮಾತ್ರದಿನಕ್ಕುಂ[1] ||೧೫೫||

ಜರಿತಂಗೆ ನೇತ್ರರೋಗಿಗೆ
ಶಿರೋವ್ಯಥಾರ್ತ್ತಂಗೆ ಕರ್ಣ್ಣಶೂಳಿಗೆ ನೀರೋ-
ದರಿಗೆ ರುಜಾಹರಣಂ ತ-
ಚ್ಚರಣಯುಗಸ್ಮರಣಮಾತ್ರದಿಂ ದೊರೆಕೊಳ್ಗುಂ ||೧೫೬||

ಚಂ|| ಇದು ರಜತಾದ್ರಿ ಹೇಮಶಿಖರಪ್ರತಿಪತ್ತಿಯನೀಶನೀಯೆ ಪೆ-
ತ್ತುದು ಹರಹಾಸಕಲ್ಪತರು ಕೆಂದಳಿರಿನ್ದೆ ಸೆವಗ್ರಭಾಗದೊ-
ಳ್ಪುದಿದುದುಮಾಧಿನಾಥಸಿತಗಾತ್ರಸಪಿಂಗಸುತುಂಗ ಜೂಟದೊ-
ನ್ದೊದವೆನಿಪ[2] ಸ್ವಯಂಭು ಶಿವಗೇಹದ ಪೊಂಗಳಸಂ ಸಮಂಗಳಂ ||೧೫೭||

**ರವಿಯಣಭಟ್ಟ ಸೈನ್ಯಪತಿ**ಗಂ ತದಪತ್ಯಸಮಾಖ್ಯ **ನಾಚಿ** ಮು-
ಖ್ಯವರಜಪುತ್ರಪೌತ್ರಪಶುಬಾನ್ಧವಮಿತ್ರಜನಾದಿಗಂ ಶುಭೋ-
ದ್ಭವಮುಮುದಾತ್ತಸಂಪದಮುಮೂರ್ಜ್ಜಿತವೃತ್ತಿಯುಮುತ್ತರೋತ್ತರೋ-
ತ್ಸವಮುಮಭಿಷ್ಟುತಾಭ್ಯುದಯಮುಂ ಸಮನಿಕ್ಕವರ್ಗ್ಗಕ್ಕೆ ಮಂಗಳಂ ||೧೫೮||

**ಪೆರ್ಗಡೆ ನಾಗವರ್ಮ**

ಕಂ|| ರವಿಯಣಭಟ್ಟ ಚಮೂಪತಿ
ಶಿವಗೃಹಮಂ ಮಾಡಿಸೆನ್ದು ಬೆಸಸೆ ನಿಜೇಶಂ
ಸವಿನಯದಿಂ ಪೆರ್ಗ್ಗಡೆ **ನಾ-
ಗವರ್ಮ್ಮ**ನೇಹೂರೊಳಚಳಭಕ್ತಿಸಮೇತಂ ||೧೫೯||

ಉ. ಮಾ.|| ಮಾಡಿಸಿದೊಂ ಸ್ವಯಂಭು ಶಿವಮಂದಿರಮಂ ನಿಯತವ್ರತಂಗಳೊ-
ಳ್ಕೂಡಿ ಸಕೂಟಕೋಟಿ ಶಿವತೀರ್ತ್ಥಮನರ್ತ್ಥಿಯಿನೇಕಭುಕ್ತದಿಂ
ಮಾಡಿಸಿದೊಂ ಸುಶಾಳಿವನ ಪುಷ್ಪ[3]ವನಾಂಬ್ರವನೇಕ್ಷುವಾಟಮಂ
ಮಾಡಿಸಿದೊಂ ಶಿವಾರ್ತ್ಥದಿನೆನಲ್ದೊರೆಯಾರ್ಗ್ಗಳ ನಾಗವರ್ಮ್ಮನೊಳ್ ||

---

1. ವಿಷವನ್ನು ಪರಿಹರಿಸುವ ಮಹಿಮೆಯುಳ್ಳುದೆಂದು ವಾಹಿನಿಯಿದ್ದ ದೇವರು ಕರ್ನಾ-ಟಕದಲ್ಲಿ ಕೆಲವೆಡೆಗಳಲ್ಲಿದ್ದಂತೆ ತಿಳಿದುಬರುತ್ತದೆ. ಉದಾ: ಧಾರವಾಡ ಜಿಲ್ಲೆಯ ಹಿರೇಕೆರೂರ ತಾಲೂಕಿನ ಬಾಳಂಬೀಡದಲ್ಲಿ; ಆ ದೇವರಿಗೆ 'ವಿಷಪರಿಹಾರೇಶ್ವರ' ಎಂಬ ಹೆಸರೇ ಇದೆ.

2. ಶಾ. ಮೂ.: ನ್ದೊಡವೆನಿಪ 3 ಶಾ. ಮೂ. ಪುಷ್ಪ

## ೩೩

**ಮುತ್ತಿಗೆ,** **ಕ್ರಿ. ಶ. ೧೦೭೯ ಮತ್ತು ೧೧೧೦**

**ಬಾಗೇವಾಡಿ ತಾಲೂಕು,** **ಚಾಳುಕ್ಯ ೬ನೆಯ ವಿಕ್ರಮಾದಿತ್ಯ**

ವಿಜಾಪುರ ಜಿಲ್ಲೆ (ಎಪಿ. ಇಂ. ೧೫, ಪು. ೨೭)

ಸತ್ಯಾಶ್ರಯದೇವನು ವಿಕ್ರಮಾಂಕನ ಉಪನಯನದಲ್ಲಿ ರಾಜಗುರು ವಿಷ್ಣುಭಟ್ಟನಿಗೆ ದಕ್ಷಿಣೆಯಾಗಿ ಕೊಟ್ಟ ಮುತ್ತಗೆಯನ್ನು ಆತನು ಮುನ್ನೂರ್ವ್ವರ ವಸತಿಯ ಅಗ್ರಹಾರವನ್ನಾಗಿ ಮಾಡಿದನು. ಆತನ ಪೀಳಿಗೆಯಲ್ಲಿ ಮುಂದಿನವರು ಶಸ್ತ್ರಶಾಸ್ತ್ರಪರಿಣತರಾದ ಚಮೂಪತಿಗಳಾದರು. ವಿಷ್ಣುಭಟ್ಟನಿಂದ ಮೂರನೆಯವನಾದ ಗೋವಿಂದರಾಜನು ಶ್ರೀರಾಮಚಂದ್ರನು ಸ್ಥಾಪಿಸಿದ ಮೂಲ 'ರಾಮೇಶ್ವರನ'ಗೆ ಸರಿದೊರೆಯಾದ 'ರಾಮೇಶ್ವರ'ನನ್ನು ಮುತ್ತಗೆಯಲ್ಲಿ ಸ್ಥಾಪಿಸಿದನು. ಮತ್ತು ಬೆಳೆದು ನಿಂತ ೩೦ ಮತ್ತರು ಭೂಮಿಯನ್ನು ಆ ದೇವರ ಅರ್ಚನಾದಿಗಳಿಗೆ ದಾನವಿತ್ತನು.

**ರಾಜಗುರು ವಿಷ್ಣುಭಟ್ಟ**

ಕಂ॥ ಆ ನೃಪರ ಪರಮಗುರುವಭಿ-
ಮಾನಧನನಧೀತವೇದವೇದಾಂಗಂ ವಿ-
ದ್ಯಾನಿಧಿ ವಿಪ್ರಕುಳಾಂಬರ-
ಭಾನುವನುಷ್ಠಾತೃ **ವಿಷ್ಣುಭಟ್ಟಂ** ಪೆಸರಿಂ ॥೧೬೧॥

ಆ ವಿಷ್ಣುಭಟ್ಟ ವಿಭುಗೆ ಮ-
ಹಾವಿಭವಂ **ವಿಕ್ರಮಾಂಕನುಪನಯನ**ದೊಳು-
ರ್ವ್ವೀವಿನುತಂ ಸತ್ಯಾಶ್ರಯ-
ದೇವಂ **ಮುತ್ತರ್ಗೆ**ಯನೊಸೆದು ದಕ್ಷಿಣೆಗೊಟ್ಟ ॥೧೬೨॥

ವ॥ ಅಂತು ಸಕಳ ದಿಗ್ವರ್ತ್ತಿತಕೀರ್ತ್ತಿ ಚಾಳುಕ್ಯ ಚಕ್ರವರ್ತ್ತಿ ಸಮಸ್ತ ಭುವನಾಶ್ರಯಂ ಸತ್ಯಾಶ್ರಯದೇವಂ ತರ್ದ್ದವಾಡಿ ಸಾಸಿರದ ಬಳಿಯ ಮೂವತ್ತಱ ಮೊದಲ ಬಾಡಂ ಮುತ್ತಗೆಯುಂ ಶಾಂಬ್ರಶಾಸನಸಿತಾತಪತ್ರಚಾಮರಾದಿ ವಿವಿಧ ರಾಜ್ಯಚಿಹ್ನ ಸಹಿತಂ **ತ್ರಿಭೋಗಾಭ್ಯಂತರಸಿದ್ಧಿ**ಯಿಂ ಸರ್ಬ್ಬನಮಸ್ಯಮಾಗೆ ಕುಡೆ ಪಡೆದು,

ಕಂ॥ ಜ್ಞಾನಮಯಂ ವಿದ್ಯಾನಿಧಿ
ತಾನೆನಿಸಿದ ವಿಷ್ಣುಭಟ್ಟ ವಿಭು ಮಾಡಿದ ಧಾ-
ತ್ರೀನುತಮೆನಿಸಿದ ಮುತ್ತರ್ಗೆ
ಮೂನೂರ್ಬ್ಬರ ಭರಣಮಗ್ರಹಾರಂ ಸಾರ ॥೧೬೩॥

ತಾನೆ ಚತುರ್ದ್ದಶವಿದ್ಯಾ-
ಸ್ಥಾನಂ ಚಾಳುಕ್ಯಚಕ್ರವರ್ತ್ತಿಗೆ ಮಾನ್ಯ-

ಸ್ಥಾನಮೆನಲ್ ಪೆಱರಿಂ[1] ಬರ-
ಲೇನಾರ್ಪ್ಪರೆ **ವಿಷ್ಣುಭಟ್ಟ**ನೊರೆಗಂ ದೊರೆಗಂ ||೧೬೪||

## ಶಸ್ತ್ರಶಾಸ್ತ್ರಪರಿಣತ ಗೋವಿಂದ ಚಮೂಪತಿ

ಎನೆ ನೆಗಟ್ದಿ ವಿಷ್ಣುಭಟ್ಟನ
ತನೂಭವಂ ಶಸ್ತ್ರಶಾಸ್ತ್ರಪರಿಣತನುರ್ವ್ವೀ-
ಜನವಿನುತಗುಣಂ ಗೋವಿಂ-
ದನಿಭಂ **ಗೋವಿಂದ**ನಖಿಳ ವಿಬುಧಾನಂದ ||೧೬೫||

ಗೋವಿಂದ ಚಮೂಪತಿ ವಿ-
ದ್ಯಾವಾರ್ಧ್ಧಿ ಚಳುಕ್ಯಚಕ್ರವರ್ತ್ತಿಯೊಳೆಣೆಯೆಂ-
ಬೀ ವಿಭವಮನಾರ್ಜ್ಜಿಸಿದನ-
ದೇವಣ್ಣಿಪುದಿಂ ತದೀಯಮಹಿಮೋನ್ನತಿಯು ||೧೬೬||

## ಗೋವಿಂದ ದಂಡನಾಥ

ಈತನು ಗೋವಿಂದ ಚಮೂಪತಿಯ ಮೊಮ್ಮಗ, ವಿಷ್ಣು ಚಮೂಪನ ಮಗ. ಇವನು ರಾಮೇಶ್ವರ ದೇವಾಲಯಕ್ಕೆ ಬೆಳೆದುನಿಂತ ಹೊಲವನ್ನು ದಾನಕೊಟ್ಟನು.

ರಿಪುಸರ್ಪ್ಪಗರುಡನಹಿತ-
ದ್ವಿಪಕೇಸರಿ ಸುಭಟಜನನುತಂ ವೀರಶ್ರೀ-
ಲಪನಾಬ್ಜದ್ಯುಮಣಿ ಪರಂ-
ತಪನಸದೃಶನಸಮಸಾಹಸಂ **ಗೋವಿಂದ** ||೧೬೭||

ಭಾವಿಪೊಡೆಣೆ ಸೇತುವಿನೊಳು
ರಾವಣರಿಪು ನಿಲಿಸೆ ನಿಂದ ರಾಮೇಶ್ವರಮುಂ
ಪಾವನಮೆನೆ ಮುತ್ತ್ತಗೆಯೊ-
ಳ್ಗೋವಿಂದಂ ನಿಲಿಸೆ ನಿಂದ ರಾಮೇಶ್ವರಮು ||೧೬೮||

ವ|| ಅಂತು ತನ್ನಿಂದಮತಿಪ್ರವೃದ್ಧಮುಂ ಪ್ರಸಿದ್ಧಮುಮಾದ ರಾಮೇಶ್ವರ ದೇವರಂಗಭೋಗಕ್ಕಂ ತಪೋಧನರ ವಿದ್ಯಾರ್ತ್ಥಿಚ್ಛಾತ್ರರಶನಾಚ್ಛಾದನಕ್ಕಂ ದೇಗುಲದ ಮಠದ ಖಂಡಸ್ಫುಟಿತನವಕರ್ಮ್ಮಕ್ಕಮೆಂದು,

ಗೋವಿಂದದಣ್ಡನಾಥನಿ-
ಳಾವಿನುತಂ ತನ್ನ ಸರ್ವ್ವಮಾನ್ಯದೊಳಿತ್ತಂ
ಮೂವತ್ತು ಮತ್ತರಂ ಧಾ-
ನ್ಯಾವಳಿಯಂ ಬೆಳದು ರಯ್ಯಮೆನಿಸಿದ ಕೆಯ್ಯ ||೧೬೯||

---

1. ಪೆಱರ್ + ಇಂ (ಇನ್ನು).

ವ॥ ಮಹಾಜನಕ್ಕೆ ಪಾದಪೂಜೆಯಂ ಕೊಟ್ಟು ಕೊಂಡಾ ಭೂಮಿಯಂ ಮುತ್ತರ್ಗೆ ಮೂವತ್ತುಮನಾಟ್ಟರಸುಗೆಯ್ಯುತ್ತಿಟ್ಟ ಮಂಡಳಿಕಯಮದಂಡಂಮಹಾಮಂಡಳೇಶ್ವರಂ **ಶ್ರೀವರ್ದ್ಧಮಾನಪುರ**ವರಾಧೀಶ್ವರನೆನಿಸಿದ ವಿಕ್ರಮಾದಿತ್ಯದೇವಂಗಮಾತನರಸಿ ಚಾಳುಕ್ಯಚಕ್ರವರ್ತ್ತಿಯ ಮಗಂ ಯುವರಾಜ ಮಲ್ಲಿಕಾರ್ಜ್ಜುನದೇವನ ಮಗಳು ಶ್ರೀಮಹಾದೇವಿಗಂ ಬಿನ್ನಪಂ ಗೆಯ್ಯಲವರಿರ್ಬ್ಬರುಂ ಶ್ರೀಮತ್ತ್ರಿಭುವನಮಲ್ಲದೇವರ್ಗ್ಗೆ ಬಿನ್ನಪಂಗೆಯ್ದು ಸರ್ವ್ವನಮಸ್ಯಂ ಮಾಡಿ ಕುಡೆ ಪಡೆದು,

ಕಂ॥ ಭೂವಿನುತಂ ನಿಜಸತಿ ಶೋ-
ಭಾವತಿ ಪುಣ್ಯವತಿ ಪುತ್ರವತಿ ಗುಣವತಿಯೆಂ-
ದೀವಸುಧೆ ಪೊಗಳ್ವ ಕೋಮಲ-
ದೇವಿಯೊಳೊಂದಾಗಿ[1] ಧರ್ಮ್ಮತತ್ಪರಚಿತ್ತ ॥೧೭೦॥

**ಶಾಸನಕಾರನ ಪ್ರಾರ್ಥನೆ**

ಇರಿಸುವುದು ಪರಮನೈಷ್ಠಿಕ
ವರಮುನಿಯಂ ಪ್ರಭುಮಹಾಜನಂಗಳ್ ಕಾಂತಾ-
ಪರನಾದನನೀಸ್ಥಾನದೊ-
ಳಿರಲೀಯದೆ ಕಳೆವುದಿನಿತು ನಾಂ ಪ್ರಾರ್ತ್ಥಿಸಿದೆ ॥೧೭೧॥

## ೩೪

## ನೀಲಗುಂದ, ಕ್ರಿ. ಶ. ೧೦೭೯

**ಹರಪನಹಳ್ಳಿ ತಾಲೂಕು, ಚಾಳುಕ್ಯ ೬ನೆಯ ವಿಕ್ರಮಾದಿತ್ಯ**

ಬಳ್ಳಾರಿ ಜಿಲ್ಲೆ (ಸೌ. ಇಂ. ಇ. ೯ ಭಾಗ ೧, ಪು. ೧೨೪)

ಈ ಶಾಸನದಲ್ಲಿ ದೊರೆತ ಎರಡು ತ್ರಿಪದಿಗಳನ್ನು ಇಲ್ಲಿ ಎತ್ತಿಕೊಟ್ಟಿದೆ. ಇವು ಕೋಗಳಿ ನಾಡನ್ನು ಮತ್ತು ನೀರ್ಗುಂದ (ನೀಲಗುಂದ) ಅಗ್ರಹಾರವನ್ನು ಬಣ್ಣಿಸುತ್ತವೆ. ಈಚೆಗೆ ಸಂಗ್ರಹಿಸಿ ಪ್ರಕಟಿಸಲಾದ 'ಜಾನಪದ ತ್ರಿಪದಿ'ಗಳಲ್ಲಿಯ ಊರು-ನಾಡುಗಳ ವರ್ಣನಾರೀತಿಗೂ ಇಲ್ಲಿಯ ರೀತಿಗೂ ವ್ಯತ್ಯಾಸವಿಲ್ಲ. ಆದರೆ ಈ ಭಾಷೆ ಮಾತ್ರ ಗ್ರಂಥಸ್ಥವೆಂದೆನಿಸುತ್ತದೆ. ತ್ರಿಪದಿಚ್ಛಂದವನ್ನು ಈ ಶಾಸನ ಕವಿ ತನ್ನ ರಚನೆಗೆ ಬಳಸಿಕೊಂಡಿದ್ದಾನೆ.

---

1. ದಾನ-ಧರ್ಮಗಳನ್ನು ಪುರುಷ ಒಬ್ಬನೇ ಮಾಡಲಾಗದು. ತನ್ನ ಅರ್ಧಾಂಗಿಯೂ ಸಹಧರ್ಮಿಣಿಯೂ ಎನಿಸಿದ ಹೆಂಡತಿಯ ಸಮ್ಮತಿಯಿಂದ, ಆಕೆಯೊಡಗೂಡಿ ಮಾಡಬೇಕು. ಇದು ನಮ್ಮ ಶಾಸ್ತ್ರದಲ್ಲಿ ಹೇಳಿದ ನಿಯಮ.

## ನಾಡುಗಳರಸ ಕೋಗಳಿನಾಡು

ತ್ರಿಪದಿ॥ ನಾಡುಗಳೊಳಗೆಲ್ಲ। ಗಾಡಿವೆತ್ತಸಮುದ।
ನಾಡುಗಳರಸನತಿ ಚೆಲ್ವ ಕೋಗಳಿ।
ನಾಡು ನೋಡಲ್ಕೆ ಸೊಗಯಿಕ್ಕುಂ ॥೧೭೨॥

ಆ ನಾಡೊಳೆಸೆವುದು। ನಾನಾ ವಿದ್ವಜ್ಜನ-।
ಸ್ಥಾನಂ ನೀಗುರ್ಗುಂದವೆನಿಪಗ್ರಹಾರವ-।
ತ್ಯಾನಂದಕಾರಿ ಜಗಕೆಲ್ಲಂ ॥೧೭೩॥

### ೩೫

**ಲಕ್ಷ್ಮೇಶ್ವರ,**
**ಶಿರಹಟ್ಟಿ ತಾಲೂಕು,**
ಧಾರವಾಡ ಜಿಲ್ಲೆ

**ಕ್ರಿ. ಶ. ೧೦೮೧**
**ಚಾಳುಕ್ಯ ಆರನೆಯ ವಿಕ್ರಮಾದಿತ್ಯ**
(ಎಪಿ. ಇಂ. ೧೬, ಪು. ೫೯)

## ವಿಕ್ರಮಾದಿತ್ಯನ ಶೌರ್ಯ

ಚಕ್ರವರ್ತಿ ವಿಕ್ರಮಾದಿತ್ಯನು ನಾಡನ್ನು ಚಿರಕಾಲ ನಿಷ್ಕಂಟಕ ಮಾಡಿದನೆಂಬುವನ್ನು ಎಷ್ಟು ಚೆನ್ನಾಗಿ ಬಿಂಬಿಸುತ್ತಿದೆ ಈ ಪದ್ಯ! ಇವನು ದುರ್ವಿನೀತರಾದ ರಾಜರ ಬೇರನ್ನು ಕಿತ್ತಿ ಅದನ್ನು (ಹಾಗೆಯೇ ಒಗೆದರೆ ಈ ಮುಳ್ಳುಕಂಟಿ ಮತ್ತೆ ಚಿಗಿತುಕೊಂಡೀತೆಂದು) ನೀರಲ್ಲಿ ಗಲಗಲ ಅರೆದು ಚೆಲ್ಲಿದನೆಂದು ಕವಿ ಹೇಳುತ್ತಾನೆ.

ಮ ಸ್ರ॥ ಧರೆಯುಂ ವಾರಾಶಿಪರ್ಯನ್ತಮನವಯವದಿಂ ದುರ್ವ್ವಿನೀತಾವನೀಪಾ-
ಳರ ಬೇರಂ ಕಿತ್ತು ನೀರೊಳ್ಗಲಗಲನಲೆದೀಡಾಡಿ ಮುನ್ನಿನ್ನು ಚಕ್ರೇ-
ಶ್ವರರಾರ್ ನಿಷ್ಕಂಟಕಂ ಮಾಡಿದರೆನೆ ಮಹಿ ನಿಷ್ಕಂಟಕಂ ಮಾಡಿ ಚಕ್ರೇ-
ಶ್ವರರತ್ನಂ ಸನ್ತತಂ ಪಾಳಿಸಿದನತಿಬಳಂ **ವಿಕ್ರಮಾದಿತ್ಯದೇವಂ** ॥೧೭೪॥

## ನಯಸೇನಸೂರಿಯ ಕೀರ್ತಿ

'ತನ್ನ ಪತಿಯಾದ ನಯಸೇನನು ಸರಸ್ವತಿಯನ್ನು ವರಿಸಿ ಪ್ರೀತಿಯಿಂದ ಹೊಂದಿಕೊಂಡಿದ್ದಾನೆ. ಛೀ! ಸವತಿಯೊಡನೆ ಇರುವುದು ಕಷ್ಟ, ಅವಳೇ ಇದ್ದುಕೊಳ್ಳಲಿ,' ಎಂದು ಆತನ ಮಡದಿ 'ಕೀರ್ತಿ' ದಿಗ್ದಿಗಂತಗಳಲ್ಲಿ ಆತನನ್ನು ದೂರುತ್ತಿದ್ದಾಳೆ.

ಚಂ॥ ಸರಸತಿಯುಂ ಮನೋಮುದದೆ ತಾಳ್ದಿದನೆನ್ನನವಜ್ಞೆಗೆಯ್ದನಾ-
ನಿರೆನವಳಿರ್ಕ್ಕೆ ಚೀ ಸವತಿಯೊಳ್ಪುದುವಾಳ್ವುದು ಕಷ್ಟಮೆನ್ದು ನಿ-

ಷ್ಕರವಚನಂಗಳಂ ನುಡಿದು ದಿಕ್ಕರಿಯುಂ ಪರಿದೇಱೆ ಕೀರ್ತ್ತಿ ತಾಂ
ಪುರುಡಿಸಿ ದೂಱೆಪಳ್ವರತಪೋನಿಧಿಯುಂ **ನಯಸೇನ ಸೂರಿ**ಯುಂ[1] ||೧೭೫||

## ೩೬

**ಅಳಂದ,** **ಕ್ರಿ. ವ. ೧೦೮೨**

**ಅಳಂದ ತಾಲೂಕು,** **ಚಾಳುಕ್ಯ ೬ನೆಯ ವಿಕ್ರಮಾದಿತ್ಯ**

ಕಲಬುರ್ಗಿ ಜಿಲ್ಲೆ

ಅಳಂದೆಯ ಎರಡು ವ್ಯಕ್ತಿಗಳ ಹಿರಿಮೆಯನ್ನು ಇದರಲ್ಲಿ ಎತ್ತಿ ತೋರಿಸಿದೆ. ಒಬ್ಬನು ವಿಕ್ರಮಾದಿತ್ಯನ ರಾಷ್ಟ್ರವನ್ನೇ ತನ್ನಾಜ್ಞೆಯಿಂದ ಅತ್ಯಂತ ಧಾರ್ಮಿಕವನ್ನಾಗಿ ಮಾಡಿದ ಧರ್ಮಾಧಿಕಾರಿ; ಇನ್ನೊಬ್ಬನು ಪರಹಿತಕಾರ್ಯದ ರೂಢಿಯನ್ನು ಹೆಚ್ಚಿಸಿದ ಆಡಳಿತದ ಅಧಿಕಾರಿ.

### ಸುರೇಶ್ವರ ಮುನಿ

ಕಂ|| ಶ್ರೀಮದಲನ್ದೆ ಪವಿತ್ರಂ
ಸೋಮೇಶ್ವರ ದೇವರಿ**ನ್ದಲನ್ದಾ ಪುರ**ದಿಂ-
ದೀಮಹಿ ಪವಿತ್ರಮೆನಿತುಂ[2]
ತಾಮೆ ಪವಿತ್ರಂ ಸುರೇಶ್ವರಬ್ರತಿಯಿಂದಂ ||೧೭೬||

ಕೃತಯುಗಮಾದುದು ಕಲಿಯುಗ-
ಮತಿಧಾರ್ಮ್ಮಿಕಮಾಯ್ತು ವಿಕ್ರಮಾದಿತ್ಯನೃಪಂ
ಪ್ರತಿಪಾಲಿಪ ರಾಷ್ಟ್ರಂ ಮುನಿ-
ಪತಿಯಾಜ್ಞೆಯೊಳೇಂ **ಸುರೇಶ್ವರಂ** ಕೇವಳಮೋ ||೧೭೭||

### ಪರಾರ್ಥವಿದ್ಯಾಧರೇಂದ್ರ ನಾಡಹೆಗ್ಗಡೆ

ಧರೆಯೆಲ್ಲಂ ಸಲೆ ಪೊಗಳಲ್
ಪರಹಿತ.... [3] ರೂಡಿಯುಂ ಪೆರ್ಚ್ಚಿಸಿ ನಾ-
ಚರಸನಿಳಾವಿನುತಂ ತಾಂ
**ಪರಾರ್ತ್ಥವಿದ್ಯಾಧರೇನ್ದ್ರ** ಪೆಸರಂ ಪಡೆದಂ ||೧೭೮||

1. ಕ್ರಿ. ವ. ೧೦೫೭ನೆಯ ಮುಳಗುಂದದ ಶಾಸನದಲ್ಲಿ ಉಕ್ತನಾದ, ವ್ಯಾಕರಣಶಾಸ್ತ್ರವಿದ ನಯಸೇನ ಪಂಡಿತನು ಈತನೇ ಆಗಿರಬಹುದು.

2. ಪವಿತ್ರಮಿನಿತುಂ (ಇವೆಲ್ಲವೂ ಪವಿತ್ರಂ) ಎಂದಿರಬೇಕಾಗಿತ್ತೆಂದು ತೋರುತ್ತದೆ.

3 ಮಂ ಗೆಯ್ವ ಎಂಬಕ್ಷರಗಳು ನಷ್ಟವಾದಂತೆ ತೋರುವುದು.

ಮನದೊಳ್ ಬಯಸಿದುದೆಲ್ಲಂ
ತನಗಿದಿರೊಳೆ ಸಾಧ್ಯಮ....[1] ಗೊ-
ಳ್ಪನೆ ಬಗೆವ ಪುಣ್ಯಮೂರ್ತಿಗೆ
ಕನಸಿನುಳಂ ಕಿಡಿಪೆನೆನ್ದವಂ ತಾಂ ಕಿಡುಗುಂ ||೧೭೯||

## ೩೭

## ನಾಗಾವಿ

ಕಲಬುರ್ಗಿ ಜಿಲ್ಲೆ

(ಅ) ಕ್ರಿ. ವ. ೧೦೬೮
ಚಾಳುಕ್ಯ ಆಹವಮಲ್ಲ
(ಆ) ಕ್ರಿ. ವ. ೧೦೮೫
ಚಾಳುಕ್ಯ ೬ನೆಯ ವಿಕ್ರಮಾದಿತ್ಯ
(ಹೈ. ಆ. ಸಿರೀಜ್ ೮, ಪು. ೩೦ ಮತ್ತು ೩೩)

ಇಲ್ಲಿ ಒಂದೇ ಕಲ್ಲೊಳಗೆ ಬೇರೆ ಬೇರೆ ಕಾಲದ ಎರಡು ಸಂಗತಿಗಳನ್ನು ಕೆತ್ತಿದೆ. ಇವು ನಾಗಾವಿಯಲ್ಲಿದ್ದ ವಿದ್ಯಾಸಂಸ್ಥೆಯ ವ್ಯಾಪ್ತಿಯನ್ನು ತಿಳಿಸುವುದಕ್ಕೆ ಶಾಸನ ನಂ. ೨೭ಕ್ಕೆ ಪೂರಕವಾಗಿವೆ.

### ಅ

ಈ ಗದ್ಯದಲ್ಲಿಯ ಸಂಸ್ಕೃತಸಮಸ್ತಪದಗಳ ಗಂಭೀರಶೈಲಿಯನ್ನು ನೋಡಬಹುದು.

### ಮಹಾಮಾಣಿಕ ಮಧುಸೂದನ ದೇವಾಲಯ

ವ||–ರಾಮೇಶ್ವರಾಲಯಮುಮಂ ರಾಮತೀರ್ತ್ಥಮುಮನದಭ್ರಾಭ್ರಲಗ್ನ-ವಿಭ್ರಾಜಿತೋತ್ತುಂಗಸೌವರ್ಣ್ಣಕಳಸವಿಳಸಿತಮುಮನೇಕಕೂಟಕೋಟಿವಿಶಾಳಸಾಳ-ಭಂಜಿಕಾರಂಜಿತಮುಂ **ನಾಟ್ಯಶಾಳಾಳಂಕೃತಮುಂ** ಶುಂಭಚ್ಛಾಕುಂಭ ವೈನ-ತೇಯಸ್ತಂಭಮುಮುಮರರಾಜರಾಜದ್ವಿಮಾನಾನುಕಾರಿಯಪ್ಪ ಮೂಱು ನೆಲೆಯ ಬಾಗಿಲ್ವಾಡಮು**ಮೇಕದಣ್ಡಿ–ತ್ರಿದಣ್ಡಿ–ಸ್ನಾತಕ....ಬ್ರಹ್ಮಚಾರಿ–ಹಂಸ-ಪರಮಹಂಸಾನುಷ್ಠಾನಭವನ**ಮುಂ ಋಗ್ಯಜುಸ್ಸಾಮಾಥರ್ವ್ವಣಾಭಿಧಾನಾದ್ಯನೇಕಶಾಖಾಸಹಸ್ರವೇದವೇದಾಂಗಪಠನಮಠವಿರಾಜಿತಮುಮುತ್ತುಂಗತೋರಣಪ್ರಾಸಾದ ಸಮ-ನ್ವಿತಮುಮಪ್ಪಾತ್ಮೀಯ ನಾಮೋದ್ದಾಮ ಸೋಮಮಣ್ಡಳಾಖಣ್ಡಳ ಶುಣ್ಡಾಳ ಡಿಣ್ಡೀರಖಣ್ಡಪಾಣ್ಡುರಪ್ರತಿಮಮಪ್ಪೀ ಮಹಾಮಾಣಿಕ ಶ್ರೀಮಧುಸೂದನ ದೇವಾ-ಯತನಮಂ ತತ್ಪುರಮಧ್ಯದೊಳ್ಮಾಡಿಸಿ[2]—

1. ಇಲ್ಲಿಯ ನಷ್ಟಾಕ್ಷರಗಳನ್ನು '[ಪ್ಪ] ಸಕಲರಿ' ಎಂದಿದ್ದಿರಬಹುದು.

2. ಕ್ರಿ. ವ. ೧೦೫೮ ರಲ್ಲಿಯೇ ಮಧುಸೂದನಾಲಯ, ರಾಮೇಶ್ವರಾಲಯ, ರಾಮತೀರ್ಥ ಇವುಗಳ ನಿರ್ಮಾಣವಾಯಿತೆಂದು ಶಾಸನ ನಂ. ೨೭ ರಲ್ಲಿ ಉಲ್ಲೇಖವಿದೆ.

ಆ

ಇಲ್ಲಿ ಆಯ್ದುಕೊಂಡ ಗದ್ಯಭಾಗದಿಂದ ಮಧುಸೂದನ ದೇವಾಲಯದಲ್ಲಿ ನಡೆಯುತ್ತಿದ್ದ ಧಾರ್ಮಿಕ ಸಾಂಸ್ಕೃತಿಕ ಚಟುವಟಿಕೆಗಳ ವಿವರ ವೇದ್ಯವಾಗುತ್ತದೆ.

## ಲೋಕರಸ

ಇವನು ಮಾಹಿಷ್ಮತೀಪುರವರಾಧೀಶ್ವರಂ, ಶ್ರೀಮನ್ಮಹಾಮಂಡಲೇಶ್ವರಂ ಎಂದು ಉಕ್ತನಾಗಿದ್ದಾನೆ.

ಕಂ|| ಶ್ರೀಮದ**ಹಿಹಯ**ಕುಳಾಂಬರ-
ಸೋಮಂ ಸಂಗ್ರಾಮರಾಮನುದ್ಧತಭೀಮಂ
ಭೀಮಭುಜಂ ಜಯಲಕ್ಷ್ಮೀ-
ಧಾಮಂ ವಿನಮಿತಸಮಸ್ತಲೋಕಂ **ಲೋಕಂ** ||೧೮೦||
ಅವನವನತಭೂಭುವನಂ
ಭವಭವ ವಿಕ್ರಮನತುಳ್ಯಸಾಹಸನಮೃತಾ-
ರ್ಣ್ಣವತಾರಹಾರಹರಹಾ-
ಸವಿಶುದ್ಧಸ್ಫಟಿಕಕೀರ್ತ್ತಿ ಕೀರ್ತ್ತಿವಿಳಾಸಂ ||೧೮೧||

ವ||—ಅಱಿಲು[1] ಮೂನೂಱು ಮಿಱಿತಿಮೂನೂಱುಮಂ **ಬೀಳಾನುವೃತ್ತಿ**ಯಿಂ ರಾಜ್ಯಂಗೆಯ್ಯುತ್ತುಮಿರಲಾತನ ಕಯ್ಯೊಳಂ ಧಾರಾಪೂರ್ವ್ವಕಮಾಗೆ ಪಡೆದು, ತಮ್ಮ **ದಶವನ್ಧ**ದ ಗುಡ್ಡೆ ಮಾನ್ಯದಲ್ ಬಿಟ್ಟ ದಯಿಕಾಲ ಮತ್ತರು ಮೂನೂಱಿಪ್ಪತ್ತಂಕದೊಳಂ ಮತ್ತರು ೩೨೦, ಗಟ್ದಿ[2] ಮತ್ತರು ೪, ದೇವರ ಪೂಜೆಗೆ ಭೀವಗೊಂಡಿಂ ಬಡಗಣ ಪೂಮೋಣ್ಟಂ ಮತ್ತರು ೩, ಆ ಪ್ರತಿಬದ್ಧದ ಮನೆನಿವೇಶನ ೩, ಅನ್ತೆರಡುಂ ಪಯ್ರ್ಯಾಯದ ಮೂಱುಂ ಸ್ಥಳದ ನೆಲಂ ಕಾಲ ಮತ್ತರು ಸಾಸಿರದನಾಲ್ವತ್ತಯ್ದಂಕದೊಳಂ ಕಾಲ ಮತ್ತರು ೧೦೪೫. ನೀರ್ನ್ನೆಲಂ ಗಟ್ದಿ ಮತ್ತರು ೫[೦], ತೋಂಟಂ ಮತ್ತರು ೨, ಮನೆಯ ನಿವೇಶನ ೮ ಗೆ, ಬಿಯ ಹಡಿಂಗಲುವೊಲದಲು ಜನ್ನಯಭಟ್ಟೋಪಾಧ್ಯಾಯರ್ಗ್ಗೆ ಕಾಲಮತ್ತರು ೫೦, ಬ್ರಹ್ಮಪುರಿ ದೋಣಯಭಟ್ಟರ್ಗ್ಗೆ ಮತ್ತರು[3] ೩೦, ದೇಚಿಯ ಷಣಂಗಿಯರ್ಗ್ಗೆ ಮತ್ತರು ೨೦, ದೇವರ....ಯುಂ ಸಂಜೆಮಠದಲುಂ ಪುರಾಣಂ ಬಾಡಿಸುವ ಪುರಾಣಭಟ್ಟರ್ಗ್ಗೆ ಮತ್ತರು ೪೦, ಜೀರ್ಣ್ಣೋದ್ಧಾರದ ಬೆಸಕ್ಕೆ ಕೊಳ್ಚನುಣ್ಡು ಮಾಡುವ ಕಲುಕುಟಿಗೆವೋಜುಗಳು ನಾಲ್ವರ್ಗ್ಗಂ ಮತ್ತರು ೫೦, ಮದುವಣ ಪಿರಿಯ ಕಮ್ಮಟದಲು ನಾರಣಯ್ಯ ನಾಯಕರ್ಗ್ಗೆ ಮತ್ತರು ೬೦, ದೇವರ ಘಟಿಗೆಯ ಮಾಣಿಗಳು ನಾಲ್ವರ್ಗ್ಗಂ ಮತ್ತರು ೫೦,

---

1. ಅಱಲು ?
2. ಗಟ್ದಿ ?
3. ಶಾ. ಮೂ. ಮತ್ತ. ಈ ಶಾಸನದಲ್ಲಿ ೨–೩ ಕಡೆ ಅಲ್ಲದೆ, ಬೇರೆ ಹಲವು ಶಾಸನಗಳಲ್ಲಿ ಮತ್ತ ಎಂದು ಕಂಡರಿಸಿದುದುಂಟು.

ಕಂಗಣಿಗೆಯ ಗುಡ್ಡೆಮಾನ್ಯದೊಳಗೆ ಗುಣ್ಡಿಯ ಷಣಂಗಿಗೆ ಮತ್ತರು ೧೫, ದೇವಣ ವಾಸುದೇವರು ಶಿಷ್ಯರ್ಗ್ಗಂದು ಪಡೆದು ದೊಡೆಯ ಷಣಂಗಿಗೆ ಕೊಟ್ಟ ಮತ್ತರು ೧೫, ರು[ಪ] ಷಣಂಗಿಗೆ ಮತ್ತರು ೧೫, ಅನ್ತು ಶಾಸನದ ನಡೆವ ಮತ್ತರು ೩೪೫. ಗುಣ-ಶಾಸನದಿಂ ಬ್ರಹ್ಮಚರ್ಯ್ಯನಕ್ತಭೋಜನಮಧಶ್ಶಯನದಿಂ ದೇವರಂ ಪೂಜಿಸುವ ದೇಹಾರಿಗಳಿರ್ವ್ವರ್ಗ್ಗಂ ಮತ್ತರು ೪೮, ನಿವೇದ್ಯಮನಡುವ ಬಾಣಸಿಗೆಗೆ ಮತ್ತರು ೯, ಕಾಪಿನ ಘಟಿಯರುರು ಮೂವರ್ಗ್ಗಂ ಮತ್ತರು ೪೫, ತ್ರಿಕಾಲಭೋಗಂ ಮಾಡುವ ಪಾಳವಿಗಳಿರ್ವ್ವರು ಮದ್ದಳಿಕಾಱರು ನಾಲ್ವರ್ಗ್ಗಂ ಮತ್ತರು ೮೦, ಹಾಡುವ ಸಮು-ದಾಯರೆರಡರ್ಕ್ಕಂ ಮತ್ತರು ೬೦, ಪಾತ್ರವೆರಡರ್ಕಂ ಮತ್ತರು ೪೦, ಕಂಭದ ಸೂಳೆ-ಯರ್ನ್ನಾಲ್ವರ್ಗ್ಗಂ ಮತ್ತರು ೩೬, ಸುನ್ನವೆಸದವಂಗೆ ಹಳಿಂಗಲುವೊಲದಲು ಮತ್ತರು ೧೨ ಅಂತು ಗುಣಶಾಸನದ ಕಾಲ ಮತ್ತರು ೩೩೦—

ಶ್ರೀಮತ್ಕಲುಕುಟಿಗ **ನಾಗೋಜಂ ಕಣ್ಡರಣವಿದ್ಯಾಧಿರಾಜಂ ನಾರ-ಣಯ್ಯ ನಾಯಕ** ಶ್ರೀಪಾದಪದ್ಮೋಪಜೀವಿತಭ್ರಮರಂ.... **ಕಳಾಸೂತ್ರಧಾರಂ.**

## ೩೮

**ಕುರ್ತಕೋಟಿ,**
**ಗದುಗು ತಾಲೂಕು,**
ಧಾರವಾಡ ಜಿಲ್ಲೆ

**ಕ್ರಿ. ವ. ೧೧೮೭**
**ಚಾಳುಕ್ಯ ೬ನೆಯ ವಿಕ್ರಮಾದಿತ್ಯ**
(ಸೌ. ಇ. ಇನ್ಸ್. ೧೧, ಪು. ೧೫೪)

### ನಾಪಿತ ದಾಸ ಮತ್ತು ಆತನ ಪೂರ್ವಜರು

ನಾಪಿತ ದಾಸನು ' ದೇವಾಧಿದೇವನ ' ಗುಡಿಯನ್ನು ಕಟ್ಟಿಸಿದನೆಂದು ಈ ಶಾಸನ ಹೇಳು-ತ್ತದೆ. ಕುರ್ತಕೋಟಿಯ ವಿರೂಪಾಕ್ಷ ದೇವಾಲಯದ ಗೋಡೆಯಲ್ಲಿ ಈ ಶಾಸನಶಿಲೆ ಕಟ್ಟಿರುವುದ-ರಿಂದ ಬಹುಶಃ ದಾಸನು ಕಟ್ಟಿಸಿದ ಗುಡಿ ಇದೇ ಇರಬಹುದು. ಈತನು ಇನ್ನೂರ್ವರು ಮಹಾಜನ-ಗಳಿಗೆ ಸೇವಾಕಾರ್ಯದಲ್ಲಿ ' ವೇಸಣ ಹನುಮಂತ ' ಎಂದೆನಿಸಿದ್ದನು. ಒಬ್ಬ ಸಾಮಾನ್ಯ ತರಗತಿಯ ಮನುಷ್ಯನನ್ನು ಮತ್ತು ಆತನ ಪೂರ್ವಜರನ್ನು ಬಣ್ಣಿಸಿರುವ ಈ ಶಾಸನವು ಆಗಿನವರ ಗುಣಗ್ರಾಹ-ಕತೆಗೆ ಸಾಕ್ಷಿಯಾಗಿದೆ.

### ಪೂರ್ವಜರು

ಕಂ॥ ಅಂತಾಯಿನ್ನೂರ್ವ್ವರ್ಗ್ಗಂ
ಸಂತತಮತಿಭಕ್ತಿಯಿಂದೆ **ನಾವಿದ ಭೋರಂ**
ಮಾಂತನದಾಗರಮೆನಿಪದ-
ಗುಂತಿಗೆ ನೆಲೆಯಾದನಂತು ಪಿರಿಯರುಮೊಳರೆ ॥೧೮೭॥

ಆತನ ತನಯಂ[1] ಭುವನ-
ಖ್ಯಾತಂ ಜಾತಂ[2] ವಿನೂತ ವಿನಯಾನ್ವಿತನೆಂ-
ದಾತನನಭಿವರ್ಣ್ಣಿಸುವುದು
ಭೂತಳಮುವನನ್ತು ಜಸಕೆ ನೋನ್ತರುಮೊಳರೆ ||೮೩||

ವ|| ತದನುಜ,

ಶಿವಪಾದಾಂಬುಜಭೃಂಗಂ
ಭುವನಜನಸುತ್ಯನೆನಿಪ **ನಾವಿದ ಶಾನ್ತಂ**-
ಗವನಿತಳಂ ಬಣ್ಣಿಸುತಿರ-
ಲವಂಗೆ ಸವಿಳಾಸಿ ದಾಸನುದಯಂ ಗೆಯ್ದ ||೧೮೪||

**ದಾಸ**

ದೇವದ್ವಿಜಗುರುಭಕ್ತಂ
ಬೂವಿಶ್ರುತಕೀರ್ತ್ತಿಯೆನಿಪ ನಾವಿದ **ದಾಸಂ**
ದೇವಾಧಿದೇವಭವನಮ-
ನೀವಸುಧೆಗೆ ತಿಳಕಮಾಗಿರಲ್ಮಾಡಿಸಿದ ||೧೮೫||

ಆ ಸಾಗರಮಂ ದಾಂಟಿ[3] ಮ-
ಹೀಸುತೆಯಂ ಕಣ್ಡು ಲಂಕೆಯಂ ಸುಟ್ಟ ಮಹಾ-
ನಾಸಿಗನೆನಲಿನ್ನೂರ್ವ್ವರ
**ಪೇಸಣ ಹನುಮಂತ**ನೆನಿಪ ನಾವಿದ ದಾಸ ||೧೮೬||

ಆತನ ಮಾಡಿದ ಧರ್ಮ್ಮ-
ಕ್ಕಾತತಯಶರೆನಿಸಿ ನೆಗರ್ದ್ದ **ಮೋರಿಯ ವಂಶರ್**
ಪ್ರೀತಿಯೊಳೆ ಕೂರ್ತ್ತು ಕೊಟ್ಟರ್
ಖ್ಯಾತಚ್ಚಂದ್ರಾರ್ಕ್ಕತಾರಮಾದರದಿಂದ ||೧೮೭||

---

1 ಈತನ ಹೆಸರು ಹೇಳಲಾಗಿಲ್ಲ. 2. ಶಾ. ಮೂ. : ಜಾತ.
3. ಶಾ. ಮೂ. ದಾಂಡಿ

## ೩೯

**ಮುನಿರಾಬಾದು, ಕೊಪ್ಪಳ ತಾಲೂಕು,** ರಾಯಚೂರು ಜಿಲ್ಲೆ

**ಕ್ರಿ. ಶ. ೧೦೮೮ ಚಾಳುಕ್ಯ ೬ನೆಯ ವಿಕ್ರಮಾದಿತ್ಯ** (ಹೈ. ಆ. ಸಿರೀಜ್ ೫, ಪು. ೬)

### ಚೌವೇದಿ ಭಟ್ಟ

ಈ ಚತುರ್ವೇದಿ ಭಟ್ಟನು ಅದ್ಭುತ ಯೋಗ್ಯತೆಯವನೆಂದು ಕಂಡು ಚಾಳುಕ್ಯ ತ್ರೈಲೋಕ್ಯ ಮಲ್ಲನು ಹುಲಿಗೆಯನ್ನು ಇವನಿಗೆ ದತ್ತಿಯಾಗಿ ಕೊಟ್ಟನು. ಬಳಿಕ ಈತನು ತುಂಗಭದ್ರಾ ನದಿಗೆ-ಕಾಲುವೆಯನ್ನು ಮಾಡಿಸಿ ಕೃಷಿಕರನ್ನು ತಣಿಸಿದನು. ನಿಜಾಮರ ಆಳಿಕೆಯಲ್ಲಿ ಹುಲಿಗೆಯು ಮುನಿರಾಬಾದ್ ಎಂದು ನಾಮಾಂತರ ಹೊಂದಿದೆ. ಆದರೂ 'ಹುಲಿಗೆ' ಎಂಬ ಹೆಸರು ಜನರ ಬಾಯಲ್ಲಿ ಇನ್ನೂ ಇದ್ದೇ ಇದೆ.

ಮ. ಸ್ರ॥ ಧರೆಗತ್ಯಾಶ್ಚರ್ಯ್ಯಮೀ ಯೋಗ್ಯತೆ ತಳೆಸಲವಂ ಕಣ್ಡು ಚಾಳುಕ್ಯಚಕ್ರೇ-
ಶ್ವರನಾಚಂದ್ರಾರ್ಕ್ಕತಾರಂ [ಫಳ]ಮೆನೆ[1] ಸಕಾರುಣ್ಯದಿಂ **ಪುಲ್ಗೆ[2]ಯೆಂಬೀ-**
**ಪುರ**ಮಂ ತ್ರೈಳೋಕ್ಯಮಲ್ಲಂ ಕುಡೆ ಪಡೆದನವಷ್ಟಂಭದಿಂ ಹಾರನೀಹಾ-
ರರುಚಿಬ್ಯಾಭಾಸಿ ಕೀರ್ತ್ತಿದ್ಯುತಿಧವಲಿತದಿಕ್ಕುಂಜ **ಚೌವೇದಿಭಟ್ಟಂ** ॥

ಭರದಿಂದೀ **ತುಂಗಭದ್ರಾನದಿ**ಯ ತಟವುನಾರಯ್ದು ಮಿಂಬಾಗಿರಲ್ ವಾ-
ರಿಜನಾಳಂ ನೀಟ್ಟಿ ನೂಲ್ಗೊಳ್ವವೊಲವಯವದಿಂ ತನ್ದನೀ ಕಾಲು ರಮ್ಯಂ
ಬಗೆಯಲ್ ವಿಸ್ತಾರಮಾಗಲ್ ರವಿಶಶಿಧರೆನಕ್ಷತ್ರಮಾಮೇರು ನಿಲ್ಪ-
ನ್ನೆಗ ನೋಡಾರಪ್ಪುಬೃಂದಂ ಒಸೆದು ತಣಿಯುಲುಂ ತಂದ ಚೌವೇದಿಭಟ್ಟ ॥

### ಸಾಕ್ಷರೀಕಶುಕ ಚೂತಾರಾಮ ಸೋಮೇಶ್ವರಭಟ್ಟ

ಇವನು ಚೌವೇದಿಭಟ್ಟನ ವಂಶಜ. ವಿದ್ವಾಂಸರಿಗೆ ಆಶ್ರಯನಾಗಿದ್ದ ಈತನ ಈ ಸ್ತುತಿ ಪದ್ಯದಲ್ಲಿ, ಲೋಭಿಯ ವಿಡಂಬನದ ಚಿತ್ರ ಚೆನ್ನಾಗಿ ಚಿತ್ರಿತವಾಗಿದೆ.

ಮ. ವಿ.॥ ಮೊಗಮಂ ನೋಡುವಡಟ್ಟಿ ಪತ್ತಿದಪರೆಂಬಾ ಶಂಕೆಯಿಂ ಬಾತು ಬ-
ಲ್ಮೊಗದಿಂದಿರ್ದು ಪದಾರ್ತ್ಥಮಂ ಬಿಸುಟು ತಮ್ಮುಳ್ಳರ್ತ್ಥಮಂ ಬಯ್ತು ಬಂ-
ದಿಗೆ ಕಳ್ಳಂಗರಸಿಂಗೆ ದಾಯಿಗರಿಗಂ ಕಟ್ಟೋವುತಂ ಮಾಣ್ಬ ಲೋ-
ಭಿಗಳೇಂ ಪೋಲ್ವರೆ **ಸಾಕ್ಷರೀಕಶುಕಚೂತಾರಾಮನಂ[3] ಸೋಮನ** ॥

---

1. ಇಲ್ಲಿ ಒಂದು ಲಘ್ವಕ್ಷರ ಕಡಿಮೆಯಿದೆ. ಫಳಮೆನಲು ಎಂದು ಓದಬಹುದು.
2. ಶಾ. ಮೂ. ಪುಲಿಗೆ
3. ಶಾ. ಮೂ. ಸಾಕ್ಷ್ರೀಕಶುಕ ಚೂಡಾರಾಮನಂ

## ೪೦

## ಹೂವಿನಹಡಗಲಿ, ಕ್ರಿ. ವ. ೧೦೯೦

## ಹಡಗಲಿ ತಾಲೂಕು, ಚಾಳುಕ್ಯ ೬ನೆಯ ವಿಕ್ರಮಾದಿತ್ಯ

ಬಳ್ಳಾರಿ ಜಿಲ್ಲೆ (ಸೌ. ಇಂ. ಇನ್ಸ್. ೯, ಭಾ ೧, ಪು. ೧೪೦)

### ಧರ್ಮವಿನೋದಿ ರವಿಗ ದಂಡಾಧಿಪ

ವಿಕ್ರಮಚಕ್ರವರ್ತಿಗೆ ತನ್ನ ಮಂತ್ರಾಲೋಚನೆಯ ಬಲದಿಂದ ರಾಜ್ಯಾಭಿವೃದ್ಧಿಯನ್ನು ಮಾಡಿಕೊಟ್ಟವನೀತ. ನರ್ಮದಾ–ಗಂಗಾ–ಯಮುನಾನದಿಗಳ ತಡಿಯಲ್ಲಿಯೂ ಈತನು ಗುಡಿಗಳನ್ನು ಕಟ್ಟಿಸಿದನಂತೆ. ಈ ರವಿಗ ಚಮೂಪತಿಯ ಬಹುಮುಖ ಯೋಗ್ಯತೆಯ ಪರಿಚಯವು ಐವೂರು (ಕ್ರಿ. ವ. ೧೦೭೯) ಶಾಸನದಲ್ಲಿ (ನಂ. ೩೨) ಬಂದಿದೆ.

ಉ. ಮಾ.|| ಆವಱಿದಿಱ್ದವಿನ್ನೆವರವಿನ್ತಿನಿತಂ ರವಿದೇವನೊಲ್ದು ಸಂ-
ಭಾವನೆಯಿನ್ದೆ ಮಾಡಿಸಿದ ಸಂಜೆಮಟಂ[1] ಪ್ರಪೆ ಗೋಪ್ರಚಾರ[2] ವೀ-
ಶಾವಸಥಂ ಮುರಾರಿಭವನ ದ್ವಿಜಸತ್ರಮಿ....ತ್ತಿರೆ ನಾ-
ನಾವಿಧ ಧರ್ಮ್ಮವಿಲ್ಲದೆಡೆಯಿಲ್ಲ ಧರಿತ್ರಿಯೊಳೆಲ್ಲಿ ನೋಳ್ಪೊಡಂ ||೯೧||
**ನರ್ಮ್ಮದೆ ದೇವಸಿನ್ಧು ಯಮುನಾನದಿ**ಯೆಂಬಿವು ಮುಖ್ಯವಾಗಿ ಸ-
ತ್ಕರ್ಮ್ಮನಿವಾಸಮಾದಮಳತೀರ್ತ್ಥತಟಂಗಳೊಳೆಲ್ಲಮೊಲ್ದು ತಾಂ
ನಿರ್ಮ್ಮಿಸಿದಂ ಸುರಾಯತನವಂ ಪಲವಂ ....[3] ನಾಯಕಂ
**ಧರ್ಮ್ಮವಿನೋದಿ** ನಿರ್ಮ್ಮಳಯಶೋನಿಧಿ ಧಾರ್ಮ್ಮಿಕಧರ್ಮ್ಮ-
ನಂದನಂ ||೯೨||

### ಅಗ್ರಹಾರ ಪೂವಿನ ಪಡಂಗಿಲೆ (ಹೂವಿನ ಹಡಗಲಿ)

ಗುಡಿಯಲ್ಲಿ ಫಡಫಡಿಸುವ ಪತಾಕೆ ಕಲಿಯನ್ನು ದೂರದಿಂದಲೇ ಕೈಮಾಡಿ ಓಡಿಸುವಂತಿತ್ತು.

ಕಂ|| ಸಾರದಿರಿತ್ತಲು ಮುಳಿದಡೆ
ಮಾರಿಗಳೀ ಪಾರ್ವ್ವರೆಂದು ಕಲಿಯಂ ದೇವಾ-
ಗಾರದ ಪಳಯಿಗೆ ದೂರದೆ
ಬಾರಿಸುವನ್ತಿರ್ಕ್ಕುಮಲ್ಲಿ ವಾತೋದ್ಧೂತಂ ||೯೩||

### ದಾನವಿನೋದೆ ದಣ್ಣನಾಯಕಿತ್ತಿ

ರವಿಗನ ಹೆಂಡತಿ ರೆಬ್ಬಲದೇವಿಯೂ ಆತನಿಗೆ ತಕ್ಕಂತೆ ಧರ್ಮದ ತವರ್ಮನೆಯಾಗಿದ್ದಳು. ಇವಳು ಕೇಶವ ದೇವಾಲಯವನ್ನು ಕಟ್ಟಿಸಿ, ಬತ್ತದ ಗದ್ದೆ–ಅಡಕೆ ತೋಟಗಳನ್ನು ವಿಪ್ರರು ತನಗೆ ಕೊಡಲಾಗಿ ಆ ದೇವರಿಗೆ ಕೊಟ್ಟಿದ್ದಾಳೆ.

---

1. 'ಸಂಜೆಮಟಂ' ಸಂಜೆಯ ಶಾಲೆಯೋ ಆಗಿದ್ದರೆ ಆ ಶಾಲೆಯ ಶಿಕ್ಷಣಕ್ರಮ ಎಂತಿರಬಹುದು? ಅಲ್ಲಿ ನೀತಿ ಪಾಠ, ಧರ್ಮಪಾಠ ಹೇಳುತ್ತಿದ್ದರೆ? ಅಕ್ಷರಾಭ್ಯಾಸವೂ ನಡೆಯುತ್ತಿದ್ದಿತೆ?
2. ಗೋಪ್ರಚಾರ : ಗೋಶಾಲೆ, ಇಲ್ಲಿ ಪ್ರಚಾರ ಎಂಬ ಪದವು ವಿಚಾರಾರ್ಹವಾಗಿದೆ.
3. ಇಲ್ಲಿಯ ನಷ್ಟಾಕ್ಷರಗಳು 'ರವಿದಣ್ಣ' ಇರಬಹುದು.

ಉ. ಮಾ.॥ ಆ ನೆಗೞ್ದಿರ್ದ್ದ ಪೂವಿನ ಪಡಂಗಿಲೆಯೊಳ್ಪಿರಿದಪ್ಪ[1] ಭಕ್ತಿಯಿಂ
ದಾನವಿನೋದೆ ಧರ್ಮ್ಮದ ತವರ್ಮ್ಮನೆ ರೆಬ್ಬಲದೇವಿ ಶೋಭೆಯು-
ಣ್ದಾನಿಯು ನಾನ್ತು ಕಣ್ಗೆಸೆಯೆ ಕೇಶವಗೇಹಮನಿಷ್ಟ ಶಿಷ್ಟ ಸ-
ನ್ಮಾನಮನಾರತಂ ಪೊಗಳೆ ಮಾಡಿಸಿದಳ್ ಭುವನೈಕವನ್ದ್ಯಮಂ ॥

ಕಂ॥ [2]ಕಳವೆಯ ಗೞ್ದೆಯುಮಂ ಕ[2]-
ಣ್ಗೊಳಿಪಡಕೆಯ ತಳ್ತ ಬನಮುಮಂ ತದ್ವಿಪ್ರಾ-
[3]ವಳಿಯೊಸೆದು ತನಗೆಗುಡಲಾ-
ಜಳರುಹನಾಭಂಗೆಗೊಟ್ಟಳವನುತ್ಸವದಿಂ ॥೧೯೫॥

ಅಡಕೆಯ ತೋಟದ ಗೞ್ದೆಯ
ನಡುವಣ ನೀರ್ವ್ವರಿಯ ಬಡಗಣದ ಪೂದೋಂಟಂ
ಗಡಿಂಬ[4] ದೊಳದೊಂದೆ ಮತ್ತ-
ಪ್ಪೊಡವಿಯೊಳೆನಿತನಿತು ಪುಷ್ಪ[5] ಜಾತಿಯಿನೆಸೆಗುಂ ॥೧೯೬॥

## ೪೧

**ಸೊರಟೂರು,**
**ಗದಗ ತಾಲೂಕು,**
ಧಾರವಾಡ ಜಿಲ್ಲೆ

**ಕ್ರಿ. ವ. ೧೦೮೨**
**ಚಾಳುಕ್ಯ ೬ನೆಯ ವಿಕ್ರಮಾದಿತ್ಯ**
(ಸೌ. ಇಂ. ಇ. ೧೧, ಪು. ೧೬೫)

### 'ದಾನದೊಳನ್ನಮೆ ಸಾರಂ'

'ದೀನಾನಾಥರನ್ನು ತುಷ್ಟಿಬಡಿಸುವ ದಾನವೇ ಹಿರಿದು' ಎಂದು ಬಗೆದು ತೆಲ್ಲಿಗ ಜಕ್ಕಿಯಬ್ಬೆ ಸತ್ರಕ್ಕೆ ಭೂಮಿಯನ್ನು ದಾನವಿತ್ತಿದ್ದಾಳೆ.

ಕಂ॥ ದಾನದೊಳನ್ನಮೆ ಸಾರಂ
ದೀನಾನಾಥರ್ಗ್ಗೆ ತುಷ್ಟಿದಾನಮೆನುತ್ತುಂ
ತಾನಱಿದು ಜಕ್ಕಿಯಬ್ಬೆ ಯ-
ಶೋನಿಧಿ ಸತ್ರಕ್ಕೆ ಭೂಮಿದಾನಮನಿತ್ತಳ್ ॥೧೯೭॥

1. ಶಾ. ಮೂ. ಳ್ಪಿರಿದೆನಿಪ
2. ಶಾ. ಮೂ. : ಕಳವೆಯಂ ಗೞ್ದೆಯುಂ ಗ
3. ಶಾ. ಮೂ. : 'ವ' ಇಲ್ಲ.
4. ಗಡಿಬ ಎಂದೋದಬೇಕು.
5. ಶಾ. ಮೂ. : ಷ್ಪ

## ಕವಿ ಮಾಧವಭಟ್ಟ

ಈ ಶಾಸನದ ಕವಿ ಮಾಧವಭಟ್ಟನು ತನ್ನನ್ನು 'ವಾಕ್‌ಶ್ರೀಲಲಾಟಮಣಿಮಯಪಟ್ಟಂ' ಎಂದೂ ತಾನು ರಚಿಸಿದ ಶಾಸನವು ರಸ–ಭಾವ–ಅರ್ಥ–ಗೌರವಗಳಿಂದ ಒಡಂಬಡುವಂತಹದು ಎಂದೂ ಹೇಳಿಕೊಂಡಿದ್ದಾನೆ.

ಕೊಟ್ಟ ಕುಱಿಪಿಂಗೆ ಬಗೆ ನೇ-
ರ್ವ್ವಟ್ಟಿರೆ ರಸಭಾವಮರ್ತ್ಥಗೌರವದೊಳೊಡಂ-
ಬಟ್ಟಿರೆ ಪೇ[1]ಳ್ದಂ ಮಾಧವ-
ಭಟ್ಟಂ ವಾಕ್‌ಶ್ರೀಲಲಾಟಮಣಿ[2]ಮಯಪಟ್ಟಂ ||೧೯೮||

## ೪೨

**ಡೋಣಿ, ಗದುಗು ತಾಲೂಕು,** ಧಾರವಾಡ ಜಿಲ್ಲೆ

**ಕ್ರಿ. ವ. ೧೦೯೪**

**ಚಾಳುಕ್ಯ ೬ನೆಯ ವಿಕ್ರಮಾದಿತ್ಯ**

(ಸೌ. ಇಂ. ಇ. ೧೧, ಪು. ೨೪೦)

ಇಲ್ಲಿ ಆಯ್ದ ಗದ್ಯಭಾಗದಿಂದ ಹಿಂದಿನ ಕಾಲದ ಸುಂಕ–ತೆರಿಗೆಯ ಕ್ರಮವೂ ಪದ್ಯಭಾಗದಿಂದ ಉಗುರ ಮುನ್ನೂರ್ವರ ಶೌರ್ಯ–ಶೀಲ–ದಾನಗುಣಗಳ ಹಿರಿಮೆಯೂ ಗೊತ್ತಾಗುವುದು. ಡೋಣಿಯಲ್ಲಿ (ವೀಳ್ಯದ) ಎಲೆ ಕೊಯ್ಯುವುದಕ್ಕೆ ಒಂದು ಹೇರಿಗೆ ಊರವರಿಂದ ೨ ವೀಸ ಹಾಗೂ ಬೇರೂರವರಿಂದ ೨ ಹಣ ಕಾಣಿಕೆ ತೆಗೆದುಕೊಳ್ಳುವ ಕಟ್ಟಳೆಯಿತ್ತು.

ವ||—ಶ್ರೀಮತ್ಸರ್ಬ್ಬಾಧಿಕಾರಿ ಮನೆವೆರ್ಗ್ಗಡೆ ಮಹಾಪ್ರಚಣ್ಡ ದಣ್ಡನಾಯಕಂ ಮಹಾದೇವಭಟ್ಟರ ಬೆಸದಿಂ, ಸಮಸ್ತ ಗುಣವಿಶೇಷೋನ್ನತರಪ್ಪ ಶ್ರೀಮತ್ಪನ್ನಾಯದ ಸುಂಕವೆರ್ಗ್ಗಡೆ ವಿಟ್ಟರಸಂ ದ್ರೋಣಾಪುರದೂರೊಡೆಯ ಪ್ರಮುಖ ಮಹಾಜನಮು[3]ರ್ವ್ವದಿಂಬರುಂ ಸಮಸ್ತ ಸೆಟ್ಟಿಯರ ಸನ್ನಿಧಾನದೊಳ್, ಸಿದ್ಧೇಶ್ವರ ದೇವರಂಗಭೋಗಕ್ಕಂ ನಂದಾದೀವಿಗೆಗಮಲ್ಲಿಯಾಚಾರ್ಯ್ಯರು ಶಕ್ತಿಶಿವಪಣ್ಡಿತರ್ಗ್ಗೆ ಧಾರಾಪೂರ್ಬ್ಬಕಂ ಮಾಡಿ ದ್ರೋಣಿಯ ಕುಳಿಯ ಪನ್ನಾಯದ ಸುಂಕದೊಂದು ವರ್ಷಸ್ಥಿತಿ[4]ಯಿನಾಚಂದ್ರಾರ್ಕ್ಕತಾರಂ ನಡೆವನ್ತು ಮಾಡಿ ಕೊಟ್ಟ ಗದ್ಯಾಣಂ ೬, ಪಣ

---

1. ಶಾ. ಮೂ. : ಪೇ

2. ಶಾ. ಮೂ. : ಪಣಿ

3. ಅರ್ವ್ವದಿಂಬರುಂ

4. ವರ್ಷಸ್ಥಿತಿ : ವರುಷ ವರುಷವೂ ಇಂತಿಷ್ಟು ಹಣವನ್ನು ಕಂತುಗಳಿಂದ ಕೊಡುವ ಕಟ್ಟುಪಾಡಿನ ಪದ್ಧತಿ.

ಏಳು; ಅನ್ತಾ ಪೊಂಗಳನಾಸ್ಥಾನದೊಳು ನಡೆವ ಮಾನಸರೇ[1] ತಿಂಗಳಿಗೆ ಅಯ್ದು ಪಣ ವಡ್ಡಮುಂ ಕುಡುತುಂ ವರಿಷಕ್ಕಯಿದ್ದಿಸುತ್ತಂ ಬರ್ಪ್ಪರು. ಈ ಧರ್ಮ್ಮಂ ಪನ್ನಾಯದ ಸುಂಕಮನಾಳ್ವ ಮಹಾಪುರುಷರಾರೊರ್ಬ್ಬರವರ ಧರ್ಮ್ಮವಿದನವರೇ ಪ್ರತಿಪಾಳಿಸುತ್ತಂ ಬರ್ಪ್ಪರು.

ಮತ್ತಂ, ದ್ರೋಣಾಪುರದ ಮೇಲಾಳ್ಕೆಯ ಪೆರ್ಜ್ಜುಂಕದ ಮಾದಿರಾಜನುಮುಳಿಹಿಸೆಟ್ಟಿಯುಂ ತಮ್ಮ ಸುಂಕದೊಳಗೆ ದೇವರಂಗಭೋಗಕ್ಕೆ ವರ್ಷಸ್ಥಿತಿಯಿನಾಚಂದ್ರಾರ್ಕ್ಕತಾರಂ ನಡೆವನ್ತು ಕೊಟ್ಟ ಪಣವಾಱು. ಅವಂ ತಿಂಗಳಿಂಗೆ ಪತ್ತು ವೀಸಮುಂ ಕುಡುತುಂ ಬರಿಸಕ್ಕೆಯಿದ್ದಿಸುತ್ತಂ ಬರ್ಪ್ಪರು. ಇದನಾರಾದೊಡೆ ತಮ್ಮ ಕಾಲದೊಳ್ ತಮ್ಮ ಧರ್ಮಮಾಗಿ ಪರಿರಕ್ಷಿಸುವರು. ಮತ್ತಂ,

ಮ. ವಿ.॥ ಶರಣಾಯಾತಜನಂಗಳಂ ಕರುಣದಿಂ ಕಾವೊಳ್ಪಿನಿಂ ವಜ್ರಪಂ-
ಜರದನ್ನರ್ನ್ನೆರೆದಾನ್ತರಾತಿಬಳಮಂ ಸಂಹಾರಿಪಾತ್ಮೀಯ ಭೀ-
ಕರಶೌರ್ಯ್ಯೋದಯದಿಂ ಪರೀಕ್ಷಿಪೊಡೆಲೇ ಬಾವನ್ನವೀರರ್ಕ್ಕಳ-
ನ್ನರಿವತ್ತಾರ್ವೆನೆ ಸನ್ದರಿ**ನ್ತುಗುರ ಮೂನೂರ್ಬ್ಬ**ರ್ಜ್ಜಗದ್ಭಂಭುಕರ್ ॥

ಮ. ಸ್ರ ॥ ತವಗೆತ್ತಾನುಂ ಮೊಗಕ್ಕೊನ್ದಿನಿಸು ಮುಳಿಸು ಬನ್ದನ್ದು ಗೋತ್ರಾದ್ರಿ ಸಂಘಾ-
ತವನೆತ್ತಂ ಪತ್ತಿ ಕಿರ್ತ್ತೆತ್ತುವರು[2] ಱ[3] ಪಿಡಿದುದ್ಯದ್ದಿಶಾನೇಕಪಾನೀ-
ಕ[3] ವನಾರ್ದ್ದೊರ್ನ್ದೊನ್ದೆ ತೋಳ್ತಾಗಿಪರವಯವದಿಂ ಸುಱ್ರಿನಲ್ತಾ-
ಯ್ನೆಲಂದೋಱುವಿನಂ[4] ಮೂನೂರ್ಬ್ಬರುಂ ವಾರ್ದ್ಧಿಗಳನಿತುವನಾಳಾಪದಿಂ ಪೀರ್ದ್ದು ತೋರ್ಪ್ಪರ್ ॥೨೦೦॥

ವ॥ ಅನ್ತೆನಿಸಿ ನೆಗಟ್ದುಗುರ ಮೂನೂರ್ಬ್ಬರುಮಿರ್ದ್ದು ಸಿದ್ಧೇಶ್ವರದೇವರ್ಗ್ಗೆ ಅಲ್ಲಿಯಾಚಾರ್ಯ್ಯ ಸ್ವಸ್ತಿ ಯಮನಿಯಮಸ್ವಾಧ್ಯಾಯಧ್ಯಾನಧಾರಣ ಮೋನಾನುಷ್ಠಾನಜಪಸಮಾಧಿಶೀಳಸಂಪನ್ನರುಂ ಗುರುಕುಳಸಮುದ್ಧರಣರುಮನೇಕಾರ್ತ್ಥ ಶಾಸ್ತ್ರ

---

1 ಆ ಸ್ಥಾನದೊಳು (ಆ ಅಧಿಕಾರಸ್ಥಾನದಲ್ಲಿ) ನಡೆವ ಮಾನಿಸರು : ಆಯಾ ಕಾಲದಲ್ಲ ಈ ಸುಂಕವನ್ನು ಆಳುವ ಅಧಿಕಾರಿಗಳು.

2. ಗೋತ್ರಾದ್ರಿ ಸಂಘಾತ : ಕುಲಗಿರಿಗಳ ಸಮೂಹ. ಎತ್ತಂ ಪತ್ತಿ : ಎಲ್ಲಿ ಹೊಕ್ಕರೂ ಬಿಡದೆ ಬೆನ್ನು ಹತ್ತಿ (ಸಮುದ್ರವನ್ನು ಹೊಕ್ಕ ಪರ್ವತಗಳನ್ನು ಇಂದ್ರ ಬಿಟ್ಟುಬಿಟ್ಟನಂತೆ, ಹಾಗಿವರು ಬಿಡುವವರಲ್ಲ), ಕಿತ್ತಿ ಎತ್ತುವರು.

3 ದಿಶಾ (ದಿಕ್ಕು) + ಅನೇಕಪ (ದ್ವಿಪ : ಆನೆ) + ಅನೀಕ (ಸಮೂಹ).

4. ತಾಯ್ನೆಲಂದೋಱುವಿನಂ : ತಳ ಕಾಣುವ ಹಾಗೆ. (ಎಲ್ಲ ಸಮುದ್ರಗಳನ್ನೂ ಹೀರಿ ತೋರಿಸುವರು).

ಪಾರಾವಾರಪಾರಗರುಮಪ್ಪ ಶ್ರೀಮಲ್ಲಕ್ಷ್ಮೀಧರ ಪಣ್ಡಿತರ ಶಿಷ್ಯರಪ್ಪ ಶಕ್ತಿಶಿವ ಪಣ್ಡಿತರ್ಗ್ಗೆ ಧಾರಾಪೂರ್ಬ್ಬಕಂಮಾಡಿ, ಈ ಗ್ರಾಮುದೊ[1]ಳೊ....[1]ವೆಲೆಯ ಪೇಱಿಂಗಂ ವೀಸ ೨, ಭಣ್ಡಿಹೊಱಿಗೆ ಬೇಳೆ ಲೆಕ್ಕದಿಂ ತವಗೆ ನಡೆವ ದರಿಸಿನವನಾಚಂದ್ರಾರ್ಕ್ಕ-ತಾರಂ ನಡೆವನ್ತು ಮಾಡಿಕೊಟ್ಟರು. ಮತ್ತಂ, ಹೊಸಬರಪ್ಪ ಕೊಯ್ಲಾಳಿಗಳು ಬನ್ದೀಯೂರೊಳ್ ಕೊಯ್ವರಪ್ಪೊಡೆ ದೇವರ್ಗ್ಗೆ **ದರಿಸಿನ**ಮನೆರಡು ಪಣಮಂ ಕೊಟ್ಟು ಕೊಯ್ವರ್.

೪೩

**ಸೇಡಂ,** **ಕ್ರಿ. ವ. ೧೧೯೪**

**ಸೇಡಂ ತಾಲೂಕು,** **ಚಾಳುಕ್ಯ ೬ನೆಯ ವಿಕ್ರಮಾದಿತ್ಯ**

ಕಲಬುರ್ಗಿ ಜಿಲ್ಲೆ (ಜೈ. ಸಾ. ಇಂ. ಪು. ೨೬೯)

**ಅದಟರಿಗೆ ಮಸ್ತಕಶೂಲ ಸೇಡಿಂಬ**

ಈಗಿನ ಸೇಡಮಿಗೆ ಹಿಂದೆ ಸೇಡಿಂಬ ಎಂದು ಹೆಸರಿತ್ತು. ಲಗ್ಗೆಗೆ ಅಸದಳವಾದ ದುರ್ಗಮ ಕೋಟೆ ಇದೆಂದೂ ಇಲ್ಲಿಯ ವಿಪ್ರರು ಅಸರೆತಪ್ಪಿದ ಸುತ್ತಣ ನಾಡನ್ನು ಕಾಯುವಂತಹ ಶೂರರೆಂದೂ ಈ ಪದ್ಯಗಳಿಂದ ತಿಳಿಯುತ್ತದೆ.

ಈ ಪದ್ಯ ಸೇಡಿಂಬದ ಇನ್ನೊಂದು ಶಾಸನ(೧೨ನೆಯ ಶತಮಾನ)ದಲ್ಲಿಯೂ ಬಂದಿದೆ. ಅದರಲ್ಲಿ ಉತ್ಪಲಮಾಲೆಯನ್ನು 'ಕಾಮುಲತಿಕಾವೃತ್ತ' ಎಂದು ಹೆಸರಿಸಿದ್ದಾರೆ.

ಉ. ಮಾ॥ ಅಂಬರಮಂ ಪಳಂಚಲೆವುತಿಟ್ಟುಪುದಿಕ್ಕಿದ ಕೋಟೆ ನಾಗಲೋ-
ಕಂಬರಮೆಯ್ದೆ ಮುಟ್ಟೆದುದಗಳ್ದಗಳಿತ್ತ[2] ದಿಶಾದಿಶಾಂತರಾ-
ಳಂಬರಮೆಯ್ದೆ ಪರ್ವ್ವಿದುದು ತೇಜದ ಸಾಜದಗುರ್ವ್ವಿನಲ್ಕೆ **ಸೇ-**
**ಡಿಂಬ**ದೊಳೆತ್ತಿ ಕಾದುವದಟರ್ಗ್ಗಿದು ಮಸ್ತಕಶೂಲವಲ್ಲದೆ ॥೨೦೧॥

ಅಂಬುಧಿ ಮೇರೆದಪ್ಪಿ ಕವಿದೀಧರೆಯಂ ಕೊಳುವಂದು[3] ವಿಷ್ಣುವೀ-
ಶಂಬೆರಸೀಜಗತ್ತ್ರಯಮನಾಱುಮಂ ಬಸಿರೊಳ್ನಿಲಿಸಿಟ್ಟು ಕಾವವೋ-
ಲಿಂಬಳಿದಿಟ್ಟ[4] ನಾಲ್ದೆಸೆಯ ನಾಡುಗಳಂ ಪೆಱಗಿಕ್ಕಿ ಕಾವ ಸೇ-
ಡಿಂಬದ ವಿಪ್ರರೊಂದಳವನೇವೊಗಳ್ವಂ [5]ಚಲದಂಕರಾಮರಂ[5] ॥೨೦೩॥

---

1. ಳ್ಕೊಯ್ಯುವೆಲೆಯ ಎಂದಿರಬೇಕೆಂದು ತೋರುವುದು.
2. ಱಟಕ್ಕೆ ಕುಳವನ್ನು ಬಳಸಿದ್ದಾರೆ: ಅಗಲ್ದು, ಅಗಲಿತ್ತ
3. ಇದೇ ಊರ ಕ್ರಿ. ವ. ೧೧೩೮ರ ಇನ್ನೊಂದು ಶಾಸನದಲ್ಲಿ ಬಂದ ಇದೇ ಪದ್ಯದಲ್ಲಿಯ ಪಾಠಾಂತರ : ಕೊಳುವಲ್ಲಿ
4. ಪಾಠಾಂತರ (ಸೇಡಂ, ಕ್ರಿ. ವ. ೧೧೩೮) ಬಱಿದಿರ್ದ್ದ
5. ಪಾಠಾಂತರ (ಸೇಡಂ, ೧೨ನೆಯ ಶತಮಾನ): ಕದನಪ್ರಚಂಡರಂ

೪೪

## ಇಂಗಳಗಿ, ಕ್ರಿ. ಶ. ೧೦೯೪

ಕಲಬುರ್ಗಿ ಜಿಲ್ಲೆ ಚಾಳುಕ್ಯ ೬ನೆಯ ವಿಕ್ರಮಾದಿತ್ಯ

(ಜೈ. ಸಾ. ಇಂ. ಪು. ೨೪೬)

ಚಾಳುಕ್ಯ ತ್ರಿಭುವನಮಲ್ಲ ೬ನೆಯ ವಿಕ್ರಮಾದಿತ್ಯನ ಮಡದಿ ಜಾಕಲದೇವಿಯ ಧರ್ಮ-ಕಾರ್ಯಗಳೂ ಗುಣವಿಶೇಷಗಳೂ ಈ ಆಯ್ದ ಭಾಗದಲ್ಲಿ ವರ್ಣಿತವಾಗಿವೆ. ಇವಳು ತಿಕ್ಕಣ ಎಂಬವನ ಮಗಳು. ಅಬ್ಬಲ್ ಮುನ್ನೂರರೊಳಗಿನ ಇಂಗುಣಿಗೆಯಲ್ಲಿ ಈಕೆ ಆಳುತ್ತಿದ್ದಳು. ಚಕ್ರವರ್ತಿಯು ತನ್ನ ಇನಿಯಳ ಪತಿನಿಷ್ಠೆಯನ್ನು ಪ್ರೀತಿಯ ಈರ್ಷೆಯಿಂದ ಪಣತೊಟ್ಟು ಕೆಣಕಿ ಕೆಡಿಸಲಾರದೆ ಸೋತನೆಂಬ ಸ್ವಾರಸ್ಯವಾದ ಪ್ರಸಂಗದ ಉಲ್ಲೇಖ ಇಲ್ಲಿ ಬಂದಿದೆ. ಇದೂ ಅಲ್ಲದೆ, ಒಮ್ಮೆ ಒಬ್ಬ ವ್ಯವಹಾರಿ ಓಲಗದಲ್ಲಿದ್ದ ವಿಕ್ರಮಾದಿತ್ಯನಿಗೆ ಜಿನಬಿಂಬವನ್ನು ತಂದು ತೋರಿಸಲು, ಅವನು ಮಡದನ್ನೆ ಜಾಕಲದೇವಿಯ ಮೊಗವನ್ನು ನೋಡಿ, 'ಎಂತಹ ಸೊಗಸಾದ ಮೂರ್ತಿ! ಹೇಗೂ ಇದು ನಿನ್ನ ಕುಲದೈವ, ಇದನ್ನು ನಿನ್ನ ಆಳುವ ಊರಲ್ಲಿ ನಿಲಿಸು' ಎಂದೆನ್ನುತ್ತಾನೆ, ಅದರಂತೆ ಆಕೆ ತನ್ನ ಒಳ್ಳು ನಿಲ್ಲುವ ಹಾಗೆ ಆ ಜಿನಬಿಂಬವನ್ನು ನಿಲ್ಲಿಸುತ್ತಾಳೆ. ಇಲ್ಲಿಯೂ ದೊರೆಯ ಸರಸಪ್ರಕೃತಿ ವ್ಯಕ್ತವಾಗಿದೆ. ಶಾಸನದ ವಿಷಯನಿರೂಪಣೆಯೂ ಶೈಲಿಯೂ ಲಲಿತಸುಂದರವಾಗಿದೆ.

ಈ ಶಾಸನವನ್ನು ಬರೆದ ಕವಿ ನಾಗಾರ್ಜುನ ಪಂಡಿತನು ತಾನು 'ವಾಗ್ವಧೂನಂದನ'ನೆಂದು ಕೊನೆಯಲ್ಲಿ ಹೇಳಿಕೊಂಡಿದ್ದಾನೆ.

### ಸಕಳಕಳಾಧರಿ ಜಾಕಲದೇವಿ

ವ|| ಸ್ವಸ್ತ್ಯನವರತ ಪರಮಕಲ್ಯಾಣಾಭ್ಯುದಯ ಸಹಸ್ರಫಳಭೋಗಭಾಗಿನಿ. ಸಕಳದೀನಾನಾಥಮನಸ್ಸಂತರ್ಪಣೋದ್ಯೋಗಿನಿ, ಸಮಸ್ತಾನ್ತಃಪುರ[1] ನಿತಂಬಿನೀ ಕದಂಬಚೂಡಾಮಣಿ, ಚತುರ್ವ್ವಿಧದಾನ ಚಿನ್ತಾಮಣಿ, ರಂಭಾವಿಳಾಸೋಪಹಸಿತ-ಸನ್ಮೂರ್ತ್ತಿ, ದಿಗ್ವಿಜಯವಿಳಸಿತೋಜ್ಜ್ವಳಕೀರ್ತ್ತಿ, **ಕಲಿಕಾಲಪಾರ್ವ್ವತಿ, ಅಭಿನವಸರಸ್ವತಿ,** ರಾಯಚೇತೋವಶೀಕರಣಕರಣ ವಿದ್ಯಾಧರಿ, ಸಕಳಕಳಾಧರಿ, ಸೀತಾ-ದ್ಯನೇಕ ಮಹಾಸತೀಜನ ಪತಿಬ್ರತಾಚಾರ ಶೀಳೋದಾರವರ್ಣನಕಥಾಪ್ರಸಂಗೆ, ಜಿನ-ಗನ್ಧೋದಕಪವಿತ್ರೀಕೃತೋತ್ತಮಾಂಗೆ, ಶ್ರೀಮದರ್ಹತ್ ಪರಮೇಶ್ವರ ಚಾರುಚರಣಾ-ರ್ಚ್ಚನವಿನೋದೆ, ಮೃಗಮದಾಮೋದೆ, ಸಹಜಬೆಡಂಗಿ, ತಿಕ್ಕಣನಣುಂಗಿ, ಶ್ರೀಮತ್ರಿ-ಭುವನಮಲ್ಲದೇವ ವಿಶಾಳವಕ್ಷಃಸ್ಥಳ ನಿವಾಸಿನಿಯರಪ್ಪ ಶ್ರೀಮಜ್ಜಾ**ಕಳದೇವಿ**ಯರ-ಬ್ಬಲ್ಮೂನೂಱಱೊಳಗಣಿಂಗಣಿಗೆಯಂ ತ್ರಿಭೋಗಾಭ್ಯನ್ತರಸಿದ್ಧಿಯಿಂದಾಳುತ್ತಮಿರೆ—

### ವಿಕ್ರಮಾದಿತ್ಯನ ರಸಿಕತೆ

ಚಂ|| ಜನಕಜೆಯಂತೆ ಸಜ್ಜನಜನಸ್ತುತೆ ಪಾರ್ವ್ವತಿಯಂತೆ ಜೀವಿತೇ-
ಶನೊಳವಿಕಳ್ಪಭಾವೆ ಧರೆಯಂತೆ ಧೃತಕ್ಷಮೆ ರಂಭೆಯಂತೆ ರೂ-

---

1. ಶಾ. ಮೂ. : ನ್ತಃಪ್ಪುರ

ಪಿನ ನೆಲೆ ಪೆಂಪುವೆತ್ತಮರಧೇನುವಿನಂತನಿಮಿತ್ತದಾನಿ ಕಾ-
ಮನ ಸರಲಂತಿರಯ್ದೆ[1] ಪರಿಭಾವಿಸೆ **ಜಾಕಲದೇವಿ** ಧಾತ್ರಿಯೊಳ್ ||೨೦೩||

ಕಂ|| ಬ್ರತವಮಂ ಚಾಳುಕ್ಯಕ್ಷಿತಿ-
ಪತಿ ಕಿಡಿಸುವೆನೆಂದು ಪೂಣ್ದಡಂ ಕಿಡಿಸದದಂ
ಪ್ರತಿಪಾಳಿಸಿದೊಂದು ಮಹೋ-
ನ್ನತಿ ಜಾಕಲದೇವಿಗೆಕ್ಕಲಾವಣಮಲ್ತೆ ||೨೦೪||

## ಓಲಗ ಪ್ರಸಂಗ

ವ|| ಅಂತು ಜಿನಶಾಸನಸಮಯದೊಳ್ ಶಾಸನಲಕ್ಷ್ಮಿಯುಂ ಚಾಳುಕ್ಯ ಚಕ್ರೇಶ್ವರನ ದಿಗ್ವಿಜಯಸಮಯದೊಳ್ ಕೀರ್ತ್ತಿಲಕ್ಷ್ಮಿಯುಂ ಮದವದರಿರಾಯ ಮದಮರ್ದ್ದನ ಸಮಯದೊಳ್ ವಿಜಯಲಕ್ಷ್ಮಿಯುಮೆನಿಸಿ, ನೆಗರ್ತ್ತೆಗಂ ಪೊಗರ್ತ್ತೆಗಂ ನೆಲೆಯಾಗಿ ವರ್ತ್ತಿಸುತ್ತುಮಿರಲೊಂದು ಪುಣ್ಯದಿನದೊಳಾ ಪುಣ್ಯವತಿಯ ಪುಣ್ಯೋದಯದಿನೊರ್ವ್ವಂ ವ್ಯವಹಾರಿ ಮಹುಮಾಣಿಕ್ಯದೇವರಂ[2] ತಂದವಸರಂ ಬಡೆದೋಲಗಿಸುವುದುಮಾ ಜಿನೇಶ್ವರನಂ ಚಾಳುಕ್ಯೇಶ್ವರಂ ಕಂಡು ಮನವೇಗೊಣ್ಡು ಮನದನ್ನಳಪ್ಪ ಶ್ರೀಮಜ್ಜಾಕಲದೇವಿಯುರ ಮೊಗಮಂ ನೋಡಿ,

ಮ. ವಿ.|| **ಜಿನಬಿಂಬಂ ಪ್ರತಿಬಿಂಬಮಿಲ್ಲೆನಿಪ ಚೆಲ್ವಂ ತಾಳ್ದಿ**ತೀ ದೆಯ್ವಮುಂ
ನಿನಗೆಂತುಂ ಕುಲದೆಯ್ವಮೀ ಪ್ರತಿಮೆಯಂ ನಿನ್ನಾಳ್ಕೆಯೂರೊಳ್ವಿನೇ-
ಯನಿಕಾಯಂ ಬಗೆಗೊಳ್ವಿನಂ ನಿಲಿಸೆನಲ್ಚಾಳುಕ್ಯಚಕ್ರೇಶಶಾ-
ಸನದಿಂ **ತಜ್ಜಿನಬಿಂಬಮಂ ನಿಲಿಸಿದಳ್ತನ್ನೊಳ್ಪು ನಿಲ್ವನ್ನೆಗಂ** ||೨೦೫||

## ಇಂದ್ರಸೇನ ಭಟ್ಟಾರಕರಿಗೆ ಕೊಟ್ಟುದು

ಅಂತು ನಿಲಿಸಿ,

ಉ. ಮಾ.|| ಮಾಡಿಸಿದಪ್ಪೆವಿಂ ಜಿನಗೃಹಂಗಳನೆಂಬಿವರೀ ಪ್ರಕಾರದಿಂ
ಮಾಡಿಪುದಿಂತಿದಲ್ತೆ ಪಡಿಚೆಂದಮಿಳಾವಳಯಕ್ಕನಲ್ಕೆ ನಾ-
ಡಾಡಿಗಳುಂಬಮಪ್ಪ ಪರಿಶೋಭೆಗೆ ತಾಯ್ಮನೆಯಾಗ ಭಕ್ತಿಯಿಂ
ಮಾಡಿಸಿದಳ್ವಿಯತ್ತಳಮನೊತ್ತರಿಪಂತು ಜಿನೇಂದ್ರಗೇಹಮಂ ||೨೦೬||

ವ|| ಅಂತು ಮಾಡಿಸಿ ಶ್ರೀಮದ್ದ್ರಾವಿಳಸಂಘವನವಸಂತಸಮಯರುಂ ಸೇನಗಣಭಗಣನಾಯಕರುಂ ಮೂಲನೂರಾನ್ವಯ ಶಿರಃಶೇಖರರುಮೆನಿಸಿದ ಶ್ರೀ-

1. ಆಯ್ದೆ : ಆಯ್ದು ಮಾಂಗಲ್ಯ ಚಿಹ್ನವುಳ್ಳವಳು.
2. ಆ ಜಿನಬಿಂಬದ ಹೆಸರು – ಮಹುಮಾಣಿಕ್ಯ (ಜಿನೇಶ್ವರ) ದೇವರು.

ಮನ್ಮಲ್ಲಿಸೇನ ಭಟ್ಟಾರಕರ ಪ್ರಿಯಾಗ್ರಶಿಷ್ಯರುಂ ತನ್ನನ್ವಯಗುರುಗಳುಮೆನಿಸಿದ ಶ್ರೀಮದಿಂದ್ರಸೇನಭಟ್ಟಾರಕರ್ಗ್ಗೆ ವಿನಯದಿಂ ಕರಕಮಳಂಗಳಂ ಮುಗಿದು,

ಚಂ॥ ಎಸೆವಿನೆಗಂ ಸಮುನ್ನ್ತ ಮಹುಮಾಣಿಜಿನೇಶ್ವರ ಬಿಂಬಮಂ ಪ್ರತಿ-
ಷ್ಠಿಸಿದೆನಿದತ್ಯಪೂರ್ವ್ವಮೆನೆ ತಜ್ಜಿನಗೇಹಮನತ್ತಿಯಿಂದೆ ಮಾ-
ಡಿಸಿದೆನದಕ್ಕೆ ತಕ್ಕ ತಳವೃತ್ತಿಯುಮಂ ಸವ-ಕಟ್ಟೆದೆಂ ಪ್ರಸಾ-
ದಿಸಿ ಮನಮೊಲ್ದು ಕಯ್ಕೊಳುವುದೂರ್ಜ್ಜಿತಮಾಗಿರೆ ಮಾಳ್ಪದಿಂತಿದಂ ॥೨೦೭॥

ವ॥ ಎಂದು ತನ್ಮುನೀಂದ್ರರನೇಗೊಳಿಸಿ ಕಾಲಂ ಕರ್ಚ್ಚಿ ಧಾರಾಪೂರ್ವ್ವಕಂ ಮಾಡಿಬಿಟ್ಟ [ಇಲ್ಲಿ ವರುಷ, ತಿಥಿ, ಭೂಮಿಯ ವಿವರಣೆ ಇತ್ಯಾದಿ ಬಿಟ್ಟಿದೆ] ಈ ಕೆಯ್ಯು-ಮನೀ ತೋಂಟಮುವನೀ ಕೇರಿಯುಮನೀಜಿನೇಂದ್ರಮಂದಿರಮುಮಂ ಕಂಡು,

ಕಂ॥ ಪ್ರಣತ[1] ಶಿರರಾಗಿ ಕಣ್ಗ-
ಳ್ತಣಿವಿನೆಗಂ ನೋಡಿ ಪೋಗದೀಸ್ಥಳದೊಳ್ಕಾ-
ಗಿಣೆಗಾಸೆಗೆಯ್ದುವಂ ಕಾ-
ಗಿಣೆಯೊಳ್ನೀರುಂಡ ಕೋಕುಳಂಗಳನಳಿದಂ ॥೨೦೮॥

ವ॥ ವಾಗ್ವಧೂನನ್ದನಂ ಜಿನವಾದಾಂಭೋಜಭೃಂಗಂ **ನಾಗಾರ್ಜುನಪಣ್ಡಿತಂ ಬರೆದಂ** ಮಂಗಳಮಹಾಶ್ರೀ.

## ೪೫

## ಕೊರಗೋಡು, ಕ್ರಿ. ವ. ೧೧೮೫

**ಸೊರಬ ತಾಲೂಕು,** **ಚಾಳುಕ್ಯ ೬ನೆಯ ವಿಕ್ರಮಾದಿತ್ಯ**

ಶಿವಮೊಗ್ಗೆ ಜಿಲ್ಲೆ (ಎ. ಪಿ. ಕ. ೮, ಭಾ. ೨, ಪು. ೭೨)

## ದೇವಗೌಡ-ಮಲ್ಲಗೌಡರ ತುರುಗಾಳಿಗ

ಇದೊಂದು ವೀರಶಾಸನ. ಬಾವಗೌಡನ ಮಕ್ಕಳಾದ ದೇವಗೌಡ ಮಲ್ಲಗೌಡರು ತುರು-ಗಾಳಿಗದಲ್ಲಿ ಮಡಿದರು. ಆಗ ಅವರ ತಮ್ಮ ಬೊಪ್ಪಗೌಡ ಸೈರಿಸಲಾರದೆ 'ನೀವಾದುದಾಗುವೆ'ನೆಂದು ಒಬ್ಬನೇ ಹಗೆಗಳ ಬೆನ್ನುಹತ್ತಿ ತುರುಗಳನ್ನು ಬಿಡಿಸಿದ ಸಂಗತಿ ಇಲ್ಲಿ ಬಂದಿದೆ. ತುರುಗಾಳೆ-ಗದ ವಿಶದವಾದ ಪ್ರತ್ಯಕ್ಷ ವರ್ಣನೆಯನ್ನು ಈ ವೀರಶಾಸನದಲ್ಲಿ ಮಾಡಿದೆ. ಈ ವೀರರ ಬಗೆಗೆ ಓದುಗರಲ್ಲಿ ಹೆಮ್ಮೆ ಹುಟ್ಟುವಂತೆ ವೀರರಸದ ಊಟೆ ಇಲ್ಲಿ ಚಿಮ್ಮಿದೆ.

ವ॥ ಶ್ರೀಮನ್ಮಹಾಮಂಡಳೇಶ್ವರಂ ಜಗದೇವರಸರ ಬೆಸದಿಂ ಮದಸಾಲೆಯ ಕಾಳ-ರಸಂ ಸಮಸ್ತ ಸಾಮಾತ್ತಿಯಂ ಬೆರಸು ಬಂದು ಶ್ರೀಮದನಾದಿಯಗ್ರಹಾರಂ **ಕುಪ್ಪ-**

1. ಶಾ. ಮೂ. : ಪ್ರಣುತ

**ಗಡೆಯ ಹಳ್ಳಿ ಕೊರಕೋಡ**ನಿಱಿದು ತುಱುವಂ ಕೊಂಡುಡೆಯುಚ್ಚಿ ಹೋಹಾಗಳಲ್ಲಿ ಹುಟ್ಟಿದ[1] ಬಾವಗಾವುಂಡನ ಮಗಂದಿರು ದೇವಗಾವುಂಡನುಂ ಮಲ್ಲಗಾವುಂಡನುಂ **ಬಿಲ್ಲುಮಂಬುಮುಂ ಕೊಂಡಿರ್ವ್ವರುಂ** ಹೆಬ್ಬಾಗಿಲೊಳಡ್ಡಂ ನಿಂದು, ಗುಹೆಯ ಬಾಗಿಲೊಳು ಸಿಂಹನಿರ್ಪ್ಪಂತೆ ತಾಗಿ ತಳ್ದೆ[2] ಸುವಾಗಳು, ಕಾರಮುಳ್ ಕಱಿ[3]ದಂತೆಯುಂ, ಕಡಂದುಱು ಹುಟ್ಟಿಯ ಕೆಣಕಿದಂತೆಯುಂ, ಕವಿದ ಕಾಲ ಬಾಯೊಳಂ ಜವನೊಕ್ಕಲಿಕ್ಕಿದಂತೆ ತೊತ್ತಳದುಳಿದವೊಲು ತುಂಕಯ್ಯನರೆದುಂ, ಬಿಲ್ಲ ತಿರುವುಂ ಪಱಿವನ್ನವೆಚ್ಚು ನೆಱಿ[3]ಯದೆ, ಕಟ್ಟಿದಲಗಂ ಕಿತ್ತು . ಲ್ಕುಱಿಯ ಹಿಂಡಂ ತೋಳಂ ಪೊಕ್ಕಂತೆಯುಂ ಕಬ್ಬಿರ್ದೊಂಟವನಾನೆ ಪೊಕ್ಕಂತೆಯುಂ ನಿಕ್ಕುರಳಿಲು ಪೊಕ್ಕು ದೋಳಹಿಂಡು ಕುತ್ತಿ ನೂಂಕುತ್ತ ಬಪ್ಪಾಗಳು,

ಚಂ॥ ಮಲೆದಿದಿರಾಂತ ಮಾರ್ವ್ವಲವನಳ್ಕುಱಿ[3] ತಾಗಿ ಭುಜಪ್ರತಾಪದಿಂ-
ದಲಗನೆ ಕಿತ್ತು ಪೊಯ್ಯೆ ನಿರತಂ ಕಣಕಾಲ್ಮೊಳಕಾಲ್ಮುಖಂ ಭುಜಂ[3]
ತಲೆಬಳೆಯಾಗೆ ಸಂಬಳಿತಯೋಪಿನದೊಂದೆರಡಟ್ಟಿಯೋಡಲುಂ
ತೊಲಗದೆ ನಿಂದು [4]ತಳ್ತಿಱಿದರಿ[4]ಬ್ಬರುಮಾಹವರಂಗಭೂಮಿಯೊಳ್ ॥

ವ॥ ಅಂತವರಿಬ್ಬರುಂ ಪೋಗದೆ ನಿಂದುದಂ ಕಂಡು ಪೊರಿದಾ[5]ಳು ಕುದುರೆಯ ಮೊಬ್ಬರ್ಂ ತಾಗಿಯೆಸಲ್ವಿಱಿಯಲುಂ[6] ಕೋಲ್ಕೊಂತಂಗಳೂಡಾಗಿ ಬಿದ್ದು ಸುರಲೋಕಪ್ರಾಪ್ತರಾದರವರಿಬ್ಬರ ಪೆಣನಂ ಮೆಟ್ಟಿ ತುಱು ಪರಿಯಲವರಿಬ್ಬರಿಂ ಕಿಱಿಯ ಬೊಪ್ಪಗಾವುಂಡ ತಮ್ಮಣ್ಣಂದಿರಿಬ್ಬರ ಕಳೇಬರವಂ, ಕಂಡು ಸೈರಿಸಲಾಱದೆ, 'ನಿಮ್ಮಾದುದನಪ್ಪೆನಲ್ಲದೊಡೇಂ ತುಱುವಂ ಮಗುಳ್ಚಿ ಬಪ್ಪೆನೆ'ಂದೊಂದೆಮೆಯ್ಯೊಳು[7] ಹಿಂದಹತ್ತಲಾತಂಗೆ ಪಡಿಬಲದಾಗಿ, ಮಂಡಳಿಕಂ **ಉದ್ದರೆಯೆಕ್ಕಲರಸ**ನಾಳ್ಕುದುರೆಯುಂ ಹೇಳಲಾನೆಱವಂ ಕೂಡಿಕೊಂಡು ಹಾಲ್ಗಟ್ಟಿದ ಬಯಲಲೊಡ್ಡನೊಡ್ಡಿದರಿಬಲವಂ **ಬೊಪ್ಪಗವುಂಡ ಕೊಂದು**, ತುಱುವಂ ಮಗುಳ್ಚಿಕೊಂಡು ಬಂದಣ್ಣಂದಿರಂ **ಸಂಸ್ಕಾರಿಸಿ**, **ಜಳದಾನಕ್ರಿಯೆ**ಯುಮಂ **ಪರೋಕ್ಷವಿನಯ**ಮುಮಂ ಮಾಡಿಯಿಬ್ಬರ್ಗ್ಗಂ ಕಲ್ಲಂ ನಿಱಿಸಿದಲ್ಲಿ ಮಂಗಳಮಹಾಶ್ರೀ.

---

1. ಅಲ್ಲಿ ಹುಟ್ಟಿದ ಎಂದರೆ ಆ ಊರಲ್ಲಿ ಹುಟ್ಟಿದ, ಅದೇ ಊರವರಾದ ಎಂದರ್ಥವಿರಬೇಕು.
2. ತಳ್ದು (ತಳ್ತು)+ ಎಸುವಾಗಳು.
3 ಶಾ. ಮೂ. ಭುಜೆಸು.
4. ಶಾ. ಮೂ. . ಳಿಱಿದ
5 ಪರಿದಾಳು ಇರಬಹುದೆ?
6. ಎಸಲುಂ+ ಇಱಿಯಲುಂ (?)
7 ಒಂದೆ ಮೆಯ್ಯೊಳು : ಏಕಾಂಗನಾಗಿ

## ೪೭

**ಡೋಣಿ,** **ಕ್ರಿ. ಶ. ೧೦೯೭**

**ಮುಂಡರಗಿ ತಾಲೂಕು,** **ಚಾಳುಕ್ಯ ೬ನೆಯ ವಿಕ್ರಮಾದಿತ್ಯ**

ಧಾರವಾಡ ಜಿಲ್ಲೆ (ಸೌ. ಇಂ. ಇನ್ಸ್. ೧೧, ಪು. ೧೬೯)

**ಮಹಾಜನಗಳು**

ದ್ರೋಣಿಕಾ (ಡೋಣಿ) ಗ್ರಾಮದ ಅರುವತ್ತು ಮಹಾಜನಗಳನ್ನು ಈ ಪದ್ಯ ವರ್ಣಿಸುತ್ತದೆ.

ಮ.ಸ್ರ.॥ ಅಖಿಳೋರ್ವ್ವೀಸ್ತುತ್ಯರತ್ಯೂರ್ಜ್ಜಿತವಿಳಸಿತಧರ್ಮ್ಮ[1]ಶ್ಶಶಾಂಕಾಮರೇಂದ್ರೇ-
ಭಖಸಿಂಧೂದ್ಯತ್ತರಂಗೋತ್ಕರನಿಭರುಚಿರತ್ಕೀರ್ತ್ತಿ ಗರ್ವ್ವಿಷ್ಠದರ್ಪ್ಪಿ-
ಷ್ಠಖಳಪ್ರಧ್ವಂಸಕಬ್ಬಾಸುರಗುಣನಿಳಯುಶ್ಶಿಷ್ಟಸಂತರ್ಪ್ಪಣರ್ಷ್ಷ-
ಣ್ಮುಖಶೌರ್ಯ್ಯ**ದ್ರೋಣಿಕಾಗ್ರಾಮ**ದ ವರಧರಣೀದೇವತಾ-
ಸಂಕುಳಂಗಳ್ ॥೨೧೦॥

**ಸೆಟ್ಟಿಗುತ್ತರು**

ವಿನಯಾಳಂಕರಣರ್ವ್ವಿವೇಕನಿಳಯುಗಾಂಭೀರ್ಯ್ಯರತ್ನಾಕರ-
ವರ್ಮ್ಮಸುಮಾರ್ಗ್ಗಸ್ಸ್ವಜನೈಕಬಾಂಧವರಿಳಾಲೋಕಪ್ರಣೂತರ್ವ್ವಿಶಿ-
ಷ್ಟನಿಕಾಯಾಂಬುಜಷಂಡಚಂಡಕಿರಣದ್ರೋಣೀಪುರಾಂಭೋಧಿವ-
ರ್ದ್ಧನಚಂದ್ರರ್ಸ್ಸಲೆ **ಸೆಟ್ಟಿಗುತ್ತ**ರೆಸೆದರ್ವ್ವಿಶ್ವಂಭರಾಚಕ್ರದೊಳ್ ॥೨೧೧॥

ವ॥ ಮುನಿಚಂದ್ರಸಿದ್ಧಾಂತದೇವರ ಗುಡ್ಡಂ **ಡಾಯಿಮಯ್ಯ**[2] ಬರೆದ.

## ೪೮

**ಹುಣಸಿ ಹಡಗಲಿ,** **ಕ್ರಿ. ಶ. ೧೦೯೮**

ಕಲಬುರ್ಗಿ ಜಿಲ್ಲೆ **ಚಾಳುಕ್ಯ ೬ನೆಯ ವಿಕ್ರಮಾದಿತ್ಯ**

(ಜೈ. ಸೌ. ಇಂ. ಪು. ೨೫೩)

**ಹುತ್ತಡರಿದ ಮೆಯ್ಯ ಮಲಧಾರಿದೇವ**

ಚಂ॥ ಬಳಯುತರಂ ಬಳಲ್ಚುವ ಲತಾಂತಶರಂಗಿದಿರಾಗಿ ತಾಗಿ ಸಂ-
ಚಳಿಸಿ ಪಳಂಚಿ ತೂಳ್ದವನನೋಡಿಸಿ ಮೆಯ್ವ್ವೆಗೆಯಾದ ದೂಸಱಿಂ

---

1. ಶಶಾಂಕ (ಚಂದ್ರ)+ಅಮರೇಂದ್ರೇಭ (ಅಮರೇಂದ್ರ+ಇಭ: ಐರಾವತ)+ಖ. ಸಿಂಧೂ (ಆಕಾಶನದಿ: ಗಂಗಾ) ಉದ್ಯತ್ತರಂಗೋತ್ಕರ + ನಿಭರುಚಿರತ್ಕೀರ್ತಿ ( ಸದೃಶವಾಗಿ ಬೆಳಗುವ ಕೀರ್ತಿಯುಳ್ಳವರು).

2 ಡಾಯಿಮಯ್ಯನು ಶಾಸನಕವಿಯೆಂದು ತೋರುತ್ತದೆ.

ಕಳೆಯುದೆ ನಿಂದ ಕರ್ವುಣದ ಕಗ್ಗಿನ ಸಿಪ್ಪಿನಮರ್ಕ್ಕೆವೆತ್ತ ಕ-
ತ್ತಳವೆನಿಸಿತ್ತು ಪುತ್ತಡರ್ದ್ದ ಮೆಯ್ಯ ಮಲಂ **ಮಲಧಾರಿದೇವರ** ॥೨೧॥

**ವರ್ಷರ್ತುವರ್ಣನೆ**

ಅರ್ಹನಂದಿ ವ್ರತೀಂದ್ರನಿಗೆ ಮಳೆಗಾಲವು ಪಾದಪೂಜೆಗೆಯ್ಯುತ್ತಿತ್ತು.

ಮ.ಸ್ರ.॥ ಘನಜಾಳಂ ಧೂಪಧೂಮೋದ್ಗಮಮುದಕಕಣಂ ತಂಡುಲಂ ದೀರ್ಘಧಾರಾಂ-
ಬುನಿಪಾತಂ ಮಾಲೆ ವಿದ್ಯುತ್ಪ್ರತತಿ ಸೊಡರ್ಗ್ಗಳಬ್ದಸ್ವನಂ ಘಂಟಿಕಾನಿ-
ಸ್ವನಮಾಗಲ್ ವೃಕ್ಷಮೂಳವ್ರತನಿಯಮದೊಳಿರ್ದ್ದರ್ಹನಂದಿವ್ರತೀಂದ್ರಂ-
ಗೆ ನಿತಾಂತಂ ಪಾದಪೀಠಾರ್ಚ್ಚನೆಯನೆಸಗುವಂತಾದುದಂಭೋದಕಾಲಂ ॥

೪೮

**ಕುರುವತ್ತಿ,** **ಕ್ರಿ. ಶ. ೧೦೯೯**

**ಹರಪನಹಳ್ಳಿ ತಾಲೂಕು,** **ಚಾಳುಕ್ಯ ೬ನೆಯ ವಿಕ್ರಮಾದಿತ್ಯ**

ಬಳ್ಳಾರಿ ಜಿಲ್ಲೆ (ಸೌ.ಇಂ.ಇ. ೯, ಭಾ. ೧, ಪು. ೧೫೬)

ಪಶ್ಚಿಮ ಘಟ್ಟದ ಪೂರ್ವಪ್ರದೇಶದಲ್ಲಿದ್ದ ಬಯಲು ಸೀಮೆಯ ಜನರಲ್ಲಿ, ಹೊಳೆ ಪಶ್ಚಿಮ ಮುಖವಾಗಿ ಹರಿಯುವ ಸ್ಥಳ ಪವಿತ್ರವಾದುದೆಂಬ ಶ್ರದ್ಧೆಯಿದೆ. ಕುರುವತ್ತಿಯ ಬಳಿ ತುಂಗಭದ್ರೆ ಪಡುವಣ ಕಡೆ ಹರಿಯುತ್ತಿರುವುದರಿಂದಲೇ ಆ ನದಿ ದಕ್ಷಿಣದ ಭಾಗೀರಥಿ (ಗಂಗೆ) ಎನಿಸಿ, ಅದರ ದಡದಲ್ಲಿ ಸಾಕ್ಷಾತ್ ಸೋಮೇಶ್ವರನು ಉದ್ಭವಿಸಿದನೆಂದು ಈ ಶಾಸನ ಹೇಳುತ್ತದೆ. ಊರೊಡೆಯನೂ ಇನ್ನೂರ್ವರು ಮಹಾಜನರೂ ಆ ಎಡೆಗೆ ಹೋಗಿ, 'ಈ ದೇವರಿಗೆ ವೃತ್ತಿಗಳನ್ನು ಬಿಡುವಾ' ಎಂದು ಯೋಚಿಸುತ್ತಾರೆ. 'ಈ ಸ್ಥಾನಕ್ಕೆ, ಒಳ್ಳೆಯ ಸಮರ್ಥರೂ ಸುಶೀಲರೂ ಆದ ಆರ್ಯರೆ ಆಗಬೇಕು, ಅಂತಹರಿಂದ ಮಾತ್ರವೇ ಧರ್ಮ ಸರಿಯಾಗಿ ನಿರಂತರವಾಗಿ ನಡೆದೀತು' ಎಂದು ವಿಚಾರಿಸಿ, ಲಕುಳೀಶ್ವರರನ್ನು ಆಯ್ದು ನಿಯಮಿಸುತ್ತಾರೆ.

ಕೊನೆಯಲ್ಲಿಯ ಒಂದು ಕಂದ ಪದ್ಯದಲ್ಲಿ 'ಪ್ರಣೀತಶಾಸ್ತ್ರೋಕ್ತಿಯಿಂದೆ ಕಲುವೆಸನಂ ಲಕ್ಷಣಯುಕ್ತಮಾಗಿರಲು' ಎಂದಿರುವುದರಿಂದ, ಆಗ ವಾಸ್ತುಶಿಲ್ಪಶಾಸ್ತ್ರದ ಒಂದು ಪ್ರಸಿದ್ಧಗ್ರಂಥ-ವಿತ್ತೆಂದೂ ಅದಕ್ಕನುಸಾರವಾಗಿ ಗುಡಿ ಕಟ್ಟುವುದರಲ್ಲಿ 'ಗುಲುಗೋಜ'ನೆಂಬವನು ನಿಪುಣನಾಗಿದ್ದ-ನೆಂದೂ ತಿಳಿಯುತ್ತದೆ.

ಕೇವಲ ಕನ್ನಡ ಗದ್ಯ-ಪದ್ಯಾತ್ಮಕವಾದ ಈ ಶಾಸನಕಾವ್ಯದಲ್ಲಿ ಕವಿ ತನ್ನ ಹೆಸರನ್ನು ಮಾತ್ರ ಸಂಸ್ಕೃತ ಶ್ಲೋಕದಲ್ಲಿ ಹೇಳಿದ್ದಾನೆ. ಆದರಿಂದ, ಕಾಳಿದಾಸ ವಿಬುಧಾಪತಿಯ ಮಗನಾದ ಶ್ರೀಕಂಠಸೂರಿ ಇದನ್ನು ರಚಿಸಿದನೆಂದು ತಿಳಿಯುತ್ತದೆ, ಮತ್ತು ಅವನು ಉಭಯ ಭಾಷಾಕವಿಯಾಗಿದ್ದನೆಂದು ತೋರುತ್ತದೆ.

## ಅಗ್ರಹಾರ ಕುರುವತ್ತಿ

ಶ್ರೀಮತ್ಸುರೇಶ್ವರ ಪಣ್ಡಿತದೇವರು ಬೆಣ್ಣೆವೂರ್ಪನ್ನೆರಡುಮಂ ಸುಖದಿ-ನಾಳುತ್ತಮಿರೆ,

ಕಂ॥ ಆ ನಾಡೊಳಗ್ರಹಾರಂ
ಭೂನಾರೀಹಾರಮಧಿಕವಿಬುಧಾಧಾರಂ
ಶ್ರೀನಾರಿಗಿರಲಗಾರಂ
ಭೂನಿಧಿ **ಕುಱುವರ್ತ್ತಿ** ನೋಡೆ ಸೊಗಯಿಸುತಿರ್ಕ್ಕು ॥೨೧೪॥

ಇನ್ತು ನೆಗೞ್ದಗ್ರಹಾರಾ-
ಭ್ಯನ್ತಿಕದೊಳು ತುಂಗಭದ್ರೆ ಪಶ್ಚಿಮ ಮುಖದಿಂ
ಸನ್ತತವಾಹಿನಿಯೆನಲಿ-
ನ್ತಿನ್ತೆಂದೀ ಗ್ರಾಮವಿಭವಮಂ ಬಣ್ಣಿಪರಾರ್ ॥೨೧೫॥

## ಅಭಿನವ ಸೋಮೇಶ್ವರನ ಅವತರಣ

ಚಂ॥ ತ್ರಿಭುವನ ಸಂಭವ-ಸ್ಥಿತಿ-ಲಯಂಗಳಿಗೊರ್ವನೆ ಕರ್ತ್ತನೆಂದು ಸ-
ನ್ದ ಭವನಿಕಾಯಸಂಸರಣಘೋರಮಹಾರ್ಣ್ಣವ ಕರ್ಣ್ಣಧಾರನೆ-
ನ್ದಭಿನಯಿಪನ್ತೆ ದಕ್ಷಿಣಸುರಾಪಗೆಯೊಳ್[1] ನೆರೆಯಲ್ಕೆ ಬನ್ದನೊ-
ಲ್ದಭಿನವ ಸೋಮನಾಥನಮರೋತ್ಕರನಾಥನನಾಥನವ್ಯಯ ॥೨೧೬॥

ಕಂ॥ ಅಭಿನವ ಸೋಮೇಶೋದಯ
ಅಭಿಮತಫಳದಾನಧುರ್ಯ್ಯಮೆನ್ದಾದರದಿಂ
ಪ್ರಭು ಮೊದಲಾಗಿನ್ನೂರ್ವ್ವರು-
ಮಭಿನವಸೋಮೇಶ್ವರಾಶ್ರಮಕ್ಕೈತನ್ದರ್ ॥೨೧೭॥

ವ॥ ಬಂದನೇಶ್ವರನು ಭುವನಭಾಸ್ಕರನುಂ ವಿಶ್ವೇಶ್ವರನುಮಪ್ಪಭಿನವ-ಸೋಮೇಶ್ವರನಂ ಕಂಡು [2]ನಿಟಿಲತಟ ಪರಿಘಟಿತ ಕರಕಮಳಕುಟ್ಮಳರಾಗಿ[2] 'ನಾಮೀ ದೇವರ್ಗ್ಗಂಗಭೋಗಾದಿ ನಿಮಿತ್ತಮಾಗಿ ವೃತ್ತಿಯಂ ಬೀರುವಮಪ್ಪದಾ[3]ಯ್ಯರ್-ಮವಾರ್ಯ್ಯವೀರ್ಯ್ಯರುಮಚಳಿತಧೈರ್ಯ್ಯರುಂ ಬ್ರಹ್ಮಚರ್ಯ್ಯವ್ರತಧುರ್ಯ್ಯರು-ಮಪ್ಪಾಚಾರ್ಯ್ಯರಾಗಲ್ವೇಱ್ಕುಮನ್ತಪ್ಪವರಿನ್ದಮೀ ಧರ್ಮ್ಮಂ ಸ್ವಧರ್ಮ್ಮದಿಂನಡೆಗು-

1 ದಕ್ಷಿಣ + ಸುರ (ದೇವ) + ಅಪಗಾ (ಕೆಳಗೆ ಗಮಿಸುವುದು : ನದಿ): ದಕ್ಷಿಣ ಭಾಗೀರಥಿ.

2 ಹಣೆಯ ತಟದಲ್ಲಿ ಕೂಡಿಸಿದ ಕರಕಮಳದ ಮೊಗ್ಗುಳ್ಳವರಾಗಿ : ಹಣೆಯಬಳಿ ಕೈ-ಮುಗಿದುಕೊಂಡು.

3. ಹಾ ಇರಬಹುದೋ? : ಬೀರುವಂ (ಕೊಡುವಾ) + ಅಪ್ಪಡೆ + ಆಯ್ಯಂ....... ಆಗಲ್ವೇಱ್ಕುಂ.

ಮನ್ತ್ರಪ್ರವರುಮಿೂ ಕಲಿಕಾಲದೊಳು ಕಲಿಕಾಲಭಯಪಳಾಯಿತ ಧರ್ಮ್ಮಾಚರಣರುಂ ಗುರುಕುಳ ಸಮುದ್ಧರಣರುಂ **ಕಶ್ಮೀರದೇವಸನ್ತಾನ** ವಾರ್ದ್ಧಿವರ್ದ್ಧನಸುಧಾಕರರು-ಮಮಳಗುಣಾಕರರುಮಪ್ಪ **ಲಕುಳೀಶ್ವರ**ಪಂಡಿತರ್—

ಕಂ|| ಗುಣಪಾ....ರ್ಯ್ಯ-
ಪ್ರಣೀತಶಾಸ್ತ್ರೋಕ್ತಿಯಿಂದೆ **ಕಲುವೆಸನಂ** ಲ-
ಕ್ಷಣಯುಕ್ತಮಾಗಿರಲು ಧಾ-
ರಿಣಿಯೊಳು **ಗುಲುಗೋಜ**ನಜೀವನೆನ್ದೆಳೆ ಪೊಗಳ್ಗುಂ ||೨೧೮||

೪೯

## ಚಿಕ್ಕಹಂದಿಗೋಳ, ಗದುಗು ತಾಲೂಕು, ಧಾರವಾಡ ಜಿಲ್ಲೆ

## ಕ್ರಿ.ವ. ೧೦೯೯ ಚಾಳುಕ್ಯ ೬ನೆಯ ವಿಕ್ರಮಾದಿತ್ಯ

(ಸೌ.ಇಂ.ಇ. ೧೧, ಪು. ೧೭೮)

ಕೊನೆಯ ಕಂದಪದ್ಯದಿಂದ, ಮಲ್ಲ ಎಂಬ ಕವಿ ಈ ಶಾಸನವನ್ನು ಬರೆದಂತೆ ತಿಳಿಯು-ತ್ತದೆ. ಅವನು ತನ್ನ (ಪದ್ಯವು) ದ್ರುಹಿಣನ ರಚನೆಗೂ ಗದ್ಯವು ಬಾಣಕವಿಯ ಗದ್ಯಕ್ಕೂ ಒರೆಗೆ ಹತ್ತಿ ನಿಂತುವೆಂದು ಹೇಳಿಕೊಂಡಂತಿದೆ. ಪ್ರತಿಕಂಠ ಚಂದನಿಗೆ ಮಲ್ಲನೆಂಬ ತಮ್ಮನೊಬ್ಬನಿದ್ದನೆಂದು ಇದೇ ಶಾಸನದಲ್ಲಿ ಬಂದಿದೆ. ಆತನೇ ಶಾಸನಕವಿಯಾಗಿರಲೂಬಹುದು.

ಈಗಿನ ಚಿಕ್ಕ ಹಂದಿಗೋಳ ಆಗ ಕಿಱಿಯ ಪಂದಿಗೊಳ ಎಂದು ಎನಿಸಿತ್ತು. ಇದನ್ನು ೬೪ ಜನ ಬ್ರಾಹ್ಮಣರು (ಅಗ್ರಹಾರವಾಗಿ) ಪಡೆದಿದ್ದರು. ಇಲ್ಲಿ ಬಹುಜನ ಛಾತ್ರರು ವೇದಾ-ಧ್ಯಯನ ಮಾಡುತ್ತಿದ್ದರು. ಕಲಿಸಲು ಅನೇಕ ಪಂಡಿತರಿದ್ದರು.

### ಪ್ರತಿಕಂಠ ಚಂದ

ಇವನೊಬ್ಬನು ಚತುರನಿಯೋಗಿ. 'ನಿಯೋಗದಲ್ಲಿ ತಾವೇ ಹೆಚ್ಚಿನವರೆಂದು ಯಾರು ಎಷ್ಟು ಹೆಮ್ಮೆಯಿಂದ ಹೇಳಿಕೊಂಡರೇನು, ಪ್ರ.ಕಂಠ ಚಂದನಿಗಿಂತ ಹಿರಿಯರೇ?' ಎಂದು ಅನೇಕ ವಿಷಯ-ಗಳನ್ನೆತ್ತಿ ಪ್ರಶ್ನಿಸಿ ಕವಿ ಈತನ ಹೆಚ್ಚಳವನ್ನು ಎತ್ತಿ ತೋರಿಸಿದ್ದಾನೆ. ಚಂದನ ಮಾತೆಂದರೆ ಜೊಳ್ಳಾದುದಲ್ಲ, ಅನೇಕರನ್ನು ರಕ್ಷಿಸುವಂತಹದು, ರಾಜಸಭೆಯನ್ನು ಅಲಂಕರಿಸುವಂತಹದು, ಒಡೆಯನನ್ನು ಮೇಲೆತ್ತಿ ನಿಲಿಸುವಂತಹದಾಗಿತ್ತು.

ಚಂ|| ಪಿರಿಯ ನಿಯೋಗದೊಳ್ನಡೆದೆವೆಂಬ ನಿಯೋಗಿಗಳೆಲ್ಲಮೆಲ್ಲಿಯುಂ
ಪಿರಿಯರೆಮೆನ್ದು ಪೆರ್ಮೆಗೆ ಕಡಂಗಿದೊಡಂ ಪ್ರತಿಕಣ್ಠ ಚನ್ದನಿಂ
ಪಿರಿಯರೆ ನೀತಿಮನ್ತರೆ ಮಹಾಮತಿಮನ್ತರೆ ಮಿಕ್ಕ ಪುಣ್ಯಮ-
ನ್ತರೆ ಸಲೆ ಸತ್ಯಮನ್ತರೆ ಕರಂ ಗುಣಮನ್ತರೆ ಕಾನ್ತಿಮನ್ತರೇ ||೨೧೯||

ಪರಿಕಿಪೊಡೆಲ್ಲರಕ್ಕರಮುಮಕ್ಕರಮೋ ಪ್ರತಿಕಣ್ಠ ಚನ್ದನ-
ಕ್ಕರಮೆ ನೆಗರ್ತ್ತೆಯಕ್ಕರಮನೇಕರುಮಂ ಪೊರೆವಕ್ಕರಂ ಮಹೀ-
ಶ್ವರರ ಸಭಾನ್ತರಾಳಮನಳಂಕರಿಪಕ್ಕರಮೆನ್ತುಮಾಳ್ದನಂ
ಪಿರಿಯದಗುನ್ತಿಯೊಳ್ನಿಲಿಸುವಕ್ಕರಮುಪ್ಪರವಟ್ಟದಕ್ಕರ ||೨೨೦||

ಕಂ|| ದ್ರುಹಿಣವಿನಿರ್ಮ್ಮಿತಮೆನೆ..
..ಣಯುತಂ ಬಾಣಗದ್ಯ[ವಾ]ಲಿಖಿತಪಿತಾ-
ಮಹನೆನ್ದೊರೆಯೊಳೊಪ್ಪಿರ[1]-
ಲಹರ್ಣ್ನಿಶಂ[2] ಬರೆದನೆ....ಯ ಮಲ್ಲಂ ||೨೨೧||

## ೫೦

## ಶ್ರವಣಬೆಳುಗೊಳ, ಕ್ರಿ. ಶ. ಸು. ೧೧೦೦

**ಚೆ. ರಾ. ಪಟ್ಟಣ ತಾಲೂಕು,**

ಹಾಸನ ಜಿಲ್ಲೆ (ಎಪಿ.ಕ. ೨, ಪು. ೪೦)

**ಗೋಪನಂದಿ**

ಇವನು ಜೈನಯತಿ. ಯಾರುಯಾರಿಗೂ ಅಸಾಧ್ಯವಾಗಿ, ಹಲವು ಕಾಲದಿಂದ ಆಗದೆ ನಿಂತುಬಿಟ್ಟಿದ್ದ ಜಿನಧರ್ಮವನ್ನು, ಈತನು ಗಂಗರಾಜರಿಂದ ರೂಢಿಮಾಡಿಸಿದನೆಂಬ ಉಲ್ಲೇಖ ಇಲ್ಲಿಯ ಒಂದು ಪದ್ಯದಲ್ಲಿದೆ. ಇನ್ನೊಂದು ಪದ್ಯ, ಕನ್ನಡ ಸಾಹಿತ್ಯದಲ್ಲಿ ಬಳಕೆಯಲ್ಲಿ ಅಪರೂಪವಾಗಿದ್ದ ಕಿರಿಯ ಅಕ್ಷರ ವೃತ್ತದಲ್ಲಿರುವುದು.

ಉ.ಮಾ || ತುಂಗಯಶೋಭಿರಾಮನಭಿಮಾನಸುವರ್ಣ್ನಧರಾಧರಂ ತಪೋ-
ಮಂಗಳ ಲಕ್ಷ್ಮಿವಲ್ಲಭನಿಳಾತಳವಂದಿತ ಗೋಪನಂದಿಯಾ-
ವಂಗಮಸಾಧ್ಯಮಪ್ಪ ಪಲಕಾಲದ ನಿಂದ ಜಿನೇಂದ್ರಧರ್ಮ್ಮಮಂ
**ಗಂಗನೃಪಾಳರಿಂ**ದಿನ ವಿಭೂತಿಯ ರೂಢಿಯನೆಯ್ದೆ ಮಾಡಿದಂ ||

ಏನನೇನನೆಲೆ ಪೇಳ್ವೆನಣ್ಣ ಸ-
ನ್ಮಾನದಾನಿಯ ಗುಣವ್ರತಂಗಳಂ

---

1. ಈ ಸಾಲಿನಲ್ಲಿ ಒಂದು ಮಾತ್ರೆ ಕಡಿಮೆಯಿದೆ. ಬಹುಶಃ 'ಮಹನೆನ್ದು ದೊರೆ (ಅಥವಾ ಧರೆ)ಯೊಳೊಪ್ಪಿರ' ಎಂದಾಗಬೇಕಿತ್ತೋ ಏನೋ.

2. ಅಹರ್ಣ್ನಿಶಂ: ಅಹರ್ನಿಶಂ: ಹಗಲು ರಾತ್ರಿ; ಒಂದು ಹಗಲು ಒಂದು ರಾತ್ರಿಯಲ್ಲಿ.

ದಾನಶಕ್ತಿಯಭಿಮಾನಶಕ್ತಿ ವಿ-
ಜ್ಞಾನಶಕ್ತಿ ಸಲೆ **ಗೋಪನಂದಿ**ಯ ||೨೨||

## ೫೧

**ಅಬಲೂರು,** **ಕ್ರಿ. ಶ. ೧೧೦೧**
**ಹಿರೆಕೆರೂರು ತಾಲೂಕು,** **ಚಾಳುಕ್ಯ ೬ನೆಯ ವಿಕ್ರಮಾದಿತ್ಯ**
ಧಾರವಾಡ ಜಿಲ್ಲೆ (ಎಪಿ. ಇಂ. ೫, ಪು. ೨೧೮)

**ಕೇದಾರಶಕ್ತಿಯತಿ**

ಶ್ರೀಮದಬ್ಬಲೂರೇಚಗಾವುಂಡನ ಗುರುಗಳ್ ಶ್ರೀಸೋಮೇಶ್ವರ ಪಂಡಿತ ದೇವರಜ್ಜಗುರುಗಳ[1] ತಪಃಪ್ರಭಾವವೆಂತೆಂದೊಡೆ

ಕಂ|| ಧರೆಗೆಸೆವ ಶಕ್ತಿಪರ್ಷೆಗೆ
ಕರಮುಗ್ರಣಿಯೆನಿಪ ಪರ್ವ್ವತಾವಳಿಯೊಳ್ **ಮೂ-**
**ವರ ಕೋಣೆಯ ಸಂತತಿ**ಗಾ-
ಭರಣಂ ಕೇದಾರಶಕ್ತಿ ಯತಿಪತಿ ನೆಗಳ್ದಂ ||೨೩||

**ಶ್ರೀಕಂಠದೇವ** (ಕೇದಾರಶಕ್ತಿಯ ಶಿಷ್ಯ)

ಮ.ಸ.||ಹರಪಾದಾಂಭೋಜದೊಳ್ ಚಿತ್ತಮನೆಸೆವ ಮುಖಾಂಭೋಜದೊಳ್ ಭಾರತೀಸೌಂ-
ದರಮಂ ಚಾರಿತ್ರದೊಳ್ ನಿರ್ಮ್ಮಳತೆಯನಖಿ[2]ಳಾಶಾಂತದೊಳ್[3] ಶಕ್ರದಿಕ್ಕುಂ-
ಜರಭಾಸ್ವತ್ಕೀರ್ತ್ತಿಯಂ [4]ಬಾಪ್ಪುರೆ ನಿಲಿಸಿದನುದ್ಯದ್ಗುಣೌಘಂ[4] ಮುನೀಂದ್ರಾ-
ಭರಣಂ **ಶ್ರೀಕಂಠದೇವಂ** ಬುಧಜನತಿಲಕಂ ತರ್ಕ್ಕವಿದ್ಯಾಸಮುದ್ರಂ ||

---

1. ಅಜ್ಜಗುರು : ಗುರುವಿನ ಗುರು; ವಂಶದ ಪೂರ್ವಜರನ್ನು ಹೇಳುವಾಗ ಪ್ರಪಿತಾಮಹ, ಪಿತಾಮಹ, ಪಿತೃ ಎಂದು ಹೇಳುವಂತೆ ಗುರುಪರಂಪರೆಯನ್ನು ಹೇಳುವಾಗಲೂ ಹೇಳುವುದು ವಾಡಿಕೆಯಾಗಿರುವದು.

2. ಶಾ. ಮೂ.: ಳಾಂಶಾಂತದೊಳ್

3. ಶಕ್ರ (ಇಂದ್ರ) ದಿಕ್ (ದಿಶಾ) ಕುಂಜರ (ಆನೆ : ಐರಾವತ) ದಂತೆ ಶುಭ್ರವಾಗಿ ಬೆಳಗುವ ಕೀರ್ತಿಯುಳ್ಳವ.

4-4. ಪಾಠಾಂತರ—ಚಿತ್ತರದೆ ನಿಲಿಸಿದಂ ಸದ್ಗುಣಾಢ್ಯಂ

## ಎಲ್ಲವನ್ನೂ ಬಲ್ಲ ಸೋಮೇಶ್ವರ ಸೂರಿ

ತರ್ಕ, ಆಪ್ತಾಲಾಪಸಂಬೋಧೆ, ನಾಟಕ, ಒಳ್ಗಬ್ಬ, ವ್ಯಾಕರಣ—ಇವುಗಳಲ್ಲಿ ಒಂದೊಂದು ವಿಷಯವನ್ನು ಅರಿತವರು ಕೆಲಕೆಲವರಿರಬಹುದು. ಇವೆಲ್ಲವನ್ನೂ ಬಲ್ಲವನೆಂದರೆ ಶ್ರೀಕಂಠದೇವನ ಶಿಷ್ಯ ಸೋಮೇಶ್ವರ ಸೂರಿಯೊಬ್ಬನೇ, ಬೇರೊಬ್ಬರಿಲ್ಲ ('ಎಲ್ಲ ಬಲ್ಲವರಿಲ್ಲ' ಎಂದು ಹಾಡಿದ ಸರ್ವಜ್ಞನ ಊರಲ್ಲಿಯೇ ಈತನೊಬ್ಬ ಎಲ್ಲ ಬಲ್ಲವನಿದ್ದನು) ಎಂದು ಶಾಸನವು ಕೀರ್ತಿಸುತ್ತಿದೆ.

ಮ. ವಿ॥ ಕೆಲಬರ್ತರ್ಕ್ಕವಿಶಾರದರ್ಕ್ಕೆಲಬರಾಪ್ತಾಲಾಪಸಂಬೋಧಕ-
ರ್ಕ್ಕೆಲಬರ್ನ್ನಾಟಕಕೋವಿದರ್ಕ್ಕೆಲಬರೊಳ್ಗಬ್ಬಂಗಳಂ ಬಲ್ಲವ-
ರ್ಕ್ಕೆಲಬರ್ವ್ಯಾಕರಣಜ್ಞರಿಂತಿನಿತುಮಂ [1]ಬಲ್ಲನ್ನರಿಲ್ಲೆಲ್ಲಮಂ
ಸಲೆ **ಸೋಮೇಶ್ವರಸೂರಿ** ಬಲ್ಲನನಘಂ ನಯ್ಯಾಯಿಕಾಗ್ರೇಶ್ವರಂ[1] ॥೨೨॥

### ೫೨

ಲಕ್ಷ್ಮೇಶ್ವರ, **ಶಿರಹಟ್ಟಿ ತಾಲೂಕು,** ಧಾರವಾಡ ಜಿಲ್ಲೆ

ಕ್ರಿ. ಶ. ೧೧೦೨ **ಚಾಳುಕ್ಯ ೬ನೆಯ ವಿಕ್ರಮಾದಿತ್ಯ** (ಎ. ಪಿ. ಇಂ. ೧೬, ಪು. ೩೨)

## ಭೀಮ ದಣ್ಡಾಧಿಪ

ಹಲಸಿಗೆ ೧೨೦೦೦ನ್ನೂ ಸಪ್ತಾರ್ಧಲಕ್ಷ (ಈ ಪದವು ಕುಂತಳದ ವ್ಯಾಪ್ತಿಯ ಸೂಚಕ) ದೇಶದ ಅಚ್ಚುಪನ್ನಾಯವನ್ನೂ ಈತನು ಆಳುತ್ತಿದ್ದನು. ಪ್ರಭುಶಕ್ತಿ (ಆಳುವ ಶಕ್ತಿ), ಮಂತ್ರ ಶಕ್ತಿ, ಉತ್ಸಾಹಶಕ್ತಿ—ಈ ಶಕ್ತಿತ್ರಯವು ಈತನಲ್ಲಿ ಅಳವಟ್ಟಿತ್ತು.

ಮ. ವಿ.॥ ಧುರದೊಳ್ತಾನೆ ಧುರಂಧರಂ ಸಮುಚಿತಾಪ್ತಾಳೋಚನಾಗ್ರೇಸರಾಂ-
ತರದೊಳ್ತಾನೆ ಸಮಗ್ರಮಂತ್ರಿ ಪೆಱರಿಲ್ಲೆಂದಿಂತು ಕಾರುಣ್ಯದಿಂ
ಪೊರೆದಾಳ್ದಂ ಚರಿತಕ್ಕೆ ಮೆಚ್ಚಿ ಪಿರಿದುಂ ಕೊಣ್ಡಾಡೆ ದಣ್ಡಾಧಿನಾ-
ಥರೊಳಿಂತೊರ್ವ್ವನೆ ಜೀಯ ಬಾಪ್ಪೆನಿಸಿದಂ ಶ್ರೀ**ಭೀಮ ದಣ್ಡಾಧಿಪಂ** ॥

## ಅತ್ಯುನ್ನತನಾದ ಮಾಧವ ದಣ್ಡನಾಯಕ

ಈತನು ಭೀಮ ದಣ್ಡಾಧಿಪನ ಪನ್ನಾಯಸುಂಕದ ಅಧಿಷ್ಠಾಯಕನು. ಅನೇಕ ನಿರ್ಗುಣ-ರನ್ನು ನಿರ್ಮಿಸಿದ ತಪ್ಪಿಗೆ ಬ್ರಹ್ಮನು ಅತ್ಯುನ್ನತನಾದ ಈ ಮಾಧವನನ್ನು ಹುಟ್ಟಿಸಿ ಪ್ರಾಯಶ್ಚಿತ್ತ ಮಾಡಿದನಂತೆ.

ಕಂ ॥ ಅಭಿಮಾನಮೇರು ವಿತರಣ-
ವಿಭೂಷಣಂ ಧರ್ಮ್ಮಧರ್ಮ್ಮರಾಜತನೂಜಂ

---

1-1 ಪಾಠಾಂತರ—ಬಾಪ್ಪಿಂತು ವಿಶ್ವಂಭರಾ ತಳದೊಳ್ ಬಲ್ಲವರಾರೆನಲ್ಕೆ ನೆಗಬ್ದಂ ವಿದ್ಯಾಬ್ಧಿ ಸೋಮೇಶ್ವರಂ॥

ವಿಭವೈಕದಿವಿಜರಾಜಂ
ಪ್ರಭುಮಂತ್ರೋತ್ಸಾಹಶಕ್ತಿಗುಣಸಂಪಂನ ॥೨೨೮॥

ಚಂ ॥ ಕದನದೊಳಾಂತರಂ ತುಳಿದು ಕೊಲ್ವೆಡೆಯೊಳ್ ಲಯಕಾಳಕಾಳನೆಂ-
ಬುದು ಬಡಪಟ್ಟು ಬೇಡಿದವರ್ಗ್ಗೀವಡೆ ಜಂಗಮಕಲ್ಪವೃಕ್ಷಮೆಂ-
ಬುದು ಶರಣೆಂದು ಬಂದೆಳಸೆ ಕಾವೆಡೆಯೊಳ್ ದೃಢ[1]ವಜ್ರಗೇಹಮೆಂ-
ಬುದು ಮನದಕ್ಕಱಿಂ ವಿಬುಧಮಂಡಳಿ ಮಾಧವದಣ್ಣನಾಥನಂ ॥೨೨೯॥

ಕಂ ॥ ಮತ್ತಿನ ನಿರಸ್ತಗುಣರನ-
ನುತ್ತಮರಂ ಪಡೆದುದರ್ಕ್ಕೆ ಧಾತ್ರಂ ಪ್ರಾಯ-
ಶ್ಚಿತ್ತಂಗೆಯ್ದಂ ಪಡೆದು ಬು-
ಧೋತ್ತಮನಂ ಮನುಚರಿತ್ರನಂ **ಮಾಧವನ** ॥೨೩೦॥

ಮ ವಿ.॥ ದಯೆಯೊಳ್ಧರ್ಮ್ಮದೊಳಾಪ್ಪಿನೊಳ್ ವಿಭವದೊಳ್ಗಾಂಭೀರ್ಯ್ಯದೊಳ್ ಧೈರ್ಯ್ಯದೊಳ್
ನಯದೊಳ್ ಚಾರುಚರಿತ್ರದೊಳ್ ವಿನಯದೊಳ್ ಚಾತುರ್ಯ್ಯದೊಳ್ ಶೌರ್ಯ್ಯದೊಳ್
ನಿಯತಾಚಾರದೊಳೊಳ್ಪಿನೊಳ್ ಬಹುಕಳಾವಿಜ್ಞಾನದೊಳ್ತಾನೆ ಧಾ-
ತ್ರಿಯೊಳತ್ಯುನ್ನತನಾದ**ನೂರ್ಜ್ಜಿತಯಶೋಲಕ್ಷ್ಮೀಧವಂ ಮಾಧವಂ**॥

## ೫೩

## ಕುರುವತ್ತಿ, ಹರಪನಹಳ್ಳಿ ತಾಲೂಕು, ಬಳ್ಳಾರಿ ಜಿಲ್ಲೆ

## ಕ್ರಿ. ವ. ೧೧೦೮ ಚಾಳುಕ್ಯ ಒನೆಯ ವಿಕ್ರಮಾದಿತ್ಯ

(ಸೌ. ಇಂ. ಇ. ೯, ಭಾ. ೧, ಪು. ೧೬೩)

### ಚಕ್ರವರ್ತಿಯ ಒಂದು ತೀರ್ಪು

ಚಾಳುಕ್ಯ ವಿಕ್ರಮನ ದಂಡನೀತಿಯ ಒಂದು ಮಾದರಿ ಈ ಶಾಸನದಲ್ಲಿದೆ. ಆ ವಿಕ್ರಮ ರಾಜನು ಪ್ರಜಾಪೀಡಕನಾದ ಬೊಪ್ಪಯನ ಮನ್ನೆಯತನವನ್ನು ಕಸಿದುಕೊಂಡು, ಆತನಿಂದ ಸ್ವಸಮ್ಮತಿಯ ತ್ಯಾಗಪತ್ರವನ್ನು ಬರೆಯಿಸಿ, ಅದರಂತೆ ಹಲವಾರು ಸ್ಥಳಗಳಲ್ಲಿ ಶಿಲಾಶಾಸನಗಳನ್ನು ನಡಿಸಿದನೆಂದು ಇಲ್ಲಿ ಹೇಳಿದೆ. ಬೊಪ್ಪನು ಪ್ರತಿಜ್ಞಾಪತ್ರವನ್ನು ಬರೆದುಕೊಟ್ಟು ಅಧಿಕಾರವನ್ನು ಬಿಟ್ಟುಕೊಟ್ಟುದೂ, ಇದನ್ನು ಶಾಸನ ಮಾಡಿಕೊಡುವುದಕ್ಕೆ 'ತ್ರಿಪುರಾಂತಕನ ಬಳಿ ನೀರಂ ಕುಡಿದು' ಒಡಂಬಟ್ಟುದೂ ಗಮನಾರ್ಹವಾಗಿವೆ.

---

1 ಶಾ. ಮೂ. ದ್ರಿಡ

ವ॥ ಚಾಳು[1]ಕ್ಯ ವಿಕ್ರಮವರ್ಷದ ೫ನೆಯ ತಾರಣ ಸಂವತ್ಸರದ ವೈಶಾಖ ಶುದ್ಧ ತದಿಗೆ ಆದಿತ್ಯವಾರದಂದು, ಅಗ್ರಹಾರಂ ಗಂಡರಾದಿತ್ಯನ ಹೊಟಿಲ ಮಹಾಜನಂಗಳು[2] ಮನ್ನೆಯಂ ಬೊಪ್ಪಯಂ ಹೊಳಲನಿಱಿದು ಸರ್ವ್ವಸ್ವಹರಣಂ ಮಾಡಿ ಸೂರೆಗೊಂಡುದುಮಂ ಬ್ರಾಹ್ಮಣರಂ ಕೊಂದುದುಮಂ ಚಕ್ರವರ್ತ್ತಿಗೆ ಬಿನ್ನಪಂಗೆಯ್ಯಲು,

ಕೇಟ್ಟ್ವಧಾರಿಸಿ[3], ಬೊಪ್ಪನಂ ದಂಡಿಸಿ, ಸಮಸ್ತಪ್ರಧಾನರ ಸಂನಿಧಾನದಲು ಆ ಅಗ್ರಹಾರಕ್ಕೆ ಮುಂನೆಯರಾರುವಿಲ್ಲದನ್ತಾಗಿ ನಿಯಾಮಿಸಿ ಕುಡಿವೆನ್ದು[4] ಪ್ರಧಾನರ್ಗ್ಗಂ ಶ್ರೀಮನು ಮಲೆಯಾಳ[5]ಪಂಡಿತದೇವರ್ಗ್ಗಂ ಸೋಮೇಶ್ವರಭಟ್ಟಯಂಗಳಿಗಂ ಚಕ್ರವರ್ತ್ತಿ ಬೆಸಸಲನಿಬರುವಿಟ್ಟ್ದು ಬೊಪ್ಪನಂ ಕರೆದು, ನೀನುಂ ನಿನ್ನ ವಂಶದವರುಂ ಹೊಟಿಲ ಮನ್ನೆಯಮಂ ಮಾಣ್ಬುದೆನ್ದು ಮಾಣಿಸಲಾತನುವನ್ತೆ ಗೆಯ್ವೆನೆನ್ದು **ಆಣೆಪತ್ರಮಂ ಕೊಟ್ಟು**, ತ್ರಿಪುರಾಂತಕದೇವರ ಬಳಿ ನೀರಂ ಕುಡಿದೀ ಪಡಿಯಲ್ ಶಾಸನಮಂ ಕುಡು[6]ವನ್ತಾಗಿಯೊಡಂಬಟ್ಟು ಬಂದನಾ ಕ್ರಮದಲೆ ಮಲೆಯಾಳ ಪಂಡಿತದೇವರುಂ ತಾನುವಿಟ್ಟ್ದು ಮನ್ನೆಯಮಂ ಬಿಟ್ಟು, ಬೆಂಣೆವೂರು ಹನ್ನೆರಡಱ ಪ್ರಭುಗಾವುಣ್ಡುಗಳ ನೀರಗುಂದದ, ಎರಡುಂ ಹಡಂಗಿಲೆಯ, ಮಾಂಗೊಟಿದ, ಬಿದಿರಹಳ್ಳಿಯ, ಹಹನೂರ(ಹಾವನೂರ?),ಹೊನ್ನವತ್ತಿ, ಕುಱುವತ್ತಿಯ, ಬಾಳ್ಗಟಿಯನ್ತು ಮೂವತ್ತಿಚ್ಛಾಸಿರದ ಸನ್ನಿಧಾನದಲು **ತ್ರೈಳೋಕ್ಯಮಲ್ಲೇಶ್ವರ ದೇವರ** ಮುನ್ತೆಯುಂ **ಹೊಟಿಲ**ಲುಂ ಶಾಸನಮಂ ನಿಲಿಸಿದಂ.

೫೪

## ಕರಿಗುದರಿ, ಹಾನುಗಲ್ಲು ತಾಲೂಕು, ಧಾರವಾಡ ಜಿಲ್ಲೆ

## ಕ್ರಿ. ಶ. ೧೧೧೮ ಚಾಳುಕ್ಯ ೬ನೆಯ ವಿಕ್ರಮಾದಿತ್ಯ (ಇಂ. ಅಂ. ೫೦. ೧೧)

ಕದಂಬ ಕುಳವನ್ನು ಸ್ಥಾಪಿಸಿದ ಮಯೂರವರ್ಮನು ಸಾಕ್ಷಾತ್ ಶಿವನಿಗೂ ಭೂದೇವಿಗೂ ಜನಿಸಿದವನೆಂದು– ದೇವಸಂಭೂತನೆಂದು– ಪ್ರವಾದವಿದ್ದುದು ಇಲ್ಲಿ ಉಲ್ಲೇಖಿತವಾಗಿದೆ. ಹಿಮಾಲಯದಲ್ಲಿ ಸ್ಫಟಿಕಸ್ತಂಭಕ್ಕೆ ಈತನು ಆನೆಯನ್ನು ಕಟ್ಟಿದನೆಂದೂ ಹದಿನೆಂಟು ಅಶ್ವಮೇಧ ಯಾಗಗಳನ್ನು ಮಾಡಿದನೆಂದೂ ಅಹಿಚ್ಛತ್ರದಿಂದ ಬ್ರಾಹ್ಮಣರನ್ನು ಕರೆತಂದು ಕುಂತಳದೇಶದಲ್ಲಿ ನೆಲೆಗೊಳಿಸಿದನೆಂದೂ ಇಲ್ಲಿ ಹೇಳಿದೆ. ಮಯೂರವರ್ಮನ ತರುವಾಯ ಆ ವಂಶದ ದೊರೆಗಳ ಪ್ರಶಸ್ತಿಮಾಲಿಕೆ ಅವನ ಈ ಭೂಷಣಾಸ್ಪದವಾದ ಕೃತಿಗಳಿಂದ ಅಲಂಕೃತವಾಗಿದೆ.

---

1, 2. ಶಾ. ಮೂ. ೞು

3. ಕೇಳ್ದವಧಾರಿಸಿ ಎಂದಿರಬೇಕಾಗಿತ್ತು.

4. ಕುಡಿಂ+ಎನ್ದು

5 ಶಾ. ಮೂ. ೞ

6. ಶಾ. ಮೂ. ಕುಂದು

ಶಾಸನದ ಕೊನೆಯಲ್ಲಿ ' ನೀಲಕಂಟ ಪಂಡಿತದೇವರ ಮಗ ಬಮ್ಮಣಪಂಡಿತ ದೇವರು ' ಎಂದಿರುವುದು ಶಾಸನಕವಿಯ ಹೆಸರಿರಬಹುದು.

## ಕದಂಬಕುಲಸ್ಥಾಪಕ ಮಯೂರವರ್ಮ

ಕಂ|| ಶ್ರೀಮಚ್ಛಶಾಂಕಮೌಳಿಗ-
ವೀ ಮಹಿಗಂ ಜನಿಸಿ ಸಕಲರಿಪುನೃಪರಂ ಗೆ-
ಲ್ದಾ ಮಹಿಮಾಸ್ಪದನೆನಿಪು-
ದ್ದಾಮಯಶಂ ಶ್ರೀಮಯೂರವರ್ಮ್ಮಂ ನೆಗಳ್ದಂ ||೨೩||

ಮ.ವಿ.||ಹಿಮವನ್ತಸ್ಫಟಿಕಶ್ಶಿಳಾತಳದ ಶುಂಭಸ್ತಂಭದೊಳ್ ಕಟ್ಟಿದಂ
ಸಮದೇಭಂಗಳನಶ್ವಮೇಧಮೆನಿಪೀ ಯಜ್ಞಂಗಳಂ ಮಾಡಿದಂ
ಕ್ರಮದಿಂದಂ ಪದಿನೆಂಟನಾ ದ್ವಿಜರುಮಂ ತಾನಂದಹಿಚ್ಛತ್ರದಿಂ-
ದಮೆ ತನ್ದೆಯ್ದೆ ಸ[1] ಕುನ್ತಳಾವನಿಯೊಳಂ ಸಂಸ್ಥಾಪ್ಯಮಂ ಮಾಡಿ ವಿ-
ಕ್ರಮಮಂ ತಾಳ್ದಿ **ಮಯೂರವರ್ಮ್ಮ**ನೆಸೆದಂ ವಿಶ್ವಂಭರಾಭಾರದೊಳ್||[2]

## ಕದಂಬ(ಮಂಡಳೇಶ್ವರ)ರ ಬಿರುದಾವಳಿ

ಸ್ವಸ್ತಿ ಸಮಧಿಗತಪಂಚಮಹಾಶಬ್ದ ಮಹಾಮಣ್ಡಳೇಶ್ವರಂ ಬನವಾಸೀ-ಪುರವರಾಧೀಶ್ವರಂ ಜಯನ್ತೀಮಧುಕೇಶ್ವರದೇವಲಬ್ಧವರಪ್ರಸಾದಂ ಮೃಗಮದಾ-ಮೋದಂ/ ತ್ರ್ಯಕ್ಷಕ್ಷ್ಮಾಸಂಭವಂ ಚತುರಾಶೀತಿನಗರಾಧಿಷ್ಠಿತಲಲಾಟಲೋಚನ ಚತುರ್ಬ್ಭುಜಂ ಜಗದ್ವಿದಿತಾಷ್ಟಾದಶಾಶ್ವಮೇಧಯಜ್ಞದೀಕ್ಷಾದೀಕ್ಷಿತಂ ಹಿಮವದ್ಗಿ-ರೀಂದ್ರರುಂದ್ರಶಿಖರಶಕ್ತಿ ಸಂಸ್ಥಾಪಿತ ಸ್ಫಟಿಕಶಿಳಾಸ್ತಂಭಬದ್ಧಮದಗಜಮಹಾಮಹಿ-ಮಾಭಿರಾಮಂ ಕದಂಬಚಕ್ರಿ ಮಯೂರವರ್ಮ್ಮ ಮಹಾಮಹೀಪಾಳಕುಳಭೂಷಣಂ ಪೆರ್ಮ್ಮಟ್ಟಿ ತೂರ್ಯ್ಯನಿರ್ಗ್ಘೋಷಣಂ/ ಶಾಖಾಚರೇಂದ್ರಧ್ವಜವಿರಾಜಮಾನೋತ್ತುಂಗ ಸಿಂಹಲಾಂಛನಂ ದತ್ತಾರ್ತ್ಥಿಕಾಂಚನಂ ಸಮರಜಯಕಾರಣಂ ಕದಂಬರಾಭರಣಂ ಮಾಕರ್ಣ್ನೇಳ್ವರ ಗಣ್ಡಂ ಪ್ರತಾಪಮಾರ್ತ್ತಣ್ಡಂ ನಾಮಾವಳೀವಿರಾಜಿತರಪ್ಪ ಶ್ರೀಮ-ನ್ಮಹಾಮಣ್ಡಳೇಶ್ವರಂ/ತೈಲಪದೇವರ್ಬ್ಬನವಾಸೆ ಪನ್ನಿಚ್ಛಾಸಿರಮುಮಂ ಹಾನುಂಗಲ್ಲ-ಯ್ನೂಱುಮನಾಳ್ದು ಶ್ರೀರಾಜಧಾನೀ**ಪಾರ್ತ್ಥಪುರ**ದ ನೆಲೆವೀಡಿನಲ್ ಸುಖಸಂಕಥಾ-ವಿನೋದದಿಂ ರಾಜ್ಯಗೆಯ್ಯುತ್ತುಮಿರೆ—

---

1. ಎಸ : ಎಸವ ಎಂದರ್ಥ ಮಾಡಬೇಕು
2. ಕವಿ ಇಲ್ಲಿ ವೃತ್ತವನ್ನು ಪಂಚಪದಿಯಾಗಿ ಮಾಡಿಕೊಂಡಿದ್ದಾನೆ

## ೫೫

**ಇಟಗಿ,** **ಕ್ರಿ. ಶ. ೧೧೧೨**

**ಕೊಪ್ಪಳ ತಾಲೂಕು,** **ಚಾಳುಕ್ಯ ೬ನೆಯ ವಿಕ್ರಮಾದಿತ್ಯ**

ರಾಯಚೂರು ಜಿಲ್ಲೆ (ಎಪಿ. ಇಂ. ೧೩, ಪು. ೪೧)

ಶುದ್ಧ ಭಾಷೆ, ಅಲಂಕಾರಿಕ ಶೈಲಿ, ರಮ್ಯ ವರ್ಣನಚಿತ್ರ ಇವುಗಳಿರುವುದರಿಂದ ಈ ಶಾಸನವನ್ನು ಒಂದು ಚಿಕ್ಕ ಕಾವ್ಯವೆಂದೆಣಿಸಬಹುದು. ವಿಕ್ರಮಾದಿತ್ಯನ ವಿಕ್ರಮದ ವರ್ಣನೆ, ಬೆಳ್ವಲನಾಡಿನ ಇಟ್ಟಗೆಯ ವರ್ಣನೆ, ಮಹಾದೇವ ದಂಡಾಧೀಶನು ಕಟ್ಟಿಸಿದ ಮಹಾದೇವದೇವಾಲಯದ ವರ್ಣನೆ ಇವುಗಳಲ್ಲಿ ಆಂಡಯ್ಯ ಮೊದಲಾದ ಹೆಸರಾಂತ ಕವಿಗಳ ಕವಿತ್ವಪ್ರೌಢಿಮೆ ಕಂಡು ಬರುತ್ತಿದೆ.

ಚಾಳುಕ್ಯರು ಪವಿತ್ರವೂ ಶ್ರೇಷ್ಠವೂ ಆದ ಚಂದ್ರವಂಶದವರೆಂಬುದನ್ನು ತಿಳಿಸಲು ಈ ಶಾಸನವು ಬ್ರಹ್ಮನಿಂದ ಮೊದಲಾದ ಸಂತತಿಪರಂಪರೆಯನ್ನು ಬಹುವಿಶದವಾಗಿ ಕೊಡುತ್ತದೆ. ಇದರಿಂದ ಇತಿಹಾಸ ಕಾಲದಲ್ಲಿ ಅರಸುಮನೆತನಗಳ ಬಗೆಗೆ ಇದ್ದ ಗೌರವಭಾವನೆ ವ್ಯಕ್ತವಾಗುವುದು. ಅಲ್ಲದೆ, ಮುಖ್ಯವಾಗಿ ನಮ್ಮ ಆರ್ಯಸಂಸ್ಕೃತಿಗನುಸಾರವಾಗಿ ಮನುಜಕುಲವಿಸ್ತಾರದ ಬಗೆಗಿದ್ದ ಪುರಾಣದ ಕಲ್ಪನೆಯನ್ನು ಇದು ತಂದುಕೊಡುವುದೆಂದು ಈ ಭಾಗವನ್ನಾಯ್ದಿದೆ.

### ಬ್ರಹ್ಮನಿಂದ ಭರತನವರೆಗೆ

ಮ ವಿ ॥ ಎನಿಸಿದ್ದರ್ಂಬುರುಹಸ್ವಯಂಭುಗೆ ಸುತಂ ಸ್ವಾಯಂಭುವಂ ಪುಟ್ಟಿದಂ
ಮನುವಾತಂಗೆ ಮಗಂ ಪ್ರಿಯಬ್ರತನೃಪಂ ತತ್ಪುತ್ರರಗ್ನೀಧ್ರಮು-
ಖ್ಯನರೇಂದ್ರೋತ್ತಮರೆಳ್ವರ್ರಂ[1] ತವರ್ಗ್ಗೆ ಸಪ್ತದ್ವೀಪಮಂ ಪಚ್ಚುಕೊ-
ಟ್ಟನಿಳಾವಲ್ಲಭನಾ ಪ್ರಿಯಬ್ರತನುದಾತ್ತ ಕ್ಷಾತ್ರಗೋತ್ರೋತ್ತಮಂ[2] ॥

### ಸಪ್ತದ್ವೀಪಗಳ ಆದಿಪ್ರಭುಗಳು

ಲವಣಾಂಭೋನಿಧಿ ಸುತ್ತಿರಲ್ಕೆಸೆವ ಜಂಬೂದ್ವೀಪವಗ್ನೀಧ್ರರಾ-
ಜ್ಯವಿಳಾಸಾಸ್ಪದವಿಕ್ಷುವೇಷ್ಟಿತವಿಶಾಳಪ್ಲಕ್ಷವಕ್ಷುಣ್ಣ ಸಾ-
ಮ್ಯವ ಮೇಧಾತಿಥಿಪಾಳಿತಂ ಸುರೆಗಡಲ್ ಸುತ್ತಿರ್ಪ್ಪಿನಂ ನೋಡಲೊ-
ಪ್ಪುವುದಾ ಶಾಲ್ಮಲಿ ಸೋಷ್ಮಸಾಹಸವಪುಷ್ಮದ್ಭೂಭುಜಸ್ವೀಕೃತಂ ॥೨೫॥

1 ಎಟ್ಟ್ವರ್ ಎಂಬುದು ಎಟ್ಟ್ವರ್ ಆಗಿ ಎಳ್ವರ್ ಆಗಿದೆ.

2 ಪದ್ಯ ೨೩ರಿಂದ ೨೬ರ ವರೆಗೆ ತಾತ್ಪರ್ಯಸಾರ: ಬ್ರಹ್ಮನ ಮಗನಾದ ಸ್ವಾಯಂಭುವ ಮನುವಿನ ಮಗ ಪ್ರಿಯಬ್ರತನು ಸಕಲದ್ವೀಪಪತಿಯಾಗಿದ್ದನು. ಆತನು ತನ್ನ ಏಳು ಮಕ್ಕಳಿಗೆ ಏಳು ದ್ವೀಪಗಳನ್ನು ಹಂಚಿಕೊಟ್ಟನು:

೧. ಅಗ್ನೀಧ್ರನಿಗೆ ಜಂಬೂದ್ವೀಪ (ಸುತ್ತಲೂ ಲವಣ ಸಮುದ್ರ), ೨. ಮೇಧಾತಿಥಿಗೆ ಪ್ಲಕ್ಷದ್ವೀಪ (ಸುತ್ತ ಇಕ್ಷುರಸಸಮುದ್ರ), ೩. ವಪುಷ್ಮಂತನಿಗೆ ಶಾಲ್ಮಲೀದ್ವೀಪ (ಸುತ್ತ ಸುರಾ.

[ ಮುಂದಿನ ಪುಟಕ್ಕೆ ]

ಸ್ರ॥ ಜ್ಯೋತಿಷ್ಮಂತಂ ಕುಶದ್ವೀಪಮನೆಸೆವಿನೆಗಂ ಸರ್ಪಿ ಸುತ್ತಿರ್ಪ್ಪುದಂ ವಿ-
ಖ್ಯಾತಾಂಭೋರಾಶಿ ತನ್ನಂ ದಧಿ ಬಳಸಿದುದಂ ಕ್ರೌಂಚಮಂ ರಾಜಚಕ್ರ-
ಖ್ಯಾತಂ ಕೈಕೊಂಡನಂತಾ ದ್ಯುತಿಮದವನಿಪಂ ದುಗ್ಧವಾರಾಶಿಸೀಮಾ-
ನ್ವೀತಂ ಶಾಕಾಂತವೀಪ[1]ಕ್ಕರಸನೆನಿಸಿದಂ ಹವ್ಯನಂ ವ್ಯಗ್ರತೇಜ ॥೨೩೬॥

ಕಂ॥ ಸ್ವಾದೂದಕವೃತಪುಷ್ಕರ-
ಮೇದಿನಿಯುಂ ಸವನನಾಟ್ದನವನತರಿಪುಲ-
ಕ್ಷ್ಮೀದಯಿತಮೂರ್ತ್ತಿ ಮನುವಂ-
ಶೋದಧಿ ಸ[ಂ*]ಪೂರ್ಣ್ಣಚಂದ್ರನನಘನತಂದ್ರ ॥೨೩೭॥

ಮ. ವಿ.॥ ಸಕಳದ್ವೀಪಪತಿ ಪ್ರಿಯುಬ್ರತಸುತಾಗ್ನೀಧ್ರಾದಿಗಳ್ ತಂಮ ತಂ-
ದೆ ಕುಡಲ್ ಸಪ್ತಸಮುದ್ರಸಂವಳಿತ ಸಪ್ತದ್ವೀಪಮಂ ಸಪ್ತಸ-
ಪ್ತಿಕರಾಗ್ರಪ್ರಬಳ[2] ಪ್ರತಾಪಮೆಸೆಯಲ್ಕಾಟ್ದಿಂ ಬಳಿಕ್ಕಂ ಜಗ-
ತ್ಪ್ರಕಟಾಗ್ನೀಧ್ರಸುತೋತ್ತಮರ್ದ್ಧರೆಯನಾರ್ದ್ದರ್[3] ನಾಭಿರಾಜಾದಿಗಳ್॥

ಹಿಮವತ್ಪರ್ವ್ವತದಿಂದೆ ತೆಂಕಣದು ನಾಭಿಕ್ಷೇತ್ರನಾ ಹೇಮಕೂ-
ಟಮಹೀಭೃತ್ಪತಿಯಿಂದೆ ಕಿಂಪುರುಷವರ್ಷಂ ತೆಂಕಲೊಪ್ಪಿರ್ಪ್ಪುದಾ-
ಕ್ರಮದಿಂದಾ ನಿಷಧಾಚಳಕ್ಕೆ ಹರಿವರ್ಷಂ ದಕ್ಷಿಣಂ ಮೇರುಮ-
ಧ್ಯಮೆನಲ್ ತೋರ್ಪ್ಪುದಿಳಾವೃತಂ ವೃತಕನಜ್ಜಂಬೂನದೀವಿಭ್ರಮ ॥೨೩೮॥

ಸ್ರ॥ ನೀಳಶ್ವೇತಾದ್ರಿಶೃಂಗಕ್ಷಿತಿಧರನಿಕರಂ ತೆಂಕಲೊಪ್ಪಿರ್ಪ್ಪಿನಂ ಲೋ-
ಕಾಳೋಕಾತ್ಯಂತರಮ್ಯಂ ಸೊಗಯಿಸುವುದು ರಮ್ಯಂ ಹಿರಣ್ಮಂತಮೆತ್ತಂ

[ಹಿಂದಿನ ಪುಟದಿಂದ]
ಸಮುದ್ರ), ೪. ಜ್ಯೋತಿಷ್ಮಂತನಿಗೆ ಕುಶದ್ವೀಪ (ಸುತ್ತ ಸರ್ಪಿಸಮುದ್ರ?), ೫. ರಾಜಚಕ್ರನೆಂದು ಖ್ಯಾತನಾದ ದ್ಯುತಿಮಂತನಿಗೆ ಕ್ರೌಂಚದ್ವೀಪ (ಸುತ್ತ ದಧಿ ಸಮುದ್ರ) ೬. ಹವ್ಯನನಿಗೆ ಶಾಕಾಂತದ್ವೀಪ (ಸುತ್ತ ದುಗ್ಧ ಸಮುದ್ರ), ೭. ಸವನನಿಗೆ ಪುಷ್ಕರದ್ವೀಪ (ಸುತ್ತ ಸ್ವಾದೂದಕ ಸಮುದ್ರ). ಆ ಬಳಿಕ ಅಗ್ನೀಧ್ರನ ಒಂಬತ್ತು ಮಕ್ಕಳು–ನಾಭಿ ಮೊದಲಾದವರು–ನವಖಂಡ (ನಾಭಿಕ್ಷೇತ್ರ, ಕಿಂಪುರುಷವರ್ಷ, ಹರಿವರ್ಷ, ಇಳಾವೃತ ಇತ್ಯಾದಿ) ಗಳನ್ನು ಆಳಿದರು. ಮುಂದೆ ನಾಭಿಯ ಮಗ ಋಷಭನೂ ತರುವಾಯ ಆತನ ಮಗ ಭರತನೂ ಆಳಿದರು. ಮನುವಂಶ ಭೂಷಣನೆನಿಸಿದ ಆ ಭರತನಾಳ್ದ ದೇಶಕ್ಕೆ 'ಭರತವರ್ಷ' ಎಂದು ಅವನ ಹೆಸರುಂಟಾಯಿತು. (ಭರತಾದಿ ರಾಜರಿಗಿಂತಲೂ ಅಗ್ಗಳೆಯನಾದ ಚಾಳುಕ್ಯವಿಕ್ರಮಾದಿತ್ಯನು ಈಗ ಚಕ್ರವರ್ತಿಯಾಗಿದ್ದಾನೆ.)

1. ಶಾಕಾಂತ ದ್ವೀಪ ಎಂದಿರಬಹುದು.

2. ಶಾ. ಮೂ. ಪ್ರಬಲಿ

3. ಆಟ್ದರ್ ಎಂಬುದು ಆಟ್ದರ್ ಎಂದಾಗಿ ಆರ್ದ್ದರ್ ಎಂದು ರೂಪಾಂತರ ಹೊಂದಿದೆ.

ಭೂಳೋಕೋತ್ಕೃಷ್ಟಮಪ್ಪುತ್ತರಕುರು ಕನಕಾದ್ರೀಂದ್ರದಿಂ ಮೂಡಲಿರ್ಕ್ಕುಂ
ಶ್ರೀಲೀಲಾವಾಲ್ಯವಂತಂ ಸೊಗಯಿಸುವುದು ಮತ್ತಲ್ಲಿ ಭದ್ರಾಶ್ವವರ್ಷಂ ||೨೪೦||

ಕಂ || ಸಮಸಂದೊಪ್ಪುವ ವರ್ಷೋ-
ತ್ತಮಂಗಳಿಂದೆಸೆವ ಮೇರು ಚಾರುತೆ ತನ್ನಿಂ-
ದಮೆನಲ್ಕೆ ಪಡುವಲಾ ಗಂ-
ಧಮಾದನಕ್ಕೆನಿಸಿ ಕೇತುಮಾಲಮದೆಸೆಗುಂ ||೨೪೧||

ಉ.ಮಾ|| ಆ ನವಖಂಡ ಮಂಡಳಮಹೀಶರೊಳಗ್ರಜನಪ್ಪ ನಾಭಿಗ-
ಮ್ಲಾನಗುಣೋದಯಂ ಋಷಭನಾತ್ಮಜನಾದನಗಣ್ಯಪುಣ್ಯ ಲ-
ಕ್ಷ್ಮೀನಿಧಿ ತತ್ಸುತಂ ಭರತನಾದುದು **ಭಾರತವರ್ಷ**ಮಾತನಿಂ-
ದಾನೃಪನಲ್ತೆ ತಾನೆ ಮನುವಂಶವಿಭೂಷಣನೆಂತುನೋಪ್ಪುಡ ||೨೪೨||

## ಚಂದ್ರವಂಶ-ಸತ್ಯಾಶ್ರಯನ ವರೆಗೆ

ಗದ್ಯ[1]|| ಎರಡನೆಯ ಕಮಳಗರ್ಬ್ಭರುಂ ತ್ರಿಭುವನಸದ್ಧರ್ಮ ಸೂತ್ರಧಾರರುಂ ಅನನ್ಯಸಾಮಾನ್ಯ ಮಹಿಮಾಸ್ಪದರುಂ ರಾಜನೀತಿಲತಾಕಂದರುಮೆನಿಸಿದ ಸ್ವಾಯಂಭುವ, ಸ್ವಾರೋಚಿಷ, ಉತ್ತಮ, ತಾಮಸ, ರೈವತ ಚಾಕ್ಷುಷರೆಂಬ ಮನು-ಗಳೋರೊರ್ವ್ವರೆಪ್ಪತ್ತೊಂದುಚತುರ್ಯ್ಯುಗಂಬರಂ ಧರೆಯನಾಳ್ದನಂತರಂ ಹಿರಣ್ಯ-ಗರ್ಬ್ಭ ಚಾರುಚರಣನಖಶುಕ್ತಿಮುಕ್ತಾಫಳನೆನಿಸಿದ ದಕ್ಷಪ್ರಜಾಪತಿಗದಿತಿ ಪುಟ್ಟಿದಳದಿ-ತಿಗಂ ಜಗಚ್ಚಿತ್ರಕರ್ಮ್ಮಕುಶಳನೆನಿಸಿದ ಕಶ್ಯಪಪ್ರಜಾಪತಿಗಂ ಸಮಸ್ತಲೋಚನನೆನಿಸಿದ ವಿವಸ್ವಂತನಾವಿವಸ್ವಂತಂಗೆ ಮನುನೀತಿನಿಪುಣನೆನಿಸಿದೇಳನೆಯ ಮನು ವೈವಸ್ವತನಾ ವೈವಸ್ವತಂಗಿಕ್ಷ್ವಾಕುಕ್ಷಿತೀಶಂ ಜನಿಯಿಸಿದನಾ ನೃಪಂಗಿಳಾದೇವಿಯೆಂಬ ಸುತೆ ಪುಟ್ಟಿದಳತ್ತಲು,

ಚಂ|| ಅನುಪಮ ಹೇಮತಾಮರಸಗರ್ಬ್ಭನ ಮಾನಸಪುತ್ರನತ್ರಿ ತ-
ನ್ಮುನಿಪತಿನೇತ್ರಪುತ್ರಿಕೆಗೆ ಪುಟ್ಟಿದ ನಂದನನಿಂದುಮೌಳಿಮಂ-

---

1 ಗದ್ಯದಿಂದ ಪದ್ಯ ೨೪೬ರವರೆಗೆ ತಾತ್ಪರ್ಯಸಾರ : (ಹಿಂದೆ ವಿವರಿಸಲ್ಪಟ್ಟ) ಸ್ವಾಯಂ-ಭುವ, ಸ್ವಾರೋಚಿಷ, ಉತ್ತಮ, ತಾಮಸ, ರೈವತ, ಚಾಕ್ಷುಷ ಎಂಬ ಆರು ಜನ ಮನುಗಳು ಆಳಿ-ದರು. ಬಳಿಕ ಏಳನೆಯ ಮನು ವೈವಸ್ವತನು—ಬ್ರಹ್ಮನ ಅಡಿಯಲ್ಲಿ ಹುಟ್ಟಿದ ದಕ್ಷಪ್ರಜಾಪತಿಯ ಮಗಳಾದ ಅದಿತಿಗೆ ಕಶ್ಯಪಪ್ರಜಾಪತಿಯಿಂದ ಜನಿಸಿದ ವಿವಸ್ವಂತನ ಮಗನು—ಆಳಿದನು. ಈ ವೈವಸ್ವತನ ಮಗನಾದ ಇಕ್ಷ್ವಾಕುವಿನ ಮಗಳು ಇಳೆ. ಈ ಇಳೆಯನ್ನು ಬ್ರಹ್ಮನ ಮಾನಸಪುತ್ರನಾದ ಅತ್ರಿಯ ನೇತ್ರಪುತ್ರಿಕೆಗೆ ಹುಟ್ಟಿದ ಚಂದ್ರನ ಮಗನಾದ ಬುಧನಿಗೆ ಕೊಟ್ಟಿತ್ತು. ಇಳಾ—ಬುಧರಿಗೆ ಪುರೂರವನು ಮಗನಾದನು. ಅವನಿಂದ ಹಬ್ಬಿದ ಚಂದ್ರವಂಶದಲ್ಲಿ ಹಾರೀತಿಯೆಂಬವನ ಹಲವು ಮಕ್ಕಳಿಂದ ಚಾಳುಕ್ಯವಂಶದ ಮೊದಲಾಯಿತು. ಅದರಲ್ಲಿ ಅಯೋಧ್ಯಾಧಿಪತಿಯಾದ ಬಹು ಪ್ರಸಿದ್ಧ-ನಾಗಿದ್ದ ಸತ್ಯಾಶ್ರಯನಿಂದ ಈ ವಂಶ ಸತ್ಯಾಶ್ರಯಕುಳ ಎಂದೆನಿಸಿತು.

ಡನನಮೃತಾಂಶು ತತ್ಪ್ರಿಯಸುತಂ ಬುಧನುನ್ನತಸೋಮವಂಶವ-
ರ್ದ್ಧನನೊಗೆದಂ ಬುಧಂಗವಿಳೆಗಂ ಪೃಥುಕೀರ್ತ್ತಿರವಂ ಪುರೂರವ ॥೨೪೩॥

ಕಂ॥ ಆ ರಾಜರಾಜನೆನಿಸ ಪು-
ರೂರವನಿಂದೆಸೆವ ಸೋಮವಂಶದೊಳಾದಂ
ಹಾರೀತಿ ಪಂಚಶಿಖನಖಿ-
ಳಾರಾತಿನರೇಂದ್ರಮೌಳಿಲೀ[ಖಿ*]ತಚರಣ ॥೨೪೪॥

## ಜಗತ್ತುಂಗವೆನಿಸಿದ ಚಾಳುಕ್ಯವಂಶ

ಮ ಸ್ರ ॥ ಪಲರುಂ ಹಾರೀತಿಗಾದಸ್ಸ್ಫುರತರತುಳಧರಾಭಾರಧೌರೇಯಬಾಹಾ-
ಬಳರಾ ಭೂಭೃತ್ಕುಳಾಗ್ರೇಸರರೆ ಮೊದಲೆನಲ್ಕಾಯ್ತು **ಚಾಳುಕ್ಯವಂಶಂ**
ವಿಳಸಲ್ಲಕ್ಷ್ಮೀಲತಾವೇಲ್ಲಿತಮಖಿಳಜಗತ್ತುಂಗಮುದ್ಯದ್ಯಶೋನಿ-
ರ್ಮ್ಮಳಮುಕ್ತಾರತ್ನಗರ್ಬ್ಭಂ ಸಕಳಕುಳಕುಭೃದ್ವಂಶಲಬ್ಧಪ್ರಶಂಸ ॥೨೪೫॥
ಜಯಜಾಯಾವಲ್ಲಭಂ ಪಲ್ಲವಿತನಿಜಚಳುಕ್ಯಾನ್ವಯಂ ಕೀರ್ತ್ತಿಲಕ್ಷ್ಮೀ-
ಪ್ರಿಯನುರ್ವ್ವೀರಕ್ಷಣೈಕಕ್ಷಮಭುಜವಿಜಯಾಳಂಕೃತಂ ಶಾತ್ರವಕ್ಷ-
ತ್ರಿಯಗೋತ್ರಾದ್ರೀಂದ್ರವಜ್ರಂ ನೃಪತಿಳಕನಯೋಧ್ಯಾಧಿಪಂ ಸಂದ ಸತ್ಯಾ-
ಶ್ರಯದೇವಂ ಪುಟ್ಟಿ ಸತ್ಯಾಶ್ರಯಕುಳಮೆನಿಸಿತ್ತಲ್ತೆ ಚಾಳುಕ್ಯವಂಶ॥೨೪೬॥

## ಚಾಳುಕ್ಯವಿಕ್ರಮ

ಶೌರ್ಯ – ಸಾಹಸ–ವೈಭವ–ಔನ್ನತ್ಯ ಪೂರ್ಣವಾದ ವಿಕ್ರಮಾದಿತ್ಯನ ವ್ಯಕ್ತಿತ್ವವನ್ನು ಒಳ್ಳೆ ಮನಂಬುಗುವಂತೆ ಕವಿ ಇಲ್ಲಿ ಚಿತ್ರಿಸಿದ್ದಾನೆ. ಶ್ಲೇಷರೂಪಕಾಲಂಕಾರಗಳನ್ನು ಬಳಸಿರುವ-ನಲ್ಲದೆ, ಭವ್ಯಕಲ್ಪನಾವಿಲಾಸವನ್ನೂ ತೋರಿದ್ದಾನೆ. ವಿಕ್ರಮನು ಆಳುವ ಭೂಮಿ, ಕೀರ್ತಿಶ್ರೀಗೆ ಕೇಳೀಗೃಹಾಂಗಣವಾದುದನ್ನು ಈ ಪದ್ಯದಲ್ಲಿ ತಿಳಿಸುತ್ತಾನೆ (ಶ್ಲೇಷೆ):

ಮ ವಿ.॥ ಪೆಣದುಗ್ರಾಹಿತವಂಶಮಂ ತಱಿದು ಭೂಭೃದ್ವರ್ಗ್ಗಮಂ ನುರ್ಗ್ಗಿ ತ-
ತ್ಕ್ಷಣದಿಂ ಕಂಟಕಕೋಟಿಯುಂ ಕಡಿದು ಸಪ್ತಾಂಭೋಧಿ ಸಂರುದ್ಧಧಾ-
ರಿಣಿಯುಂ ದೋರ್ವ್ವಳದಿಂದೆ ನೇರ್ಪ್ಪಡಿಸಿ ಕೀರ್ತ್ತಿಶ್ರೀಗೆ ಕೇಳೀಗೃಹಾಂ-
ಗಣಮಪ್ಪಂತಿರೆ ಮಾಡಿದಂ ಸುಭಟರಾಚ್ಚಾಳುಕ್ಯರಾಮಂಬರ[1] ॥೨೪೭॥

ವಿಕ್ರಮನ ದೋರ್ದಂಡದ ಔನ್ನತ್ಯವನ್ನು ತಿಳಿಸುತ್ತಾನೆ (ಭವ್ಯಕಲ್ಪನೆ) :

ಕಮಠಾಧೀಶನ ಬೆನ್ನೊಳಿರ್ದ್ದ[2] ಫಣಿರಾಜೋದ್ಯತ್ಫಣಾಗ್ರಕ್ಕೆ ವಂ-
ದು ಮಹೀಕಾಮಿನಿ ದಿಗ್ಗಜಬ್ರಜದ ಕುಂಭಾಗ್ರಂಗಳಂ ಮೆಟ್ಟಿ ವಿ-

---

1. ಪೆಣದ (ಹೆಣೆದುಕೊಂಡ) + ಉಗ್ರ ಅಹಿತ (ಸರ್ಪ, ವೈರಿ) + ವಂಶ (ಬಿದಿರು, ಕುಲ). ಭೂಭೃತ್ (ಭೂಮಿಯನ್ನು ಧರಿಸಿದ : ಬೆಟ್ಟ, ರಾಜ). ಕಂಟಕ (ಮುಳ್ಳು, ವಿಘ್ನ).
2. ಶಾ. ಮೂ.: ಱ್ದ

ಕ್ರಮಚಕ್ರೇಶನುದಗ್ರವಪ್ಪ ಭುಜಮಂ ಬಂದೇಱಿದಳ್ ರಾಗದಿಂ-
ದಮಿದೇನುನ್ನತಮಾಯ್ತೊ ದಕ್ಷಿಣಭುಜಂ **ಚಾಳುಕ್ಯಚಕ್ರೇಶನ**[1] ||೨೪೮||

ವೈರಿರಾಜರು ವಿಕ್ರಮನಿಗೆ ವಂದಿಸುತ್ತಿದ್ದುದನ್ನು ಕವಿ ಬಣ್ಣಿಸುತ್ತಾನೆ (ರೂಪಕ):

ಚಂ|| ಪುದಿದು ಪೊದಟ್ಟ ವಿಕ್ರಮವಿಜೃಂಭಣಮಂ ತೊಱಿದಾಳ್ವಸಕ್ಕೆ ಪೂ-
ಣ್ದೊದವಿದ ಭೀತಿಯಿಂದೆಱಗಲನ್ಯನೃಪಾವಳಿ ಪಾದಪೀಠದೊಳ್
ಪದನಖದರ್ಪ್ಪಣಂಗಳೊಳಗಾ ರಿಪುಭೂಪರ ರೂಪು ಚಂದ್ರಬಿಂ-
ಬದ ಮೃಗದಂತಿರಿಪ್ಪುವು ನೆಗರ್ತ್ತೆಯ ವಿಕ್ರಮಚಕ್ರವರ್ತ್ತಿಯ[2] ||೨೪೯||

## ಬೆಳ್ವಲ ನಾಡ ಇಟ್ಟಗೆ

ಬೆಳ್ವಲ ನಾಡು ಅನೇಕ ಧರ್ಮಗಳೆಂಬ ಧೇನುಗಳ ವಿಹಾರಭೂಮಿ. ನರೇಗಲ್ಲು ೧೨೦ಲ್ಲಿ ಇಟ್ಟಗೆ (ಇಟಗಿ) ನರೋತ್ತಮರ ಆವಾಸವಾದ ಮಹಾಗ್ರಹಾರವಾಗಿತ್ತು.

ಮ. ವಿ.|| ಸಕಳದ್ವೀಪಕಳಾಪಮಂ ಮಿಗುವ ಜಂಬೂದ್ವೀಪದೊಳ್ ಕೀರ್ತ್ತಿವೆ-
ತ್ತ ಕರಂ ಭಾರತವರ್ಷಮಿಪ್ಪುದದು ವರ್ಷೋತ್ಕೃಷ್ಟಮಂತಲ್ಲಿ ವಿ-
ಶ್ವಕುಳಾಸಂಕುಳ ಜನ್ಮಭೂಮಿ ಭುವನಶ್ರೀರಮ್ಯಹರ್ಮ್ಯಾ[ೡ*]ಗ್ರ ಚೂ-
ಳಿಕೆಯುರ್ಕ್ಕಂ **ಬಹುಧರ್ಮ್ಮಧೇನು ನಿವಹಕ್ಕಾಡುಂಬೊಲಂ ಬೆಳ್ವಲ** ||

ಕಂ|| ನರೆಯಂಗಲ್ಪನ್ನೆರಡುಂ
ಧರಾಂಗನಾತಿಳಕಮೆನಿಸಿ ಬೆಳ್ವಲನಾಡೊಳ್
ಕರಮೊಪ್ಪಿ ತೋರ್ಕ್ಕುಮವಱೊ
ಳ್ದೊರೆವೆತ್ತ **ಮಹಾಗ್ರಹಾರವಿಟ್ಟ**ಗೆಯೆಸೆಗುಂ ||೨೫೦||

ಇಟ್ಟಗೆಯ ಪುರವೈಶಿಷ್ಟ್ಯವರ್ಣನೆ ಶ್ಲೇಷೆ) ಮತ್ತು ಉಪವನದ ನಿಸರ್ಗವರ್ಣನೆ :

ಚಂ|| ಇದು ಕನಕಾದ್ರಿಯಂತೆ ವಿಬುಧಾಶ್ರಯಮಿನ್ತಿದು ನೋಡ ನಾಗಲೋ-
ಕದವೊಲನನ್ತಭೋಗಿಜನಸೇವಿತಮಿನ್ತಿದು ದುಗ್ಧವಾರ್ಧಿಯಂ-
ದದೆ ಪುರುಷೋತ್ತಮಸ್ಥಿತಿಕರಂ ಧನದಾಚಳದಂದದಿಂದಮಿಂ-
ತಿದುವೆ ಮಹೇಶ್ವರಾವಸಥಮೆನ್ನದರಾರೊ ತದಗ್ರಹಾರಮ ||೨೫೧||

---

1. ಕೂರ್ಮದ ಬೆನ್ನಮೇಲೆ, ಆದಿಶೇಷನ ಹೆಡೆಗಳ ಮೇಲೆ, ದಿಗ್ಗಜಗಳ ತಲೆಗಳ ಮೇಲೆ ಪೃಥ್ವಿ ನಿಂತಿದೆ ಎಂದು ನಮ್ಮ ಪುರಾಣಗಳ ಕಲ್ಪನೆ. ರಾಜನೂ ಭೂಮಿಧರನು. ಈಗ ವಿಕ್ರಮಾದಿತ್ಯ ಅದನ್ನು ಧರಿಸಿದ್ದಾನೆ. ಭೂದೇವಿ ಅವನ ಭುಜಕ್ಕೆ ಏರಲು ಆಮೆಯ ಬೆನ್ನು, ಶೇಷನ ಹೆಡೆ, ದಿಕ್ಕರಿ-ಗಳ ತಲೆ ಮೆಟ್ಟಲಾದುವು ಎನ್ನುತ್ತಾನೆ ಕವಿ.

2. ವಿಕ್ರಮಚಕ್ರವರ್ತಿಯ ಅಡಿಯುಗುರುಗಳ ಕನ್ನಡಿಗಳಲ್ಲಿ ಮೂಡಿದ ಹಗೆರಾಯರ ರೂಪುಗಳು ಚಂದ್ರಬಿಂಬದಲ್ಲಿಯ ಜಿಂಕೆಯಂತಿದ್ದುವು. ಅವರ ಮುಖಗಳನ್ನು ಜಿಂಕೆಗೆ (ಚಂದ್ರನ ಕಲೆಗೆ) ಹೋಲಿಸಿರುದರ ಔಚಿತ್ಯವನ್ನು ಗಮನಿಸಬೇಕು : ಭೀತಿಯಿಂದ ಕಪ್ಪಿಟ್ಟಿದ್ದುವು ಆ ಮೋರೆಗಳು.

ಉ.ಮಾ.॥ ಆಡುವ ಸೋಗೆ ಪಾಡುವಳಿಗಳ್ ನಡಪಾಡುವ ಹಂಸೆ ಪಂಚಮಂ
ಬಾಡುವ ಗಂಡಗೋಗಿಲೆ ಕೆಲನ್ನುರ್ಡಿದಂತುಟನಾಗಳನ್ತೆ ಮಾ-
ತಾಡುವ ರಾಜಕೀರವೊಲವರ್ಕ್ಕಸಲಾಱದಗಲ್ದು ಪೂವಿನಂ-
ಬಾಡೆ ಲತಾವನಂಬುಗುವ ನಲ್ಲವರಲ್ಲಿಯ ನಂದನಂಗಳೊಳ್ ॥೨೫೩॥

## ಇಟ್ಟಿಗೆಯ ವಿಪ್ರರು

ಸಾಹಿತ್ಯ, ವೇದಾಂತ, ಬ್ರಹ್ಮವಿದ್ಯೆಗಳಲ್ಲಿ ಬಲ್ಲಿದರಾಗಿಯೂ ಶುದ್ಧಚರಿತ್ರರಾಗಿಯೂ ನಾಡಿನಲ್ಲಿ ಗೌರವವನ್ನು ಪಡೆದ ೪೦೦ ಜನ ಬ್ರಾಹ್ಮಣರು ಈ ಅಗ್ರಹಾರದಲ್ಲಿದ್ದರು. ಹೋಮ-ಹವನಗಳು ಊರಲ್ಲಿ ನಿರಂತರವಾಗಿ ನಡೆಯುತ್ತಿದ್ದವು. ಹೋಮಧೂಮದ ವರ್ಣನೆ ಈ ಒಂದು ಪದ್ಯದಲ್ಲಿ (೨೫೪) ಬಂದಿದೆ :

ಚಂ॥ ಕಲಿಮಶಕಾರ್ತ್ಥಧೂಮಮೆನಿಸಿರ್ದ್ದ[1] ನೆಗರ್ತ್ತೆಯ ಹೋಮಧೂಮಮ-
ಗ್ಗಲಿಸಿ ನಭಂಬರಂ[2] ಮಿಳಿರ್ದ್ದ ನಾಕನದೀಪ್ರಚುರಪ್ರವಾಹಸಂ-
ವಳನವಿಳಾಸಯಾಮುನಜಳೋದ್ಗಮಮಂ ಮಿಗೆ ಜನ್ನವಿಪ್ರ ಭೂ-
ವಳಿಯವಿನೂತವಿಪ್ರವರರಿಂದೆಸೆದಿಪ್ಪುದವೆತ್ತ ನೋಪ್ಪಡಂ ॥೨೫೪॥

ಮ. ವಿ ॥ ಸಕಳವ್ಯಾಕರಣಂಗಳುಂ ವಿವಿಧವೇದಾರ್ತ್ಥಂಗಳುಂ ಮೂರ್ತ್ತಿಗೊಂ-
ಡು ಕಳಾಶಾಸ್ತ್ರಸಮೇತಮೋಲಗಿಸೆ ತಮ್ಮಂ ಬ್ರಹ್ಮವಿದ್ಯಾವಿಶೇ-
ಷಕರಮ್ಲಾನಚರಿತ್ರಪಾತ್ರರಮಳಜ್ಞಾನರ್ದ್ಧಿಸಂಪನ್ನರೀ-
ಸಕಳಕ್ಷೋಣಿಗೆ ಪೂಜ್ಯರಿಟ್ಟಿಗೆಯ ನಾಲ್ನೂರ್ವ್ವದ್ವಿಜನ್ಮೋತ್ತಮರ್ ॥

## ಮಹಾದೇವದೇವಾಲಯ ಮತ್ತು ಇತರ ದೇವಾಲಯಗಳು

'ರಾಜವಿದ್ಯಾಗುರು' ಎಂದು ಹೊಗಳಿಸಿಕೊಂಡ ಮಹಾದೇವ ದಂಡಾಧೀಶನು ಇಟ್ಟಗೆ-ಯಲ್ಲಿ ಹಲವು ದೇವಾಲಯಗಳನ್ನು ಕಟ್ಟಿಸಿದನು. ಅವುಗಳಲ್ಲಿ ಮಹಾದೇವದೇವಾಲಯ ಅವನ ಹೆಸರಿನ ಮುಖ್ಯ ದೇವಾಲಯ. ಅದರ ನೆರೆಯಲ್ಲಿ ತನ್ನ ತಾಯಿಗಾಗಿ ಚಂದಲೇಶ್ವರವನ್ನೂ ತಂದೆಗಾಗಿ ಮೂರ್ತಿನಾರಾಯಣ ದೇವಾಲಯವನ್ನೂ ಸಾಹಸಭೈರವ ದೇವಾಲಯವನ್ನೂ ನಿರ್ಮಿಸಿದನು. ಅಲ್ಲದೆ ವಾಙ್ಮಯಮೂರ್ತಿಯಾದ ಸರಸ್ವತಿಗೆ ಇರಲಿಕ್ಕೆ, ಸಕಲ ಶಾಬ್ದಿಕರು ಕವಿಗಳು ತಾರ್ಕಿಕರು ಆಗಮಿಕರು ವೈದಿಕರಿಗೆ ಆಶ್ರಯನಾದಂತಹ ಈ ಮಹಾದೇವನು ಮಠವನ್ನು ಮಾಡಿಸಿದನು. ಎಲ್ಲ ದೇವರಿಗೆಂದ ಹಾಗೆ ದೇವಾಲಯ, ದೇವಗೃಹ ಇತ್ಯಾದಿಯಾಗಿ ಹೇಳದೆ, ಸರಸ್ವತಿಗೆ 'ಮಠ' ಕಟ್ಟಿಸಿದನೆಂದು ಹೇಳಿರುವಲ್ಲಿಯ ವೈಶಿಷ್ಟ್ಯವನ್ನು ಗಮನಿಸಬೇಕು. ಇಟ್ಟಗೆಯಲ್ಲಲ್ಲದೆ, ಹಲವಾರು ಊರುಗಳಲ್ಲಿಯೂ ಗುಡಿಗಳನ್ನು ಕಟ್ಟಿಸಿ ಈ ಮಹಾದೇವ ದಂಡಾಧೀಶನು ಪ್ರಸಿದ್ಧನಾಗಿದ್ದಾನೆ.

ಮಹಾದೇವದೇವಾಲಯವನ್ನು—ಆದಿಶೇಷನ ಹೆಡೆಯವರೆಗೂ ತಳಹದಿ ಅಗೆದು, ಸಮುದ್ರವನ್ನೇ ತಿದ್ದಿ, ಕುಲಪರ್ವತಗಳನ್ನೆಲ್ಲಾ ಗುಂಡುಗಲ್ಲಿಕ್ಕಿ (ತಳಹದಿಗೆ ಹಾಕಿ), ದಿಗ್ದಂತಿಗಳನ್ನೇ ತಳಗಂಬಗಳಾಗಿ ಮಾಡಿ ಹಿಮಾಲಯವನ್ನೇ ನಿರ್ಮಿಸಿದಂತೆ—ಕಟ್ಟಿಸಿದನೆಂದೂ ಇದು ದೇವಾಲಯ ಚಕ್ರವರ್ತಿಯೆಂದೂ ವಿಶ್ವಕರ್ಮನಿಗೆ ಇನ್ನು ಮುಂದೆ ಇದೊಂದು ಮಾದರಿಯಾಯಿತೆಂದೂ ಬಣ್ಣಿಸಿ ಅದರ ಭವ್ಯತೆಯನ್ನು ಮನದಟ್ಟಿಸುತ್ತಾನೆ ಕವಿ.

1. ಶಾ. ಮೂ. ಮೆನಿಸಿರ್ದ್ದ   2. ಶಾ. ಮೂ. ನಚಂಬರಂ

## ದೇವಾಲಯ ಚಕ್ರವರ್ತಿ ಮಹಾದೇವ ದೇವಾಲಯ

ಮ. ಸ್ರ॥ ರಸೆಯಂ ನಾಗೇಂದ್ರಭಾಸ್ವತ್ಫಣಮಣಿರುಚಿಮುದ್ಭಾಳುಕಾಂತಂಬರಂ ಶೋ-
ಧಿಸಿ ಮುನ್ನೀರ್ದ್ದಿರ್ದ್ದಿ ಧಾತ್ರೀಧರಮನನಿತುಮಂ ಗುಂಡುಗಲ್ಲಿಕ್ಕಿ ದಿಗ್ದಂ-
ತಿಸಮೂಹೋತ್ತುಂಗಗಾತ್ರಾಪರಮುವೆ ತಳಗಂಬಂಗಳಾಗಲ್ಕಿದೇಂ ಮಾ-
ಡಿಸಿದಂ ಹಿಮ್ಯಾದ್ರಿಯಂ ದೇಗುಲಮನೆನೆ ಮಹಾದೇವ ದಣ್ಡಾಧಿನಾಥ ॥

ಧರಣೀವಲ್ಲಭ ದಣ್ಡನಾಯಕಶಿರೋರತ್ನಂ ಮಹಾದೇವನಾ-
ದರದಿಂ ಮಾಡಿಸಲೊಪ್ಪೆ ತೋಱುವ ಮಹಾದೇವೇಶ್ವರಂ ಸಪ್ತಸಾ-
ಗರಸೀಮಾವನಿಮಧ್ಯದೇವಭವನಂಗಳ್ಗೆಲ್ಲಮೊಪ್ಪಲ್ಕೆ ತಾಂ
ಬೆರಲೆತ್ತಿರ್ದ್ದುದು[1] ನೋಡಿವಿಂತಿದೆನಿಕುಂ ತುಂಗಧ್ವಜಾಭೋಗದಿಂ ॥

ಇದಪೂರ್ವ್ವಂ ಬ್ರಹ್ಮನುಂ ನಿರ್ಮ್ಮಿಸಲಱಿಯನಿದಂ ಪೋಲಲಾವಿಶ್ವಕರ್ಮ್ಮಂ-
ಗಿವೆ ದಲ್ಕರ್ಮ್ಮಾಂತರಪ್ರೌಢಿಗೆ[2] ಗುರುವೆನಿಸಲ್ ನಾಲ್ಬುದೆಂಬಂತುಟಂ ನೋ-
ಡಿದರಾಶ್ಚರ್ಯ್ಯಂಬಡಲ್ಮಾಡಿದನಿದನೆ ವಲಂ ದೇವದೇವಂಗಿರಲ್ತ-
ಕ್ಕುದೆನಿಪ್ಪುತ್ತುಂಗದೇವಾಯತನಮೆಸೆದಿರಲ್ **ದಣ್ಡನಾಥತ್ರಿಣೇತ್ರಂ** ॥

ಮ ವಿ ॥ ಉದಧಿವ್ಯಾವೃತಧಾತ್ರಿಯೊಳ್ಪಡಿಯಿಡಲ್ ದೇವಾಲಯಂ ಮುನ್ನೆ ಮಾ-
ಡಿದ[3] ವಿಮ್ಮಾಡುವವೀಗಮಾಡಿಸುವವಾವುಂ ಪೋಲ್ವುವೇ ಪೋಲವಿಂ-
ತಿದು **ದೇವಾಲಯ ಚಕ್ರವರ್ತ್ತಿ**ಯೆನಿಸಲ್ ನಾಲ್ದೆವ್ವರ್ದಂ
ಮುಂಮನೋ-
ಮುದದಿಂ ಮಾಡಿಸಿ ಮಾಣದೊಪ್ಪುವ ಮಹಾದೇವೇಶ್ವರೋ-
ಪಾಂತದೊಳ್ ॥೨೫೮॥

## ಇತರ ದೇವಾಲಯಗಳು

ಉ.ಮಾ॥ ಶ್ರೀಯುಪತೀವಿನೋದಭವನಂ ಭುವನಸ್ತುತಕೀರ್ತ್ತಿ ಕೀರ್ತ್ತಿ ಕ-
ಳ್ಪಾಯುವನಾಳ್ದಿರಲ್ಕೆ ಪಿತೃಭಕ್ತಿರಸಂ ನೆಲೆವೆರ್ಚ್ಚೆ **ಮೂರ್ತ್ತಿನಾ-
ರಾಯಣದೇವ**ನಂ[4] ನೆನೆದು ಮಾಡಿಸಿದಂ ಜನಕಂಗೆ ಮೂರ್ತ್ತಿನಾ-
ರಾಯಣದೇವ ದೇವಕುಲಮಂ ಕುಲನಂದನಕಲ್ಪಭೂರುಹ ॥೨೫೯॥

1 ಶಾ. ಮೂ. ಬೆರಲೆತ್ತಿಬ್ದುದು

2 ಕರ್ಮಾಂತರಪ್ರೌಢಿ : ಬೇರೊಂದು ಕೆಲಸದ ಜಾಣ್ಮೆ.

3. ಇಮ್ಮಾಡುವ: ಇಂ (ಇನ್ನು ಮೇಲೆ) ಮಾಡುವ

4 ಮಹಾದೇವ ದಂಡಾಧೀಶನ ತಂದೆಯ ಹೆಸರು ಮೂರ್ತಿನಾರಾಯಣ ಎಂದೂ ತಾಯ ಹೆಸರು ಚಂದಲಬ್ಬೆ ಎಂದೂ ಇದ್ದಂತೆ ತೋರುತ್ತದೆ.

ಚಂ|| ಜನನಿಗೆ **ಚಂದಲೇಶ್ವರ**ಮನೆತ್ತಿಸಿದಂ ಪುರವರ್ಗ್ಗವಮಂ ಜಗ-
ಜ್ಜನನುತಮಾಗೆ ಕಾಮನೆಱೆವಟ್ಟಿನೆ[1] ಮಾಡಿಸಿದಂ ಮನೋಜರಾ-
ಜನ ರತಿ ರಂಭೆಯೆಂಬವರ ಸಂತತಿಯಾಗಲೆವೇಕ್ಕ್ರವೆಂಬ ಕಾ-
ಮಿನಿಯರನಾಯ್ದು ತಂದು ಪುರವರ್ಗ್ಗದ ಸೂಳೆಯರಾಗೆ ಮಾಡಿದಂ ||೨೬೦||

ಉ.ಮಾ.|| ಸಾಹಸಭೈರವಂ ಸಕಳ ಶತ್ರುಭಯಾವಹಬಾಹುಸಾಹಸಂ
ಸಾಹಸಭೈರವಂಗೆ ವರದಂಗೆ ನಿಜೋಜ್ಜ್ವಳಧರ್ಮ್ಮಪಾಳಕಂ-
ಗಾಹಿತಕೀರ್ತ್ತಿ ಮಾಡಿಸಿದನೊಪ್ಪುವ ದೇಗುಲಮಂ ಸಮಸ್ತಧಾ-
ತ್ರೀಹಿತಕಾರ್ಯ್ಯಧುರ್ಯ್ಯನುದಿತೋದಿತ ಪುಣ್ಯನಗಣ್ಯಪೌರುಷ ||

## ಸರಸ್ವತಿಗೆ ಮಠ

ಚಂ|| ಸಕಳಕಳಾಸರಸ್ವತಿಗೆ ವಾಙ್ಮಯಮೂರ್ತ್ತಿಗೆ ವೇದಮೂರ್ತ್ತಿಗ-
ಪ್ರಕಟನಮಂತ್ರಮೂರ್ತ್ತಿಗಮಳಾಕ್ಷರ ಮೂರ್ತ್ತಿಗಿರಲ್ಕೆ ಭಕ್ತಿಯಿಂ
**ಸಕಳಕಳಾಸರಸ್ವತಿ**ಯೆ ಮಾಡಿಸಿದಂ **ಮಠ**ಮಂ ಸಮಸ್ತಶಾ-
ಬ್ದಿಕ ಕವಿ ತಾರ್ಕ್ಕಿಕಾಗಮಿಕ ವೈದಿಕ ಸಾಕ್ಷರ ಸಜ್ಜನಾಶ್ರಯಂ ||೬೬೬||

## ಪ್ರಾಕಾರ

ಇದು ಪವಿತ್ರಸ್ಥಳ, ಕಲಿಗೆ ಇಲ್ಲಿ ಪ್ರವೇಶ ಇರಕೂಡದೆಂದು (ವಿರಾಡ್ರೂಪಿ) ಶಿವನ ತೋಳುಗಳು ಅಡಕಲಾಗಿ ಸುತ್ತುವರಿದಂತೆ ಪ್ರಾಕಾರಗೋಡೆ ಇತ್ತು.

ಮ.ಸ್ರ || ವನಧಿವ್ಯಾವೇಷ್ಟಿತೋರ್ವ್ವೀತಳದೊಳಿದೆ ಪವಿತ್ರಂ ಮಹಾದೇವನೀಯು-
ಲ್ಕೆನಗಾಂ ಕೈಕೊಂಡ ಭೂಮಂಡಳಮಿದು ಕಲಿಗಿಲ್ಲಿಂದಮಿತ್ತಲ್ ಪುಗಲ್ಸ-
ಲ್ಲೆನುತಂ ಕೈಕೊಂಡು ಕೈಯಿಕ್ಕಿದ ವ್ಯಡನಡಕಿಲ್ಗೊಂಡ ದೋರ್ಮ್ಮಂ-
ಡಳಂ ತಾ-
ನೆನಿಕುಂ ಪ್ರಾಕಾರಮಾಶಾಮದಕರಿಕಟಕಂಡೂವಿನೋದಪ್ರದೇಶ ||೨೬೩||

## ಬೇರೆ ಊರುಗಳಲ್ಲಿ ಮಹಾದೇವನ ಧರ್ಮಗಳು

ಮ.ಸ್ರ || ಜಗಮೆಲ್ಲಂ ಕಂಡು ಕೆಯ್ಯಂ ಮುಗಿಯೆ ಸವಸಿ ಕುಂದುಂಗೊಳಂ ಕಾಡಲೂರಿ-
ಟ್ಟಿಗೆ[2] ವೇಳುಗ್ರಾಮೆ ವಾರಾಣಸಿ ಜನವಿನುತಂ ಸ್ವಾಮಿಪಂಪಾಸ್ಥಳಂ
ಮೋ-
ದೆಗನೂರ್ ಶ್ರೀರಾಯನಾರಾಯಣಪುರಿ ನರೆಯಂಗಲ್ಗಳೆಂಬಲ್ಲಿ ಪುಣ್ಯಂ
ನೆಗಳಲ್ ಧರ್ಮ್ಮಂಗಳಂ ಮಾಡಿದನೆಸೆಯೆ ಮಹಾದೇವದಣ್ಣಾಧಿನಾಥ ||

---

1. ಶಾ. ಮೂ. ಕಾಮನೆಟಿಗ್ವಿವಟ್ಟಿನೆ

2 ಈ ಶಾಸನದ ಇಟ್ಟಗೆಯಲ್ಲದೆ ಬೇರೊಂದು ಇಟ್ಟಗೆ. ಬಹುಶಃ ಶಿರಹಟ್ಟಿ ತಾಲೂಕಿನಲ್ಲಿಯ ಇಟ್ಟಗೆ.

ಮ.ವಿ.॥ ಕಡುಚೆಲ್ವಿಂ ನಿಡುಗು[ಂ*]ಡಿ ಮಂಗಳವುರಂ[1] ಶ್ರೀಲಟ್ಟಲೂರ್ವ್ವೆಣ್ಣೆಕ-
ಲ್ವಡವೂರ್ಕ್ಕೋರವುರಂ ಪೊಗರ್ತ್ತವಡದಿದ್ದಾರಿದ್ಧಿ ಗಾವಂಗಳೆಂ-
ಬೆಡೆಯೊಳ್ ನಿರ್ಮ್ಮಿಸಿ ಧರ್ಮ್ಮಮಂ ಸಲೆ **ಮಹಾದೇವಂ** ಯಶೋ-
ಲಕ್ಷ್ಮಿಯಂ
ಪಡೆದಂ ಧಾರಿಣಿ ಕೂರ್ತ್ತು ಕೀರ್ತ್ತಿಸುವಿನಂ ಚಂದ್ರಾರ್ಕ್ಕತಾರಂಬರಂ ॥

## ೫೬

**ಕುಡತಿನಿ,** **ಕ್ರಿ. ವ. ೧೧೧೯**

**ಬಳ್ಳಾರಿ ತಾಲೂಕು,** **ಚಾಳುಕ್ಯ ೬ನೆಯ ವಿಕ್ರಮಾದಿತ್ಯ**

ಬಳ್ಳಾರಿ ಜಿಲ್ಲೆ (ಸೌ. ಇಂ. ಇ. ೯, ಭಾ. ೧, ಪು. ೧೬೨)

ಮಾರ್ತಂಡನಾಯಕನ ಧರ್ಮಕಾರ್ಯಗಳನ್ನು ವಿವರಿಸುವ ಈ ಶಾಸನವು ಅವನ ಗುಣ ವಿಶೇಷ, ಅಲ್ಲಿಯ ಜನಪದ ಮತ್ತು ಅದರ ಜನಗಳ ಮೇಲ್ಮೆಯನ್ನು ವರ್ಣಿಸುತ್ತದೆ. ಕನ್ನಡನಾಡು ಧರ್ಮಭೂಮಿ ಎಂಬುದು ಈ ಶಾಸನಕಾಲದಲ್ಲಿಯೂ ಜನಜನಿತವಾಗಿತ್ತೆಂಬುದಕ್ಕೆ ಇದರಲ್ಲಿ ಉಲ್ಲೇಖವಿದೆ.

### ಮಾರ್ತಂಡನಾಯಕನ ಧರ್ಮ

ಕಂ ॥ ಪಿಡಿಯಲಣಮೊಲ್ಲನೊಲವಿಂ
ಪಿಡಿದೊಡೆ ಬಿಡನೆಡಱನೆಡಱಿ ಮಾಣಂ ಮುಳಿಸಿಂ
ತೊಡರಂ ತೊಡರ್ದ್ದಡೆ ಸೆಡೆಯದೆ
ತೊಡರ್ದ್ದ ತೋಳುಱದಿಱಿವ ಗಣ್ಡನೀ ಮಾರ್ತ್ತಣ್ಡ ॥೨೬೬॥

ಈ ಸಕಳಧರಿತ್ರಿಯೊಳತಿ
ಭಾಸುರತರಮೆನಿಪ ಪೆಸರ ಜನವದ ಜನದಿಂ
ಜಸವಡೆದೆಸೆವ ವಿವಿಧವಿ-
ಳಾಸದ ಕಣಿ ಧರ್ಮ್ಮಭೂಮಿ ರಮ್ಯಮಿದೆನುತಂ ॥೨೬೭॥

ಶಿವಧರ್ಮ್ಮಮಿದುವೆ ಧರ್ಮ್ಮಂ
ಶಿವದೇವನೆ ದೇವನೆಂಬ ನಂಬುಗೆ ಮಿಗೆ ಚೆ-
ಲ್ವವತರಿಸಿರೆ ಮಾಡಿಸಿದಂ
ಶಿವಗೃಹಮಂ ಭೂಪ್ರಚಣ್ಡನೀ ಮಾರ್ತ್ತಣ್ಡ ॥೨೬೮॥

---

1. ಮಂಗಳೂರು: ಇದು ರಾಯಚೂರು ಜಿಲ್ಲೆಯ ಕೊಪ್ಪಳ-ಕುಷ್ಟಿಗಿ ದಾರಿಯಲ್ಲಿದ್ದುದೆಂದು ತೋರುತ್ತದೆ. ಈ ಹೆಸರಿನ ಊರುಗಳು ಕೆಲವಿವೆ.

ಅಱನಱಿದು ಬಾವಿದೇಗುಲ-
ವಱಿಕೆಯ **ವಾಣೀಗೃಹಂ ವಿನಾಯಕನಿಳಯಂ**
ಪೆಱಗಣ ತೋಟಂ ಚೆಲ್ವಿಂ
ನೆಱೆದಿಱೆ ಮಾಡಿಸಿದನೆಸೆದಿರಲು ಮಾರ್ತ್ತಣ್ಡಂ ||೨೬೯||

### ೫೭

**ಸೋಗಿ,** **ಕ್ರಿ. ವ. ೧೧೨೧**
**ಹಡಗಲಿ ತಾಲೂಕು,** **ಚಾಳುಕ್ಯ ೬ನೆಯ ವಿಕ್ರಮಾದಿತ್ಯ**
ಬಳ್ಳಾರಿ ಜಿಲ್ಲೆ (ಸೌ. ಇಂ. ಇ. ೯, ಭಾಗ ೧, ಪು. ೧೯೪)

**ಅತ್ಯಪೂರ್ವವಾದ ಸತ್ಯ**

"ಊರೊಡೆಯ ನಾಗವರ್ಮನು ಎಲ್ಲರಿಗೂ ವರ ಕೊಡುವ ನಡೆದಾಡುವ ತೀರ್ಥದಂತಿದ್ದಾನೆ; ಸ್ತುತಿಸಿಕೊಳ್ಳದೆ, ಲಾಂಗೂಲಚಾಲನ ಮಾಡಿಸಿಕೊಳ್ಳದೆ, ಕೈಕೂಡ ಮುಗಿಸಿಕೊಳ್ಳದೆ ಈಯುವ ದಾನಿಯಾಗಿದ್ದಾನೆ" ಎಂದು ಹೇಳಿದರೆ ಆಶ್ಚರ್ಯದಿಂದ ಯಾರೂ ಶಂಕೆಪಡಬೇಕಾಗಿಲ್ಲ. ಲೋಕರೂಢಿಯಲ್ಲಿ ಈ ರೀತಿ ಅತ್ಯಪೂರ್ವವಾದುವಾದರೂ ನಾನು ಸತ್ಯವನ್ನೇ ಹೇಳುತ್ತಿದ್ದೇನೆ ಎಂದಿದ್ದಾನೆ ಕವಿ.

ಚಂ|| ಜಗದೊಳಗತ್ಯಪೂರ್ವ್ವ ದಿಟವೇ ದಿಟವಾವುದು ಸಾವಿತೀರ್ತ್ಥ[1] ಮಿ-
ಯುಗದೊಳು ಮೂರ್ತ್ತಿಗೊಣ್ಡು ಬರವೀವುದು ಜಂಗಮತೀರ್ತ್ಥವಾಗಿ ಕೈ-
ಮುಗಿಯಲುವೇಡ ಬಣ್ಣಿಸಲುವೇಡ ಕೆಲಕ್ಕೆಡೆಯಾಡವೇಡ ನೀಂ
ನಗುತೆ ಶರಣ್ಯವೆಂದೆ ಬಗೆದಪ್ಪುದು ಬೇಪ್ಪುದು **ನಾಗವರ್ಮ್ಮನ** ||೨೭೦||

### ೫೮

**ಹಿರೇಹಳ್ಳಿ,** **ಕ್ರಿ. ವ. ೧೧೨೧**
**ಹಿರೇಕೆರೂರ ತಾಲೂಕು,** **ಚಾಳುಕ್ಯ ೬ನೆಯ ವಿಕ್ರಮಾದಿತ್ಯ**
ಧಾರವಾಡ ಜಿಲ್ಲೆ (ಕ. ಇ. ಸಂ. ४)

ಎಲ್ಲರನ್ನೂ ಬಾಗಿಸಿದ ತ್ರಿಭುವನಮಲ್ಲ ವಿಕ್ರಮಾದಿತ್ಯನ ಪ್ರತಾಪಪ್ರಭಾವ, ಬನವಾಸಿ ದೇಶಕ್ಕೆ ಸೇರಿದ್ದ ವ್ಯಾಸಪುರ (ಬಾಸೂರು) ಕಂಪಣ, ಅದರಲ್ಲಿಯ ಕಾಗಿನೆಲೆ-೧೨, ಗೊಟ್ಟಗಡಿ ಎಂಬ ಊರು ಇವುಗಳ ಪ್ರಾದೇಶಿಕ ಪರಿಚಯ, ಗೊಟ್ಟಗಡಿಯ ಸೆಟ್ಟಿ-ಶಾನಭೋಗರ ಗುಣ ವಿಶೇಷ ಇವುಗಳ ವರ್ಣನೆ ಇಲ್ಲಿ ಬಂದಿದೆ.

---

1. ಸಾವಿತೀರ್ತ್ಥ : ಸ್ವಾಮಿತೀರ್ಥ (ಸ್ವಾಮಿ ಪುಷ್ಕರಿಣಿ)?

## ೬ನೆಯ ವಿಕ್ರಮಾದಿತ್ಯ

ಚಂ|| ಅದಿರದ ದುರ್ಗ್ಗವಿಲ್ಲಳವುಗುಂದದ ಸಾಸಿಗರಿಲ್ಲ ಕೊಟ್ಟು ಕಾ-
ಣದ ನೃಪರಿಲ್ಲ ಚಿ[1] [ಗೆಱಗೆ]ಯ್ಯದ ಜಟ್ಟಿಗರಿಲ್ಲ ಕಾದಿ ಸೋ-
ಲದ ರಣಧೀರರಿಲ್ಲೊ ಱ[3]ಯ ಬಾಯೊಳೆ ನೇಲದ ರಾಯರಿಲ್ಲ ಬೆ-
ಚ್ಚ್ರದ ಪರರಾಷ್ಟ್ರವಿಲ್ಲ ಭುಜಶಕ್ತಿಗೆ **ವಿಕ್ರಮ ಚಕ್ರವರ್ತ್ತಿ**ಯ ||೨೭೮||

## ಲಕ್ಷ್ಮೀನಿವಾಸಾಸ್ಪದ—ಬ್ಯಾಸಪುರ ಕಂಪಣ

ಈ ಕಂಪಣದಲ್ಲಿ ೧೪೦ ಹಳ್ಳಿಗಳಿದ್ದುವು.

ಕಂ|| ಆ ನಾಳ್ಗೆ[2] ತಿಲಕದಂತಿರೆ
ಭೂನಾರಿಯ ಕೊರಲ ಪದಕದಂತಿರಲುದಿತ-
ಶ್ರೀನಿಳಯಮಾಗಿ ರಂಜಿಪು-
ದೇನೆಂಬೆಂ **ಬ್ಯಾಸಪುರ**ದ ಮಹಿಮೋನ್ನತಿಯಂ ||೨೭೯||

ಅದು ನೂಱನಾಲ್ವತೆಂಬೀ
ಪದುಳಿಕೆಯಂ ತಳೆದು ಕಂಪಣ[ಂ*] ಶ್ರೀಯಿ[ಂ*]ದ-
ಭ್ಯುದಯ[ಂ*] ಲಕ್ಷ್ಮೀನಿವಾಸಾ-
ಸ್ಪದವೆನಲೀ ಬ್ಯಾಸಪುರವರಂ ರಂಜಿಸುಗುಂ ||೨೮೦||

## ಪುರುಷಾರ್ಥತೀರ್ಥ ಕಾಗಿನೆಲೆ ಹನ್ನೆರಡು

ಅಲ್ಲಿಗೆ ತಿಳಕದವೊಲು ಚೆ-
ಲ್ವೆಲ್ಲಮನೊಳಕೊಂಡು ವಿಮಳಕೀರ್ತ್ತಿಶ್ರೀಯಂ
ಪಲ್ಲವಿಸಿ ಕಾಗಿನೆಲೆ ಭೂ-
ವಲ್ಲಭೆಯೆನಿಸಿರ್ದ್ದ ಸಿರಿಯ ನೆಲೆಯವೊಲೆಸೆಗುಂ ||೨೮೪||

ಚಂ|| ಅದು ಸಿರಿಯಿರ್ಕ್ಕೆದಾಣವದು ಭಾಸುರಕೀರ್ತ್ತಿಯ ಜನ್ಮಗೇಹವ-
ನ್ತದು ವಿಜಯಾಂಗನಾನಿಳಯವನ್ತದು ಪುಣ್ಯಲತಾಪ್ರಬನ್ಧವ-
ನ್ತದು ಪುರುಷಾರ್ತ್ಥತೀರ್ತ್ಥವದು ಸತ್ಯದ ತಾಯ್ಮನೆ ಮಿಕ್ಕ ಹೆಮ್ಮೆಗಾ-
ಸ್ಪದಮೆನಿಸಿತ್ತು **ಕಾಗಿನೆಲೆ ಪನ್ನೆರಡೆ**ಂಬ ನಿಜಾಭಿಧಾನದಿ ||೨೮೫||

---

1. ಚಿ ಗುರು ಅಕ್ಷರವಾಗಬೇಕು. ಅಲ್ಲದೆ ಈ ಪಙ್ತಿಯಲ್ಲಿ ಒಂದು ಲಘ್ವಕ್ಷರದ ಕೊರ-ತೆಯೂ ಇದೆ.

2. ಆ ನಾಳ್ಗೆ : ಆ ನಾಡಿಗೆ, ಪೂರ್ವವರ್ಣಿತ ಬನವಾಸಿದೇಶಕ್ಕೆ. ಆ ಪದ್ಯ ಮೂಲತಃ ಸುಂದರವಾಗಿದ್ದರೂ ಅರ್ಥವನ್ನು ಸರಿಯಾಗಿ ಪೂರಯಿಸದಂತೆ ನಷ್ಟವಾಗಿರುವುದರಿಂದ ಅದನ್ನೆತ್ತಿ-ಕೊಂಡಿಲ್ಲ.

## ಪ್ರಚಂಡ ಶೋಭನಗೌಂಡ

ಚಕ್ರವರ್ತಿಯಿಂದ ಅಂಗಚಿತ್ತ, ಬೆಳ್ಗೊಡೆ ಮೊದಲಾದ ರಾಜಚಿಹ್ನಗಳನ್ನು ಈತನು ಪಡೆದಿದ್ದನು.

ಕಂ॥ ಆ ಕಾಗಿನೆಲೆಯ ವಿಪುಳ-
ಶ್ರೀಕಾನ್ತೆಗೆ ತಾನೆ ನೆಲೆಯೆನಿಪ್ಪಂ ವೀರ-
ಶ್ರೀಕಾನ್ತೆಯ ಮನದಿನಿಯಂ
ಪ್ರಾಕಟದೋರ್ದ್ದಣ್ಡನೆನಿಪ ಶೋಭನಗೌಣ್ಡ ॥೨೭೬॥

ಚಂ॥ ಉದಧಿಯನಾತ್ಮಕೀರ್ತ್ತಿ ಪರಿವೇಷ್ಟಿಸೆ **ಕುನ್ತಳ ಚಕ್ರವರ್ತ್ತಿ**ಯೊಳ್
ವಿದಿತವೆನಲ್ಕೆ ತಾನೆ ಪಡೆದಂ ಧರೆ ಬಣ್ಣಿಸಲಂಗಚಿತ್ತಮಂ
ಸದಮಳರಾಜಚಿಹ್ನವನಗುರ್ವ್ವಿನ ಹೆಮ್ಮೆಯನೊಳ್ಪುವೆತ್ತ ಚಂ-
ದ್ರದ ಕೊಡೆಯಂ ಬಬಾಪ್ಪಮಮ ಶೋಭನಗೌಣ್ಡನಿದೇಂ ಪ್ರಚಣ್ಡನೋ ॥

## ಧರ್ಮದ ಕಣಿ ಜಕ್ಕಿಸೆಟ್ಟಿ

ಇವನು ಗಳಿಸುವ ಹಣವೆಲ್ಲ ಧರ್ಮ-ಪರೋಪಕಾರಗಳಿಗೆ ವಿನಿಯೋಗವಾಗಿ, ಈತನ ವ್ಯವ-ಸಾಯವೆಂದರೆ ನಾಡಿಗೆ ಯೌವನದ ಪ್ರಾಪ್ತಿ ಎಂಬಂತಾಯಿತೆಂದೂ ದಿಗ್ವನಿತೆಯರ ಕುಚಗಳ ಮೇಲೂ ದಿಗ್ದಂತಿಗಳ ದಂತಗಳ ಮೇಲೂ 'ಜಕ್ಕಂ ಧರ್ಮದ ಕಣಿ' ಎಂದು ಕೀರ್ತಿ ಬರೆದಳೆಂದೂ ಇಲ್ಲಿ ಬಣ್ಣಿಸಿದೆ.

ಅನುಪಮವಾಯ್ತು ಧರ್ಮ್ಮಗುಣದುನ್ನತಿ ಲೋಕಹಿತಾರ್ತ್ಥವಾಯ್ತು ನೆ-
ಟ್ಟನೆ ಪಡೆದರ್ತ್ಥದಿಂದೊಸೆದು ಮಾಳ್ಪ ಪರಾರ್ತ್ಥವಿಳಾತಳಕ್ಕೆ ಜೌ-
ವನದೊದವಾಯ್ತು ಭಾವಿಸುವೊಡಾ ಬ್ಯವಸಾಯವೆನುತ್ತೆ ಜಕ್ಕಿಸೆ-
ಟ್ಟಿಯನನುರಾಗದಿಂ [1] ಪದೆದು ಬಣ್ಣಿಸುತಿಪ್ಪುದು ಭೂವಿಭೂತಳಂ ॥೨೭೮॥

ಕಂ ॥ ದಿಕ್ಕಾಮಿನಿಯರ ಕುಚದೊಳು
ದಿಕ್ಕರಿಗಳ ಧವಳಯುಗ್ಮದಂತಚ್ಛವಿಯೊಳ್
ಜಕ್ಕಂ ಧರ್ಮ್ಮದ ಕಣಿಯೆಂ-
ಬಕ್ಕರವಂ ಕೀರ್ತ್ತಿ ಬರೆದಳೀಜಗವಱಿಯಲ್ ॥೨೭೯॥

## ಶೋಭನಸೆಟ್ಟಿ (ಜಕ್ಕಿಸೆಟ್ಟಿಯ ಮಗ)

ಚಂ॥ ಪರಮಪರೋಪಕಾರ[2] ಗುಣದೊಳ್ಸ[2] ಚರಿತ್ರದೊಳಾಪ್ಪಿನೊಳ್ ಕಳಾ-
ಪರಿಣತಿಯೊಳ್ ಜನಂ ಪೊಗಳ್ವ[3] ಸಮೃದ್ಧಿಯೊಳತ್ಯುದಾರದೊಳ್

1. ಶಾ. ಮೂ. ಪಡೆದು
2. ಶಾ. ಮೂ. : ಗುಣಭೂಷಣದೊಳ್
3. ಪೊಗಳ್ವ ಎಂಬ ಪದದ ತರುವಾಯ ಎರಡು ಅಕ್ಷರಗಳ (—u) ಕೊರತೆಯಿದೆ.

ನಿರುಪಮ ಧರ್ಮ್ಮಕಾರ್ಯ್ಯದೆಡೆಯೊಳ್ ಸಲೆ ಶೋಭನಸೆಟ್ಟಿಯೊಳ್ದಿಟಂ
ಸರಿ ದೊರೆ ಪಾಟಿ ಪಾಸಟಿ ಸಮಂ ತೊನೆಯೆಂದಡೆ ದೋಸಮಾಗದೆ ||೨೮೦||

ವ|| ಅವರ ಸೇನಬೋವ ಹೊಲ್ಲಣನೀಧರ್ಮ್ಮಕ್ಕಧಿಷ್ಠಾಯಕನಾಗಿ ನಡಸು-ತಿರ್ದ್ದ[೦*]

## ಗೊಟ್ಟಿಗಡಿ – ಶ್ರೀಅಂಗಜೇಶ್ವರ

ಬ್ರಹ್ಮನು ಸುಮ್ಮನೆ ನಾಲ್ಕು ಮುಖದವನಾಗಲಿಲ್ಲ. ಗೊಟ್ಟಿಗಡಿಯ ಅಂಗಜೇಶಪುರವನ್ನು ವರ್ಣಿಸುವುದಕ್ಕೆ (ಒಂದು ಮುಖ ಸಾಲಲಿಲ್ಲವೆಂದು) ನಾಲ್ಕು ಮುಖದವನು ಆದನಂತೆ. ಇದರ ಚೆಲುವು, ಹಿರಿಮೆ ಅಷ್ಟು ಅನಂತವಾದುದು ಎಂದಿದ್ದಾನೆ ಕವಿ.

ಕಂ || ಇಂತಿನಿಬರುಮುತ್ಸವದಿಂ
ಸಂತೊಸನಂ[1] ತಳೆದು ಗೊಟ್ಟಿಗಡಿಯೊಳು ಸಲೆ ನಿ-
ಶ್ಚಿಂತದಿನಿರುತಂ ಧರ್ಮ್ಮದ
ಚಿಂತನೆಯಿಂದಂಗಜೇಶದೇವಾಲಯಮಂ ||೨೮೧||

ಚಂ|| ಇದು ಕವಿಳಾಸದಂದವಿದು ಭಾವಿಪೊಡಾ ಸಿರಿಶೈಳದೊಪ್ಪವಿ-
ನ್ತಿದು ರಜತಾಚಳಕ್ಕೆ ದೊರೆಯೆಂಬಿನೆಗಂ ನೆಗಳ್ದಂಗಜೇಶನೊ-
ಳ್ಪೊದವಿದ ದೇವತಾಸದನಮಂ ನೆಱೆ ಮಾಡಿದರೆಂದೊಡಿನ್ನದಾ-
ವುದೊ ಪಡಿ ಮಿಕ್ಕ ಗೊಟ್ಟಿಗಡಿಗಬ್ಧಿಪರೀತಧರಾತಳಾಗ್ರದೊಳ್ ||೨೮೨||

ವ|| ಆ ಗೊಟ್ಟಿಗಡಿಯ ಮಹಿಮೆಯೆಂತೆಂದಡೆ,
ದಿನಕರನಿಂದೆ ಪದ್ಮವನಮೊಪ್ಪುವವೋಲ್ ಸಸಿಯಿಂದಮುತ್ಪಳಂ
ಜನನುತಮಾಗಿ ರಂಜಿಸುವವೋಲ್ ಚೆಲುವಾದ ವಸಂತನಿಂದೆ ನ-
ನ್ದನವನಮೊಳ್ಪನಾನ್ತವೊಲು ಮಾಡಿಪನೆಂಬ ನೆಗರ್ತ್ತೆ**ಯಂಗಜೇ-
ಶನ ಪುರದಿಂದೆ ಗೊಟ್ಟಿಗಡಿ ರಂಜಿಸುಗುಂ ಬನವಾಸೆ ದೇಶದೊಳ್** ||

ಕಂ || ಬಗೆಗೊಂಡು ಗೊಟ್ಟಿಗಡಿಯೊಳು
ಸೊಗಯಿಸಿ ತೋರ್ಪ್ಪಂಗಜೇಶದೇವನ ಪುರಮಂ
ಪೊಗಳಲ್ಕೆಱೆಯದೆ ನಾಲ್ಕುಂ
ಮೊಗವಾದಂ ಬ್ರಹ್ಮನುಂತೆ ಚತುರಾನನನೇ ||೨೮೪||

---

1 ಬಳಕೆ ಮಾತಿನಲ್ಲಿದ್ದ 'ಸಂತೊಸ' ಎಂಬ ತದ್ಭವರೂಪವನ್ನು ವೈಯಾಕರಣಿಗಳು, ಪಂಡಿತರು 'ಸಂತಸ' ಎಂದು ರೂಪಿಸಿಕೊಂಡರೆಂದು ತೋರುತ್ತದೆ.

## ೫೯

**ಶ್ರವಣಬೆಳುಗೊಳ,**
**ಚೆನ್ನರಾಯಪಟ್ಟಣ ತಾಲೂಕು,**
ಹಾಸನ ಜಿಲ್ಲೆ

**ಕ್ರಿ. ಶ. ಸು. ೧೧೨೩**
**ಹೊಯ್ಸಳ ವಿಷ್ಣುವರ್ಧನ**
(ಎಪಿ. ಕ. ೨, ಪು. ೫೮)

### ಹೊಯ್ಸಳ ಎಱೆಯಂಗ-ವಿಷ್ಣುವರ್ಧನರು

ಇವರಿಬ್ಬರು ತಂದೆ ಮಕ್ಕಳು. ಒಂದು ಪದ್ಯದಲ್ಲಿ ಎಱೆಯಂಗನ ಕೋಪಾಗ್ನಿಯೂ ಒಂದು ಪದ್ಯದಲ್ಲಿ ವಿಷ್ಣುವರ್ಧನನ ಪ್ರತಾಪವೂ ವರ್ಣಿತವಾಗಿವೆ. ಕೋಪಾಗ್ನಿಯ ವರ್ಣನೆಯನ್ನು ಓದುವಾಗ, ಕಾಳ್ಕಿಚ್ಚು ಹೊತ್ತಿಕೊಂಡು ಉರಿಯುತ್ತಿರುವಂತೆಯೇ ಭಾಸವಾಗುತ್ತದೆ. 'ಸರ್ವಂ ವಿಷ್ಣುಮಯಂ ಜಗತ್' ಎಂಬ ಉಕ್ತಿಯನ್ನು ವಿಷ್ಣುವರ್ಧನನ ಪ್ರತಾಪದ ವರ್ಣನೆಗೆ ಅನ್ವಯಿಸಿಕೊಂಡು ಅವನಿಗಂಜಿ ಓಡುತ್ತಿರುವ ಶತ್ರುರಾಜರ ಎದೆಯೊಳಗಿನ ಭುಗಿಲನ್ನು ಕವಿ ಸೊಗಸಾಗಿ ವ್ಯಕ್ತಗೊಳಿಸಿದ್ದಾನೆ. ಎತ್ತ ಓಡಬೇಕೆಂಬುದು ತಿಳಿಯದಂತೆ ಅವರಿಗೆ ಎಲ್ಲೆಲ್ಲಿಯೂ ವಿಷ್ಣುವರ್ಧನನೇ ಕಾಣುತ್ತಿದ್ದನಂತೆ !

#### ಕೋಪಾಗ್ನಿ

ಚಂ|| ಅರಿಪುರದೊಳ್ಧಗದ್ಧಗಿಲು ಧಂಧಗಿಲೆಂಬುದರಾತಿಭೂಮಿಪಾ-
ಲರ ಶಿರದೊಳ್ಗರಿಲ್ಗರಿ ಗರೀಗರಿಲೆಂಬುದು ವೈರಿಭೂತಳೇ-
ಶರ ಕರುಳೊಳ್ಚಿಮಿಲ್ಚಿಮಿ ಚಿಮೀಚಿಮಿಲೆಂಬುದು ಕೋಪವಹ್ನಿದು-
ರ್ದ್ಧರತರಮೆಂದೊಡಳ್ಕುಱದೆ ಕಾದುವರಾರೆಱೆ**ಯಂಗದೇವ**ನ ||೨೭೫||

#### ಸರ್ವಂ ವಿಷ್ಣುಮಯಂ ಜಗತ್

ಶಾ. ವಿ|| ದುರ್ಬ್ಬಾರಾರಿಧರಾಧರೇಂದ್ರಕುಲಿಶಂ **ಶ್ರೀವಿಷ್ಣುಭೂಪಾಳ**ನಾ-
ದ್ದೋರ್ಬ್ಬೆರ್ಟ್ಟಲ್ ಸೆಡೆದೋಡಿ ಪೋಗಿ ಭಯದಿಂದಾ ಬಂದಸೀ ಬಂದನೆಂ-
ದುರ್ಬ್ಬೀಪಾಳರ ಕಂಗೆ ಲೋಕಮನಿತುಂ ತದ್ರೂಪಮಾಗಿರ್ಪ್ಪಿನಂ
**ಸರ್ಬ್ಬಂ ವಿಷ್ಣುಮಯಂ ಜಗತ್ತೆ**ನಿಪಿದೇಂ ಪ್ರತ್ಯಕ್ಷಮಾಗಿರ್ದ್ದುದೋ||

## ೬೦

**ಆಲೂರು,**
**ಗದುಗು ತಾಲೂಕು,**
ಧಾರವಾಡ ಜಿಲ್ಲೆ

**ಕ್ರಿ. ಶ. ೧೧೨೪**
**ಚಾಳುಕ್ಯ ೬ನೆಯ ವಿಕ್ರಮಾದಿತ್ಯ**
(ಸೌ. ಇಂ. ಇನ್ಸ್. ೧೧, ಪು. ೨೨೨)

### ಜನಮೇಜಯನ ದತ್ತಿ

ಈ ಆಲೂರನ್ನು ಶಾಸನದಲ್ಲಿ ಮೂಳದಾಲೂರು ಎಂದು ಹೆಸರಿಸಿದೆ. ಇದೊಂದು ಅಗ್ರಹಾರವಾಗಿತ್ತು. ಇಲ್ಲಿಯ ಇನ್ನೂರ್ವರು ಮಹಾಜನಗಳು ಧರ್ಮವನ್ನು ಸುರಕ್ಷಿತವಾಗಿ ಕಾಯ್ದು-

ಕೊಂಡಿದ್ದರು. ಅದಕ್ಕೆ ಮೆಚ್ಚಿದ ಜನಮೇಜಯ (ಪಾಂಡವರ ಮರಿಮಗ)ನು ಈ ಊರನ್ನು ಅವರಿಗೆ ದತ್ತಿಬಿಟ್ಟನಂತೆ.

ವ|| ಶ್ರೀಮನ್ಮಾಳದಾಲೂರ ಊರೊಡೆಯ ಪ್ರಮುಖ ಮಹಾಜನವಿನ್ನೂರ್ವ್ವರುಂ ಧರ್ಮ್ಮಂಗಳಂ ಸ್ವಧರ್ಮ್ಮದಿಂ ಸುರಕ್ಷಿತಮಾಗಿ ಪರಿರಕ್ಷಿಸುತ್ತಮಿರ್ಪ್ಪದಕಣ್ಡು

ಮ. ವಿ.|| ಧರಣೀಕಾನ್ತೆಗೆ ಮಾಸವಾಡಿವಿಷಯಂ ಚೆಲ್ವಾಗಿ ಮಾಣಿಕ್ಯದಾ-
ಭರಣಂಬೋಲೆಸೆದಿರ್ಪ್ಪುದಾ ವಿಷಯದೊಳ್ತಾಂ **ಮಾಳದಾಲೂರ್ದ್ಧ**ರಾ-
ಮರರಿನ್ನೂರ್ವ್ವರಿಗಗ್ರಹಾರಮಂದನೊಳ್ಪಿಂ ಮುನ್ನೆ ಬಿಟ್ಟಂ ನರೇ-
ಶ್ವರರತ್ನಂ **ಜನಮೇಜಯಾಖ್ಯ**ನೆನಲಿನ್ನೇವಣ್ಣಿಪಂ ಬಣ್ಣಿಪ ||೨೮೭||

## ಸುರಿಗೆಯ ನಾಗರಸ

ಈತನು ತ್ರಿಭುವನಮಲ್ಲ ಚಾಳುಕ್ಯ ವಿಕ್ರಮಾದಿತ್ಯನ ಅಂತಃಪುರಾಧ್ಯಕ್ಷನೂ ತಂತ್ರಪಾಳನೂ ಪಸಾಯಿತನೂ ಆಗಿದ್ದನು. ಕುಂತಳಪತಿ (ಚಾಳುಕ್ಯ ಚಕ್ರವರ್ತಿ) ಕೊಟ್ಟ ಸುರಿಗೆ (ಕಿರುಗತ್ತಿ) ಯನ್ನು ಹಿಡಿಯುತ್ತಿದ್ದುದರಿಂದ ಈತನಿಗೆ 'ಸುರಿಗೆಯ ನಾಗರಸ' ಎಂಬ ಹೆಸರು ರೂಢವಾಗಿತ್ತು. ಅಂತಃಪುರಾಧ್ಯಕ್ಷತೆ, ತಂತ್ರಪಾಳಿಕೆ, ಸುರಿಗೆ ಇವು ಮಹಾಮಾತ್ಯಪದವಿಯ ಅಧಿಕಾರಗಳೆಂದು ಇದೇ ಊರ, ಇದೇ ವರ್ಷದ ಇನ್ನೊಂದು ಶಾಸನದಿಂದ (ನಂ. ೬೧) ತಿಳಿಯುವುದರಿಂದ ಈ ನಾಗರಸನು ಮಹಾಮಾತ್ಯನಾಗಿದ್ದನೆಂದು ಗೊತ್ತಾಗುತ್ತದೆ.

ಕಂ || ವರಗಾಂಗೋದಕದನ್ದದಿ-
ನರಳಿಯುಮರದನ್ದದಿಂ ಪವಿತ್ರಮೆನಲ್ಬಿ-
ತ್ತರಿಸಿದ ತದೀಯ ವಿಪ್ರಾ-
ಭರಣಂ **ನಾಗರಸ**ನತ್ರಿಗೋತ್ರಪವಿತ್ರಂ ||೨೮೮||

ಉ. ಮಾ|| ತನ್ನಯ ತಿಣ್ಪಿನೇಳ್ಗೆ ಪಡಿಕಟ್ಟಳೆಯಾದುದು ಮಂದರಕ್ಕೆ ತ-
ನ್ನುನ್ನತಿ ಮೇರುವಿಂಗೆ ಮಣಿಚೂಣಿಕೆ[1]ಯಾದುದು ತನ್ನ ಮಿಕ್ಕ ದಾ-
ನನ್ನವಕಲ್ಪವಲ್ಲರಿಗೆ ಪೊಂಗುಡಿಯಾದುದು ತನ್ನ ಕೀರ್ತ್ತಿ ಕ-
ಯ್ಗನ್ನಡಿಯಾದುದುರ್ವ್ವಿಗೆನೆ ನಾಗರಸಂ ನೆಗರ್ದ್ದಂ ಧರಿತ್ರಿಯೊಳ್ ||

## ೬೧

( ಅದೇ ಊರ, ಅದೇ ವರ್ಷದ ಶಾಸನ. ಅದೇ ಪುಸ್ತಕ ಪು. ೨೨೫ )

## ಮಹಾಮಾತ್ಯ ಪದವಿಯ ಅಧಿಕಾರಗಳು

ಕಂ || ಅನ್ತಃಪು[2]ರದಧ್ಯಕ್ಷಂ
**ಕುನ್ತಳಪತಿ**ಯಿತ್ತ ಸುರಿಗೆವಿಡಿವಧಿಕಾರಂ

1. ಶಾ. ಮೂ. ಚೂಣಿ
2. ಶಾ.ಮೂ. ಅನ್ತಃಪ್ಪ

ಸಸ್ತ್ರತದ ತನ್ತ್ರಹಾಳಿಕೆ[1]-
ಯಿನ್ತು ಮಹಾಮಾತ್ಯಪದವಿಗಿವು ಸಂಚಕರ ॥೨೯೦॥

## ೬೨

**ಆಡಕಿ,** ಕ್ರಿ. ವ. ಸು. ೧೧೧೫

ಕಲಬುರ್ಗಿ ಜಿಲ್ಲೆ

**ಚಾಳುಕ್ಯ ೬ನೆಯ ವಿಕ್ರಮಾದಿತ್ಯ**

(ಜೈ. ಶಾ. ಇಂ. ಪು. ೩೦೮)

### ಪರಹಿತಾರ್ಥಿ ಸೀರೆಯ ಕಾಳಿಸೆಟ್ಟಿ

ಚಂ॥ ಮಱದುವಸತ್ಯವಂ ನುಡಿಯ ಬೇಡಿದ ವಸ್ತುವನಾರ್ಗ್ಗವಿಲ್ಲೆನ-
ಲ್ಕಱಿಯನಶೇಷಭವ್ಯಜನಸಂತತಿಗಳ್ ಪೊಗಳ್ವಂನ ಭಕ್ತಿಯಂ
ಮೆಱೆವ ಜಿನೇಂದ್ರನೊಳ್ ಪರಹಿತಾರ್ತ್ಥವೆ ಮೆಯ್ಯೆನಿಸಿರ್ಪ್ಪನೆಂದು ಹೇ-
ರಱಿಕೆಯ ದಾನಿಯಂ ಪೊಗಳ್ವುದೀ ಧರೆ ಸೀರೆಯ ಕಾಳಿಸೆಟ್ಟಿಯಂ ॥೨೯೧॥

## ೬೩

**ಮುಗುದ,** ಕ್ರಿ. ವ. ೧೧೨೫

**ಧಾರವಾಡ ತಾಲೂಕು,**

ಧಾರವಾಡ ಜಿಲ್ಲೆ

**ಚಾಳುಕ್ಯ ೬ನೆಯ ವಿಕ್ರಮಾದಿತ್ಯ**

( ಸೌ. ಇಂ. ಇ. ೧೧, ಪು. ೨೩೧ )

### ಮುಗುದ ಮೂವತ್ತು

ಹಲಸಿಗೆ ೧೨೦೦೦ದೊಳಗಿನ ಮಹಾರಾಜವಾಡಿನಾಡೊಳಗೆ ಈ ಊರು ' ಮುಗುಂದ ಮೂವತ್ತು ' ಎಂಬ ಭೌಗೋಳಿಕ ಭಾಗದ ಮುಖ್ಯ ಸ್ಥಳವಾಗಿತ್ತು.

ಕಂ ॥ ಹಲಸಿಗೆ ಪನ್ನಿಚ್ಚಾರ್ಛಸಿರ-
ಮೊಳಗೆ **ಮಹಾರಾಜವಾಡಿನಾಡೆಂ**ಬುದು ಭೂ-
ಲಲನಾಲಪನಮುದಕ್ಕೆ
ತಿಲಕವೆನಿಪ್ಪುದು **ಮುಗುಂದ** ಮೂವತ್ತೆಂದುಂ ॥೨೯೩॥

### ವಿಭು ಚಾವುಂಡರಾಯ

ಇವನು ಶಾಸನ ಕಾಲದಲ್ಲಿ ಮುಗುದ ಮೂವತ್ತನ್ನಾಳುತ್ತಿದ್ದ ನಾಕರಸನ ಅಜ್ಜನ ತಂದೆ.

---

1. ತಂತ್ರಹಾಳಿಕೆ : ತಂತ್ರಪಾಳಿಕೆ

ಕೆಱೆ ಬಾವಿ ಬಸದಿ ದೇಗುಲ-
ಮಱವಟ್ಟಿಗೆ ಸತ್ರಮೆಂಬ ಧರ್ಮ್ಮಮವಿನಿತುಂ
ನೆಱೆದುವು ಮುಗುಂದ ಮೂವ-
ತ್ತಱ ವಿಭು **ಚಾವುಣ್ಡರಾಯ**ನಿಂದಂ ಜಗದೊಳ್ ॥೨೯೩॥

## ನಾಕರಸ

ಮುಗುದದಲ್ಲಿ ಆಳುತ್ತಿದ್ದ ಸಾಮಂತ ನಾಕರಸ. ಈತನ ಕೀರ್ತಿ ಈತನೊಡನೆಯೆ ಹುಟ್ಟಿದ್ದಿತೆಂದು, ಅದೇಕೆ ಈತನಿಗಿಂತ ಒರ್ಮೊದಲೆ ಅದು ದಿಗಂತರಾಳವನ್ನು ಮುಟ್ಟಿದ್ದಿತೆಂದು ಅತ್ಯುಕ್ತ್ಯಲಂಕಾರದಿಂದ ಇಲ್ಲಿ ಬಣ್ಣಿಸಿದೆ. 'ಇವನ ಶ್ರೇಯಸ್ಸಿಗಾಗಿ ಇತರರು ಪ್ರಾರ್ಥಿಸುವ ಆಗತ್ಯವುಂಟೆ? ಈತನ ಗುಡಿ, ಈತನ ಕೆರೆ, ಈತನ ಅನ್ನದಾನ ಇವೇ ಈತನ ಆಯುವನ್ನೂ ಶ್ರೀಯನ್ನೂ ಹೆಚ್ಚಿಸವೆ?' ಎಂದಿದ್ದಾನೆ ಕವಿ. ಈತನ ವರ್ಣನೆಯ ಮೊದಲ ಪದ್ಯದ ಕೊನೆಯ ಚರಣದ ಬಹ್ವಂಶ ನಶಿಸಿಹೋಗಿದ್ದರೂ ಉಳಿದ ಮೂರರಲ್ಲಿಯ ಅನುಪ್ರಾಸದ ಪದಗುಂಫನ ಮನದಟ್ಟುವಂತಿದೆ.

ಚಂ॥ ಚದುರೊಡವುಟ್ಟಿ ಲಕ್ಷ್ಮಿ ಸಮುಕಟ್ಟಿ ಗುಣಂ ಗುಡಿಗಟ್ಟಿ ಬೀರದೊ-
ಳ್ಪೊದವಿ ಪೊದಳ್ದು ವೈರಿಗಳನಾರ್ದ್ದೆಱೆಯುಟ್ಟಿ ನೆಗರ್ತ್ತೆ ಕೀರ್ತ್ತಿವೊ-
ರ್ಮ್ಮೊದ[1]ಲೆ ದಿಗಂತರಾಳಮನೆ ಮುಟ್ಟಿ ಚಲಂ ನೆಱೆ ಪುಟ್ಟಿ **ನಾಕಿಗಾ**-
................... ... .. ............... ........ನ್ನತಿ ಪುಟ್ಟುವಂದದಿಂ ॥೨೯೪॥

ಕಂ॥ ಕೀರ್ತ್ತಿವೊಡವುಟ್ಟಿ, ಕರ್ಣ್ಣಂ
ಮಾರ್ತ್ತಣ್ಡಂಗೆಸೆಯೆ ಪುಟ್ಟಿದಂದದೆ ಸಿರಿಯುಂ
ಕೀರ್ತ್ತಿಯುಮೊದವೆ ಮುಗುಂದದ[2]
ಮಾರ್ತ್ತಣ್ಡಂ[3]ಗೆಸೆಯೆ ಪುಟ್ಟಿದಂ ನಾಕರಸಂ ॥೨೯೫॥

ಮಾಡಿಸುವಾಯತನಂಗ-
ಳ್ಮಾಡಿಸುವಾಹಾರದಾನ ಧರ್ಮ್ಮಗುಣಂಗ-
ಳ್ಮಾಡಿಸುವ ಕೆಱೆಗಳಿನಿತುಂ
ಮಾಡವೆ **ಸಾಮನ್ತ ನಾಕಿಗಾ**ಯುಂ ಶ್ರೀಯುಂ ॥೨೯೬॥

---

1. ಶಾ. ಮೂ. ದ ಇಲ್ಲ.

2. ಶಾಸನಮೂಲದಲ್ಲಿ ಇಲ್ಲಿ ಮಾತ್ರ 'ಮುಗುಂದ' ಎಂದಿದ್ದು, ಉಳಿದ ಕಡೆಗಳಲ್ಲೆಲ್ಲ 'ಮುಗುದ' ಎಂದೇ ಇದೆ. 'ಮುಗುದ' ಎಂದಿದ್ದರೆ ಛಂದೋದೋಷವುಂಟಾಗುವುದರಿಂದ ಕವಿಯ ಪ್ರಯೋಗ ಮುಗುಂದ ಎಂದೇ ಇರಬಹುದು. ಕಂಡರಣೆಕಾರನ ಕೈಯಲ್ಲಿ ಮುಗುದ ಆಗಿರಬಹುದು. ಇದರಿಂದ, ಆ ಕಾಲದಲ್ಲಿ 'ಮುಗುದ' ಎಂಬ ಹೆಸರೂ ರೂಢವಾಗಿತ್ತೆಂದು ಕಾಣುತ್ತದೆ.

3. ಮಾರ್ತ್ತಂಡ : ನಾಕರಸನ ತಂದೆಯ ಹೆಸರು

## ೬೪

**ನರೇಂದ್ರ,** **ಕ್ರಿ. ಶ. ೧೧೨೫**

**ಧಾರವಾಡ ತಾಲೂಕು,** **ಚಾಳುಕ್ಯ ೬ನೆಯ ವಿಕ್ರಮಾದಿತ್ಯ**

ಧಾರವಾಡ ಜಿಲ್ಲೆ (ಎಪಿ. ಇಂ. ೧೪, ಪುಟ ೩೦೧)

ಧಾರವಾಡದಿಂದ ನಾಲ್ಕು ಮೈಲಂತರದಲ್ಲಿರುವ ಈಗಿನ ನರೇಂದ್ರಕ್ಕೆ ಕುಂದೂರು ಎಂಬ ಹೆಸರಿತ್ತು. ನಾಡು-ಊರುಗಳ ಹಿರಿಮೆಯನ್ನೂ ಸಿಂಗಣ ದಂಡನಾಥನು ಲಕ್ಷ್ಮನ ಹೆಸರಿನಿಂದ ಕಟ್ಟಿಸಿದ ಲಕ್ಷ್ಮೇಶ್ವರ ದೇವಾಲಯದ ಹೆಚ್ಚಳವನ್ನೂ ಇಲ್ಲಿಯ ಪದ್ಯಗಳು ಸಾರುತ್ತಿವೆ.

### ನಾಡುಗಳ ಬಲ್ಲಹ ಹಲಸಿಗೆನಾಡು

ಚಂ|| ಜಳನಿಧಿಮೇಖಳಾಕಳಿತಭೂಮಿಗೆ ಕುನ್ತಳಶೋಭೆಯೆನ್ತು **ಕು-**
**ನ್ತಳವಿಷಯಂ** ಮನಂಗೊಳಿಸಿ ತೋರ್ಪ್ಪುದು ತದ್ವಿಷಯಕ್ಕೆ ಚಂಕನ-
ತ್ತಿಳಕದವೊಲ್ ವಿರಾಜಿಸುತಮಿರ್ಪ್ಪುದು ಭಾವಿಸೆ ಚಿತ್ತದೋಹಲಂ
**ಹಲಸಿಗೆನಾಡು** ನಾಡುಗಳ ಬಲ್ಲಹನುತ್ತಮು[1] ವಸ್ತುವಿಸ್ತೃತ ||೨೯೭||

### ವಿಷಯವಿಭೂಷಣ ಕುಂದೂರು

ಉ.ಮಾ||[2] ಆ ಕಮನೀಯಮಪ್ಪ[2] ವಿಷಯಕ್ಕೆ ವಿಭೂಷಣಮಾಗಿ ತೋರ್ಪ್ಪ **ಕುಂ-**
**ದೂರ**ನದೊಂದು ನಾಲಗೆಯ ಮಾನವನೇವೊಗಳ್ದಪ್ಪನೆಯ್ದೆ ಕೈ-
ವಾರದೊಳಾ ನೆಗರ್ತ್ತೆಯಮರಾವತಿ ಮಿಕ್ಕಳಕಾಪುರಂ ಜಗ-
ತ್ಸಾರವೆನಿಪ್ಪ ಭೋಗವತಿ ತಾನೆನಿಕುಂ ವಸುಧಾಂತರಾಳದೊಳ್ ||೨೯೮||

### ಧರ್ಮಹರ್ಮ್ಯಾಸ್ಪದರಂಗ ಲಕ್ಷ್ಮೇಶ್ವರ ದೇವಾಲಯ

ಮ.ವಿ.|| ಇದೆ ದಲ್ ಭಾವಿಸಲಗ್ರ್ಯತೀರ್ತ್ಥವಿದೆ ದಲ್ ವಾರಾಣಸೀತೀರ್ತ್ಥವಿಂ-
ತಿದೆ ದಲ್ ತೀರ್ತ್ಥವರಂ ಪ್ರಯಾಗೆ ಪಲವುಂ ತೀರ್ತ್ಥಂಗಳುಂ ಮತ್ತವಿಂ-
ತಿದೆ ದಲ್ ನಿಶ್ಚಯಮೆಂದು ಸಿಂಗಣಚಮೂಪಂ ಬೇಱೆ[3] ಕೈಳಾಸಮಂ
ಪದುಳಂ ಮಾಡಿಸಿದಂ [3] ಜಗಕ್ಕೆನಿಪುದೀ [4] ಶ್ರೀಲಕ್ಷ್ಮಲಕ್ಷ್ಮೇಶ್ವರ ||೨೯೯||

---

1. ಶಾ. ಮೂ. ಬಲ್ಲಹನುತ್ತಮಂ.

2. ವಿದಗ್ಧವಿರಚಿತವಾದ ಈ ಶಾಸನದಲ್ಲಿ ಎಲ್ಲಿಯೂ ಕಂಡುಬಾರದ ಪ್ರಾಸದೋಷ ಇಲ್ಲಿ ಉಂಟಾಗಿದೆ. ಕವಿರಚನೆಯಲ್ಲಿ ಬಹುಶಃ 'ಆ ರಮಣೀಯಮಪ್ಪ' ಎಂದಿದ್ದುದು ಕಂಡರಣೆಯಲ್ಲಿಯೋ ಮೂಲದ ಓದಿಕೆಯಲ್ಲಿಯೋ ಈ ವ್ಯತ್ಯಾಸವಾಗಿರುವ ಸಂಭವವಿಲ್ಲದೆ ಇಲ್ಲ.

3. ಶಾ. ಮೂ.: ಜಗಕ್ಕೆನಿಸುಧು

4 ಲಕ್ಷ್ಮ ಎಂಬುದು ಸಿಂಗಣ ದಂಡಾಧಿಪನ (ಬಹುಶಃ) ತಂದೆಯ ಹೆಸರೋ ಅಥವಾ ಇನ್ನಾರ ಹೆಸರೋ ?

ಮ.ಸ್ರ || ವಿದಿತಂ ಶ್ರೀಪರ್ವ್ವತಂ ಬಂದವತರಿಸಿದುದೋ ರಮ್ಯಹಿಮ್ಯಾಚಳಂ ಪು-
ಟ್ಟಿದುದೋ ಬೇಱೊಂದು ಮೇರುಕ್ಷಿತಿಧರಮೆ ದಿಟಂ ದೇವತಾಗಾರದಂತಿ-
ರ್ದ್ದುದೊ ಪೇಳೆಂಬನ್ನೆಗಂ ಪೆರ್ಮ್ಮೆಯಿನೆಸೆದು ಜಗಕ್ಕೊಪ್ಪುಗುಂ
ಧರ್ಮ್ಮಹರ್ಮ್ಮ್ಯಾ-
ಸ್ಪದರಂಗಂ ಸಿಂಗಣ[ಂ*] ಮಾಡಿಸಿದ ಶಿವಗೃಹಂ ಲಕ್ಷ್ಮನಾಮಾಭಿರಾಮು||

## ೬೫

**ನರೇಂದ್ರ,**
**ಧಾರವಾಡ ತಾಲೂಕು,**
ಧಾರವಾಡ ಜಿಲ್ಲೆ

**ಕ್ರಿ. ವ. ೧೧೨೩-೨೬**
**ಚಾಳುಕ್ಯ ೬ನೆಯ ವಿಕ್ರಮಾದಿತ್ಯ**
(ಎಪಿ. ಇಂ. ೧೪, ಪುಟ ೩೨೦)

### ವಿಜಿಗೀಷು ಲಕ್ಷ್ಮಣ

ಚಾಳುಕ್ಯ ಚಕ್ರೇಶ್ವರನ ಮಗಳು (ಕದಂಬ ೨ನೆಯ ಜಯಕೇಶಿಯ ಸತಿ) ಮೈಲಳ ದೇವಿಯ ಮನೆವೆರ್ಗ್ಗಡೆ ಈತ. ಈತನು ಚಿಕ್ಕಂದಿನಿಂದಲೂ ಚಕ್ರವರ್ತಿಗೆ ಸಹಕಾರಿಯಾಗಿದ್ದನು. ಕಡಲವರೆಗೂ ಸಾಗಿಹೋಗಿ ದುಷ್ಟರನ್ನು ಮೀಟಿ, ಕೊಂಕಣವನ್ನು ನಿಷ್ಕಂಟಕವಾಗಿ ಮಾಡಿದ ಇವನನ್ನು ಚಕ್ರವರ್ತಿ ಹೊಗಳಿದನಂತೆ.

ಚಂ|| ನಡೆದು ಪಸಾಯಿತಂ[1] ಪತಿಗೆ ದಟ್ಟಡಿಯೊಳ್ ತೊದಳಿಲ್ಲೆನಲ್ ಕೊದಲ್
ನುಡಿದು ಪಸಾಯಿತಂ[1] ಪತಿಗೆ ಬಾಲ್ಯದೊಳನ್ಯನೃಪಂಗೆ ಭಂಗಮಂ
ಪಡೆದು ಪಸಾಯಿತಂ[1] ಪತಿಗೆ ಜೌವನದೇಳ್ಗೆಯೊಳೆಂದೊಡೆಲ್ಲಿಯುಂ
ಬಿಡದೆ ಪಸಾಯಿತಂ[1] ಸಲೆ ಪಸಾಯಿತ[2] **ಲಕ್ಕಣದಂಡನಾಯಕಂ**||೩೦೧||

ಉ.ಮಾ|| ಗೆಂಟಱೊಳಿರ್ದ್ದು ನೋಡಲುಮಸಹ್ಯಮೆನಲ್ ದೊರೆವೆತ್ತ ಸಹ್ಯಮಂ
ದಾಂಟೆ ನಿಸರ್ಗ್ಗದುರ್ಗ್ಗಜಳಮಂ ಜಳರಾಶಿಯನೀಂಟೆ ದುಷ್ಟರಂ
ಮೀಂಟೆ ನಿ[ಮಿರ್ಚ್ಚಿ*]ದಂ ನೆಲನನಂಕದ ಕೊಂಕಣಮೀಗಳಾಯ್ತು ನಿಃ-
ಕಂಟಕಮೆಂದು ಚಕ್ರಿ ಪೊಗಳಲ್ ನೆಗಳ್ದಂ ವಿಜಿಗೀಷು ಲಕ್ಷ್ಮಣಂ||೩೦೨||

---

1 ಶಾ. ಮೂ. ಪಸಾಯ್ತಂ

2. ಶಾ. ಮೂ. : ಪಸಾಯ್ತ. ಕವಿ ಪಸಾಯಿತ (ಪಸಾಯ್ತ ಎಂದಿದ್ದರೆ ಛಂದೋಭಂಗ ವಾಗುತ್ತದೆ) ಎಂದು ಪ್ರಯೋಗಿಸಿದ್ದರೂ ಬರೆಹಗಾರ 'ಪಸಾಯ್ತ' ಎಂದೇ ಬರೆದಿರುವನೆಂದು ತೋರುತ್ತದೆ. ಇದರಿಂದ ಆಗಿನ್ನೂ 'ಪಸಾಯ್ತ' ಎಂಬ ರೂಪವೇ ಪ್ರಚುರವಾಗಿದ್ದು ಸಾಹಿತ್ಯಿಕರು 'ಪಸಾಯಿತ' ಎಂದು ಪ್ರಯೋಗಿಸಲು ಆರಂಭಿಸಿದ್ದ ರೆಂದು ತೋರುವುದು.

## ೬೬

**ತ್ರಿಪುರಾಂತಕಂ,** **ಕ್ರಿ. ವ. ೧೧೨೬**
**ಮರ್ಕಾಪುರ ತಾಲೂಕು,** **ಚಾಳುಕ್ಯ ೬ನೆಯ ವಿಕ್ರಮಾದಿತ್ಯ**
**ಕರ್ನೂಲು ಜಿಲ್ಲೆ** (ಸೌ. ಇಂ. ಇ. ೯, ಭಾಗ ೧, ಪು. ೨೧೯)

### ಅನಂತಗುಣಿ ಅನಂತಪಾಲ

ಈ ಅನಂತಪಾಲನು ತ್ರಿಭುವನಮಲ್ಲ ವಿಕ್ರಮಾದಿತ್ಯ(VI) ನ ಮಹಾಪ್ರಧಾನ, ಮನೆವೆಗ್ಗಡೆ, ದಂಡನಾಯಕನು. ಈತನ ತಂದೆ ಮಹೇಶ್ವರ ದಂಡನಾಯಕನು 'ಚಳುಕ್ಯಕುಳ ಮೂಳಸ್ತಂಭ' ನೆನಿಸಿದ್ದನು.

ಚಂ|| ಒದವಿದ ಮಾನಸಿಕ್ಕೆ ತಲೆದೋಱದ ಮುನ್ನಮೆ ಮುಂಬಿ ಮೂರ್ತಿಗೊಂ-
ಡುದು ಸಿರಿ ಕೆಚ್ಚುಗೊಂಡುದು ಮನಂ ಬಗೆಗೊಂಡುದು ಸನ್ನಿ ನಾಟುಗೊಂ-
ಡುದು ನಯಮೋಜೆಗೊಂಡುದಱಿತಂ ನೆಲೆಗೊಂಡುದು ರೂಡಿ ರೂಪುಗೊಂ-
ಡುದು ನುಡಿ ರಾಸಿಗೊಂಡುದು ನೆಗರ್ತೆಯ ತೇಜ**ವನನ್ತಪಾಲ**ನ ||೨೦೩||

ಉ ಮಾ|| [1]ಆನುವನೀವ ಚೌತನವನನ್ತಮುಗುರ್ಬಿನ ಬಲ್ಪನನ್ತವಾ -
ಸ್ಥಾನದೊಳಾದಯಂ ಮಿಗುವ ತೇಜಮನನ್ತವಧೀಶನೆಂದುದಂ
ತಾನೆ ತಗುಳ್ದು ಮಾರ್ಪ್ಪದಟನನ್ತವಿದಿರ್ಚ್ಚಿದ ಭೂಮಿಪಾಳಸಂ-
ತಾನಮನೊಕ್ಕಲಿಕ್ಕುವ ವಿನೋದವನನ್ತವನನ್ತಪಾಳನ ||೨೦೪||

### ದಾರಿದ್ರ್ಯವಿದ್ರಾವಣ ಗೋವಿಂದರಾಜ

ಇವನು ಅನಂತಪಾಳನ ಸೋದರಳಿಯ. ಕೊಂಡುಪಳ್ಳಿ ಮುನ್ನೂರನ್ನು ಆಳುತ್ತಿದ್ದನು.

ಮ.ವಿ.|| ಕಲಿಯೋ ಖರ್ಗ್ಗ[2]ಸಹಾಯನೀವನೆ ಜಗದ್ದಾರಿದ್ರ್ಯವಿದ್ರಾವಣಂ
ನಿಲೆ ಮಾತಾಡುವನೇ ತೊದಳ್ಗಿಡೆಗುಡಂ ಚಾರಿತ್ರ್ಯಸಂಪನ್ನನೇ
ಕಲಿಕಾಲಕ್ಕೊಱೆಗಟ್ಟಿದಂ ಶುಚಿಯೆ ಗಂಗಾಸೂನು ಗಂಭೀರನೇ
ಗೆಲೆವಂದಂ ಜಳರಾಶಿಯಂ ಪಿರಿಯರಾ**ಗ್ಗೋವಿಂದರಾಜಂ**ಬರಂ||೨೦೫||

---

1. 'ಏನುವನೀವ' ಎಂದಿರಬಹುದೆ?
2. ಖಡ್ಗ–ಖಟ್ಗ–ಖಟ್ಗ–ಖರ್ಗ್ಗ

## ೬೭

## ಶ್ರವಣಬೆಳುಗೊಳ, ಕ್ರಿ. ವ. ಸು. ೧೧೩೦

**ಚೆನ್ನರಾಯಪಟ್ಟಣ ತಾಲೂಕು, ಹೊಯ್ಸಳ ವಿನಯಾದಿತ್ಯ**

ಹಾಸನ ಜಿಲ್ಲೆ (ಎಪಿ. ಕ. ೨, ಪುಟ ೭೩)

### ಹೊಯ್ಸಳ ವಿನಯಾದಿತ್ಯನ ಜಿನಾಲಯ

ಜಿನಾಲಯವನ್ನು ಕಟ್ಟಲು ಇಟ್ಟಿಗೆ, ಕಲ್ಲು, ಸುಣ್ಣಗಳನ್ನು ಬಳಸಿದರೆಂದು ಹೇಳಿದೆ. ಈ ಜಿನಾಲಯವೆಂದರೆ ಅತ್ಯದ್ಭುತಕೃತಿ ಎಂಬುದನ್ನು ಮನದಟ್ಟುಸುವಂತೆ ಬಣ್ಣಿಸಲಾಗಿದೆ.

ಉ.ಮಾ॥ ಇಟ್ಟಿಗೆಗೆಂದಗಲ್ದ ಕುಳಿಗಳ್ಕೆಱೆಯಾದುವು ಕಲ್ಲುಗೊಂಡ ಪೆ-
ರ್ವ್ವೆಟ್ಟು[1] ಧರಾತಳಕ್ಕೆ ಸರಿಯಾದುವು ಸುಣ್ಣದ ಭಂಡಿ ಬಂದ ಪೆ-
ರ್ವ್ವಟ್ಟೆಯೆ ಪಳ್ಳಮಾದುವೆನೆ ಮಾಡಿಸಿದಂ ಜಿನರಾಜಗೇಹಮಂ
ನೆಟ್ಟನೆ ಪೊಯ್ಸಳೇಶನೆನೆ ಬಣ್ಣಿಪರಾವ್ಮ್ನಲೆರಾಜರಾಜನಂ ॥೩೦೬॥

## ೬೮

## ಶ್ರವಣಬೆಳಗೊಳ, ಕ್ರಿ. ವ. ಸು. ೧೧೪೫

**ಚೆನ್ನರಾಯಪಟ್ಟಣ ತಾಲೂಕು,**

ಹಾಸನ ಜಿಲ್ಲೆ (ಎಪಿ-ಕ. ೨, ಪುಟ ೩೪)

### ಶುಭಕೀರ್ತಿ

ಇವನು ಜೈನಯತಿ, ಪರವಾದಿಗಳನ್ನು ಜಯಿಸುವಲ್ಲಿ ಪ್ರಚಂಡ. ಬೌದ್ಧರು, ನೈಯಾ-ಯಿಕರು, ಮೀಮಾಂಸಕರು ಮೊದಲಾದವರಿಗೆ ‘ ಓಡಿರಿ ಓಡಿರಿ ’ ಎಂದು ಉದ್ಘೋಷಿಸುತ್ತಿದ್ದಂತೆ ಈತನ ಕೀರ್ತಿಯನ್ನು ಬಣ್ಣಿಸಿದೆ. ಸಾಲುಸಾಲಿಗೆ ‘ ಈ ಬಂದ, ಈ ಬಂದ, ಈ ಬಂದನೆ’ ಎಂಬ ಕವಿಯ ಉದ್ಘೋಷಣೆ ಅವರನ್ನು ಬೆದರಿಸಿ ಅಟ್ಟುವ ಹಾಗಿದೆ.

ಮ.ಸ್ರ.॥ ಘನದರ್ಪ್ಪೋನ್ನದ್ಧ ಬೌದ್ಧಕ್ಷಿತಿಧರಪವಿಯೊ ಬಂದನೀ ಬಂದನೀ ಬಂ-
ದನೆ ಸನ್ನೈಯ್ಯಾಯಿಕೋದ್ಯತ್ತಿಮಿರತರಣಿಯೊ ಬಂದನೀ ಬಂದನೀ ಬಂ-
ದನೆ ಸನ್ಮೀಮಾಂಸಕೋದ್ಯತ್ಕರಿಕರಿರಿಪುಯೊ ಬಂದನೀ ಬಂದನೀ ಬಂ-
ದನೆ ಪೋ ಪೋ ವಾದಿ ಪೋಗೆಂದುಲಿವುದು **ಶುಭಕೀರ್ತ್ತಿ**ರ್ನ್ನೀದ್ಧಕೀರ್ತ್ತಿ-
ಪ್ರಘೋಷಂ ॥೩೦೭॥

1. ಪಿರಿದು + ಬೆಟ್ಟು (ಬೆಟ್ಟ)

## ೬೯

**ಕೋಳೂರು,** **ಕ್ರಿ. ಶ. ೧೧೪೭**

**ಬಳ್ಳಾರಿ ತಾಲೂಕು,** **ಚಾಳುಕ್ಯ ೨ನೆಯ ಜಗದೇಕಮಲ್ಲ**

ಬಳ್ಳಾರಿ ಜಿಲ್ಲೆ (ಸೌ.ಇಂ.ಇ. ೯, ಭಾಗ ೧, ಪುಟ ೨೩೪)

### ಕುಂತಳದೇಶದ ದೊರೆಗಳು

ಕುಂತಳವು ಏಳೂವರೆ ಲಕ್ಷ ಹಳ್ಳಿಗಳುಳ್ಳುದೆಂದು ಇಲ್ಲಿಯ ಗದ್ಯದಿಂದ ತಿಳಿಯುತ್ತದೆ. ಮೊದಲ ಪದ್ಯದಲ್ಲಿ ಇದನ್ನು ಯಾವ ಯಾವ ಮನೆತನದವರಾಳಿದರೆಂದು ಕ್ರಮದಲ್ಲಿ ಹೇಳಿದೆ.

ಮ.ವಿ.॥ ವಸುಧಾಕಾಂತೆಯ ಕುಂತಳಪ್ರತಿಮಮಾದೀ ಕುಂತಳಕ್ಷೋಣಿಯಂ
ವಸುಧಾನಂದನ**ನಂದಗುಪ್ತಕುಲ ಮೌರ್ಯ್ಯ**ಕ್ಷ್ಮಾಪರಾಳ್ದುರ್ಬ್ಬಳಿ-
ಕ್ಕೆನೆಯಲ್ **ರಾಷ್ಟ್ರನೃಪಾಳ**[1]ರಾಳ್ದರವರಿಂದಂ ಮತ್ತೆ **ಚಾಳುಕ್ಯ** ವಂ-
ಶಸಮುದ್ಭೂತರನೇಕರಾಳ್ದರವರೊಳ್ತಾಂ **ಚಕ್ರಿ ಸೋಮೇಶ್ವರಂ** ॥೨೦೭॥

ವ॥ ಚಾಳುಕ್ಯ ರಾಜ್ಯಾಂಭೋನಿಧಿಪ್ರವರ್ದ್ಧನಚಂದ್ರನಪ್ಪ ಶ್ರೀಮಚ್ಚಾಳುಕ್ಯ ಚಕ್ರವರ್ತ್ತಿ **ಜಗದೇಕಮಲ್ಲಂ ಕುಂತಳಸಪ್ತಾರ್ದ್ಧಲಕ್ಷಮಂ** ದುಷ್ಟನಿಗ್ರಹ ಶಿಷ್ಟ ಪರಿಪಾಳನಾರ್ತ್ಥಂ ಪಾಳಿಸುತ್ತಂ ಸುಖಸಂಕಥಾವಿನೋದದಿಂ ಕಲ್ಯಾಣದೊಳು ನೆಲೆ-ವೀಡಾಗಿ ರಾಜ್ಯಂಗೆಯ್ಯುತ್ತಮಿರೆ—

### ಸಿರಿ ಹಿಂಗದ ಬಲ್ಲಕುಂದೆ ನಾಡು ಮತ್ತು ಕೋಳೂರು

ಬೆಳೆಯುವ ಹೊಲ (ಗದ್ದೆ), ಬಂಗಾರದ ಕಣಿ, ಪಗರೆ(ನದಿ)ಯ ಕಾಲುವೆ ಇತ್ಯಾದಿ-ಗಳಿಂದ ಬಲ್ಲಕುಂದೆ ನಾಡಿನ ಸಿರಿ ಎಂದೂ ಕುಂದದಂತಿತ್ತು. ಭೀಮರಾಜ ಮತ್ತು ರಾಚಮಲ್ಲರ ಆಳಿಕೆಯೂ ಜನಕ್ಕೆ ಸುಖದಾಯಿಯಾಗಿತ್ತು. ಈ ನಾಡೆಂಬ ಕಲ್ಪವೃಕ್ಷಕ್ಕೆ ಕೋಳೂರು ಹಣ್ಣು ಬಿಟ್ಟ ಟೊಂಗೆಯಾಗಿತ್ತು. ಮಿಕ್ಕ ಶಾಸನಗಳಲ್ಲಿ ಎಲ್ಲೆಲ್ಲೂ ಬತ್ತದ ವರ್ಣನೆಗಳೇ ಕೇಳುತ್ತಿದ್ದರೆ, ಈ ಶಾಸನದಲ್ಲಿ ತೆನೆ ಮಾಗಿನಿಂತ ಜೋಳದ ಹೊಲದ ವರ್ಣನೆ ಬಂದಿದೆ. ಪೈರಿಗೆ ಎರಗುವ ಗಿಳಿಗಳನ್ನೋಡಿಸುವ ಹೆಣ್ಮಕ್ಕಳನ್ನು 'ಧವಳೇಕ್ಷಣೆಯರು' ಎಂದು ಬಣ್ಣಿಸಿದುದು ತುಂಬ ಉಚಿತ-ಸುಂದರವಾಗಿದೆ. ಮೈಗಪ್ಪಿನಲ್ಲಿ ಕಣ್ಣ ಬಿಳಿಪು ಎದ್ದು ತೋರುವುದಲ್ಲವೆ?

ಕಂ॥ ಬೆಳಗೆಯ್ಯಿಂ ಪೊಂಗಣಿಯಿಂ
ಫಲತರುವಿಂದೊಪ್ಪಯಂಗಳಿಂ ಕುಸುಮರಜಾ-
ನಿಳನಿಂ **ಪಗರೆ**ಯ ಪರಿಯಿಂ
ತಳರದ ಸಿರಿ ಬಲ್ಲಕುಂದೆ ನಾಳ್ಕೆಸೆದಿರ್ಕ್ಕುಂ ॥೨೦೯॥

1. ರಾಷ್ಟ್ರನೃಪಾಳರ್ = ರಾಷ್ಟ್ರಕೂಟರಾಜರು. ಇವರಿಗಿಂತ ಹಿಂದೆ ಆಳಿದ ಬನವಾಸಿಯ ಕದಂಬ, ಬಾದಾಮಿಯ ಚಾಳುಕ್ಯರನ್ನು ಉಲ್ಲೇಖಿಸಲಾಗಿಲ್ಲ.

ಭೀಮನೃಪ ರಾಚಮಲ್ಲ-
ರ್ತ್ತಾರ್ಗಮುತ್ಸವದಿಂ ಧರಿತ್ರಿಯಂ ಪಾಳಿಸುತುಂ
ಕ್ಷೇಮದಿನಿರೆ ಜಗಮೆಲ್ಲಂ
ಶ್ರೀಮಹಿಮಾಸ್ಪದಕೆ ತಾಮೆ ನೆಲೆಯಾಗಿರ್ಪ್ಪರ್ ||೩೧೦||

ಸುರಕುಜದಂತಿರಲೊಪ್ಪ-
ತ್ತಿರುಹುದು ತಾಂ ಬಲ್ಲಕುಂದೆ ನಾಡದರೊಳ್ವಿ-
ಸ್ತರದಿಂ ಪಣ್ತೊಳುಗೊಂಬೆನೆ
ವರಸಸ್ಯಸಮೃದ್ಧಫಳದಿ **ಕೋಳೂರೆ**ಸೆಗುಂ ||೩೧೧||

ಉ.ಮಾ.|| ಬಾಳೆ ಸುನಿಂಬೆ ಮಾದುಫಳಮಿಳೆ ಬೆಡಂಗೆನಿಸಿರ್ದ್ದ ಮಾವು ಕಂ-
ಚೀಳೆ ಕವುಂಗು ತೆಂಗು ಪಲಸುಬ್ಬಿದ ಕಬ್ಬಿನ ತೋಂಟಮುಂಗಜಂ-
ಗಾಳಯುಮಪ್ಪ ತಾವರೆಗೊಳಂ ಕೆಱೆ ಬಾವಿಗಳಿಂ ಬಹಿರ್ವ್ವನಂ
ಲೀಲೆಯನುಂಟುಮಾಡುವುದು ನೋಳ್ಪರ ಚಿತ್ತದೊಳಾವ ಕಾಲಮುಂ ||

ಕಂ|| ಬೆಳೆದು ಫಳಭರದಿನೆಱಗಿ-
ರ್ದ್ದೆಳೆಜೋಳದ ಕೆಯ್ಗಳಂ ಮನೋಹರಿ ಕಾಂತಾ-
ಕುಳಮೆಳಸುವ ಗಿಳಿ [1]ಸೋವ-
ರ್ಕಳಲುಡಮುಡಿ ಬೆನ್ನನಲೆಯೆ ಧವಳೇಕ್ಷಣೆಯರ್ ||೩೧೩||

## ಬಡವರಿಗಾಗಿ ಗಳಿಸುವ ಮಹಾದೇವಪ್ರಭು

ಕೋಳೂರ ಈ ಮಹಾದೇವ ಪ್ರಭು ರೇವಗವುಂಡನ ತಂದೆ. ಈತನನ್ನು ಪದ್ಯ ೩೧೪ರಲ್ಲಿ ಮಹದೇವನೆಂದು, ೩೧೫ರಲ್ಲಿ ಮಾಧವನೆಂದು, ೩೧೬ರಲ್ಲಿ ಮಾದಿಯೆಂದು ಹೆಸರಿಸಲಾಗಿದೆ. ೫೨ ಅಂಕಿಗೆ 'ಬಾವನ್ನ' ಎಂಬ ಶಬ್ದ ಆವಾಗಳೇ ಬಳಕೆಯಲ್ಲಿತ್ತು ಎಂಬುದನ್ನು ಗಮನಿಸಬೇಕು. ಲೋಭಿಯ ಸ್ವಭಾವವನ್ನು ಚಿತ್ರಿಸುವ ೩೧೬ನೆಯ ಪದ್ಯ ಸೊಗಸಾಗಿದೆ.

ಪಡೆವಂ ಧನಮಂ ಬೇಡಿದ-
ರೆಡರಂ ಕಳೆಯಲ್ಕೆ ನುಡಿವನೊರ್ನ್ನುಡಿಯಂ ತಾಂ
ಕಡೆವರಮೆಯ್ದಲು ನುಡಿವಂ
ಮೃಡಭಕ್ತಸಗಣ್ಯಪುಣ್ಯನಿಧಿ **ಮಹದೇವಂ** ||೩೧೪||

ಬಾವನ್ನವೀರರಂ[2] ತಂ
ದಾವಗಮೊಂದೆಸೆಯೊಳಿಟ್ಟು ತನ್ನಂ ಪ್ರತಿಯಿ-

---

1. **ಸೋವರ್ : ಸೋವುವರು : ಹೊಡೆದೋಡಿಸುವರು.**

2. **ಶಾ. ಮೂ. ವೀರರಂ ಎಂಬಲ್ಲಿ ನಿರತಂ ಎಂದಿದೆ. ಆದರೆ ಇದೇ ಪದ್ಯದ ೩ನೆಯ ಸಾಲಿನಲ್ಲಿ 'ಆ ವೀರರೊಡನೆ' ತೂಗಿದರೆಂದಿರುವುದರಿಂದ ಒಂದು ದೆಸೆಯಲ್ಲಿ (ತಕ್ಕಡಿಯ ಒಂದು ಪರಡಿಯಲ್ಲಿ) ಇಟ್ಟುದು 'ಬಾವನ್ನ ವೀರ' ರನ್ನೇ ಸರಿ.**

ಟ್ಟಾ ವೀರರೊಡನೆ ತೂಗಿದೊ-
ಡೋವತ[1] ವೀರಕ್ಕೆ **ಮಾಧವಂ**[2] ಗೆಲೆವಂದಂ ||೩೧೫||

ಮ.ಸ್ರ.||ಪಣಮುಳ್ಳಂಗೆಲ್ಲಮುಂಟಂತೆಮಗೆ ಬಱಿದೆ ಬಂದಿಷ್ಟರುಂ ಶಿಷ್ಟರುಂ ಮಂ-
ತಣದಿಂ ಕುಳ್ಳಿರ್ದು ನೀಮೆನ್ನೊಳು ಪಡೆಯಲು ಪೇಳ್ವಂದಿರೇಯೊಯೆನೀಯೆಂ
ಗುಣಿಗಳ್ಗೀವಂತು ನಾನೇಂ ಮರುಳೆ ಕುಡುವೆನೆನ್ನರ್ತ್ಥಮಂ ಭೂಮಿಪಾಳ-
ಗ್ರ್ಗಣಲೆಂಬೀ ಲೋಭನಂ ಬೇಡದೆ ಬುಧ ಕೊಡುವಂ **ಮಾದಿ**ಯಂ
ಬೇಡು ನಿಚ್ಚಂ ||೩೧೬||

## ಧರ್ಮವನ್ನು ಬಯ್ತಿಟ್ಟ ರೇವಗವುಂಡ

ಇವನು ಮಾದಿಯ ಮಗ; ಕೋಳೂರ ಪ್ರಭು. ತಂದೆಯಂತೆಯೇ ಮಗ ದಾನಧರ್ಮ-ದಲ್ಲಿ. ಗಳಿಸಿದ ಹಣದಲ್ಲಿ ಎಷ್ಟನ್ನೂ ಇಟ್ಟುಕೊಳ್ಳದೆ, ಕೆರೆ ಬಾವಿ ಗುಡಿಗಳಿಗೇ ವ್ಯಯಿಸಿ, ಧರ್ಮ-ವನ್ನು ಬಯ್ತಿಟ್ಟುಕೊಂಡನಂತೆ ಈ ರೇವಗೌಡ.

ಕಂ|| ಪೆರ್ಮ್ಮಂ ಬಡೆದುಂ ಮಡಗಿದೊ-
ಡೊರ್ಮ್ಮೆಯೆ ತಾಂ ಕಿಡುಗುಮೆಂದು ರೇವಗವುಂಡಂ
ಧರ್ಮ್ಮಕ್ಕೆ ತವಿಸಿ ಧನಮಂ
ನಿರ್ಮ್ಮಿಸಿದಂ ಶಿವಗೃಹಂಗಳಂ ಮುದದಿಂದಂ ||೩೧೭||

ಪಡೆದೊಡವೆಯೊಳಿನಿತಿನಿತಂ
ಮಡಗದೆ ಕೆಱೆ[3] ಬಾವಿ ದೇಗುಲಂಗಳ ಕೆಲಸ-
ಕ್ಕೊಡವೆಯನೆ ತವಿಸಿ ಧರ್ಮ್ಮಮ-
ನುಡುಗದೆ ಬಯ್ತಿಟ್ಟನಿಂತು[3] ರೇವಗವುಂಡಂ ||೩೧೮||

---

1. ಡೋವೋ ಎಂದಿರಬಹುದು.

2 ಮಹದೇವ ಮತ್ತು ಮಾಧವ ಒಂದಕ್ಕೊಂದು ಪ್ರತಿನಾಮವಲ್ಲ. 'ವೀರಕ್ಕು-ಮಾಧವಂ' ಎಂದು ಇದ್ದಿದ್ದರೆ ಉಮಾಧವ ಎಂಬುದು ಮಹದೇವನಿಗೆ ಪ್ರತಿನಾಮವಾಗುತ್ತಿತ್ತು.

3. ಇಂತು ಎಂಬುದು ಹಿಂದೆ ವರ್ಣಿತವಾದ ಅವನ ಹಲವಾರು ಕಾರ್ಯಗಳನ್ನು ಸಂಬಂಧಿಸಿದೆ : ಸೋಮೇಶ್ವರ, ಕಾಳೇಶ್ವರ, ಮಲ್ಲಿಕಾರ್ಜುನ, ಆದಿತ್ಯ, ವಿಷ್ಣು, ವಿಘ್ನೇಶ್ವರ, ಭೈರವ, ಮೇಳೇಶ್ವರ ದೇವಾಲಯಗಳನ್ನು ಹಾಗೂ ಕಲ್ವೆಸದ ಬಾವಿ (ಅದರ ಮೇಲೆ ಅಯ್ದು ಶಿವಾಲಯ ಗಳು) ಊರ ಬಳಿ ಆರಮೆ. ಒಂದು ಕೆರೆ ಇವನು ಈತನು ಕಟ್ಟಿಸಿದನು.

## ೭೦

**ಲಕ್ಷ್ಮೇಶ್ವರ,** **ಕ್ರಿ. ಶ. ೧೧೪೭**

**ಶಿರಹಟ್ಟಿ ತಾಲೂಕು,** **ಚಾಳುಕ್ಯ ೨ನೆಯ ಜಗದೇಕಮಲ್ಲ**

ಧಾರವಾಡ ಜಿಲ್ಲೆ (ಎಪಿ. ಇಂ. ೧೬, ಪು. ೪೬)

ಕರ್ಣಾಟಸುಕವಿಮುಖ್ಯನಾದ ಪಂಡಿತನು ಇದನ್ನು ರಚಿಸಿದ ಕವಿ ಎಂಬುದು ಶಾಸನದ ಕೊನೆಯ ವಚನದಿಂದ ತಿಳಿದುಬರುತ್ತದೆ. ಲಕ್ಷ್ಮೇಶ್ವರದ ಚಾವೋಜನು ಇದನ್ನು ಕಂಡರಿಸಿದ್ದಾನೆ.

### ಆನೆಯ ಕೇಶಿರಾಜ

ಬೆಳ್ವಲ–೩೦೦, ಪುಲಿಗೆಱೆ–೩೦೦, ಹಲಸಿಗೆ–೧೨೦೦೦, ಹಾನಗಲ್ಲು–೫೦೦ ಇವುಗಳನ್ನು ಈತನು ಆಳುತ್ತಿದ್ದನು. ಜಗದೇಕಮಲ್ಲನ ವಿಜಯಸ್ತಂಭಕ್ಕೆ ಇವನು ಗಜದಂತೆ ಆಧಾರವಾಗಿದ್ದನು. ಆನೆಯ ಕೇಶಿರಾಜನೆಂಬ ಹೆಸರು ಇವನಿಗೆ ಅನ್ವರ್ಥಕವಾದುದೆಂದು ಶ್ಲೇಷೆಯಿಂದ ಮೊದಲ ಪದ್ಯದಲ್ಲಿ ಬಣ್ಣಿಸಿದೆ.

ಮ.ವಿ.॥ ಸತತಾಳಂಕೃತಭದ್ರಲಕ್ಷಣಯುತಂ ಗೋತ್ರೋದ್ಭವಂ ದಾನಸಂ-
ಭೃತನಂಗೀಕೃತಗೋಮಿನೀಪ್ರಿಯಕರಿಣ್ಯಾಲಿಂಗನೋದ್ಯದ್ಯಶೋ-
ರ್ಜ್ಜಿತನುದ್ಯಜ್ಜಗದೇಕಮಲ್ಲವಿಜಯಸ್ತಂಭೇರನೆಂದೀ ಮಹೋ-
ನ್ನತಿಯಿಂದಾನೆಯ **ಕೇಶಿರಾಜ** ಪೃತನಾಧೀಶಂಗಿದನ್ವರ್ತ್ಥಕಂ ॥೨೧೯॥

ಕಂ॥ ಮದರದನಿಗಳ ಹಯಾನೀ-
ಕದ ಹೇರಿಗಲಾಳಸನ್ಧಿವಿಗ್ರಹದ ಮಹಾ-
ಪದವಿಯ ಸಿರಿಕರಣದ ಸಂ-
ಪದದಂತವುರಾಧಿಕಾರಿ ಕೇಶವದೇವಂ ॥೨೨೦॥

### ದಕ್ಷಿಣ ಸೋಮನಾಥ

ನಂದಿಯುಮಹಿಭೂಷಣಮುಂ
ಮಂದಾಕಿನಿಯುಂ ಜಟಾಳಿಯುಂ ಗಿರಿಜೆಯುಮ-
ರ್ದ್ಧೇಂದುವುಮೊಪ್ಪಿರಲುದಿಯಿಸಿ-
ದಂ **ದಕ್ಷಿಣ ಸೋಮನಾಥದೇವಂ** ಮುದದಿಂ ॥೨೨೧॥

ವ॥ **ಶ್ರೀಮತ್ಕರ್ಣ್ನಾಟ ಸುಕವಿಮುಖ್ಯಪಣ್ಡಿತರ ಕವಿತೆ.** ರೂವಾರಿ ಚಕ್ರವರ್ತ್ತಿ ಪುಲಿಗೆಱೆಯ ಜಿನ್ನೋಜರ ಅಗ್ರಸುತಂ ಚಾವೋಜನ ಕಂಡರಣೆ.

೭೧

**ಸಿರಸಂಗಿ,** **ಕ್ರಿ. ವ. ೧೧೪೮**

**ಸವದತ್ತಿ ತಾಲೂಕು,** **ಚಾಳುಕ್ಯ ೨ನೆಯ ಜಗದೇಕಮಲ್ಲ**

ಬೆಳಗಾವಿ ಜಿಲ್ಲೆ (ಕ. ಇ. ೧, ಪು. ೩೪)

**ಒಳ್ಪೊಲವೆನಿಸುವ ಬೆಳ್ವಲ**

ಕಂ|| ಎಳೆಯೆಂಬ ಸತಿಯ ಕುನ್ತಳ-
ಕಳಾಪದಂತೆಸೆದು ತೋರ್ಪ್ಪ ಕುನ್ತಳದೇಶ-
ಕ್ಕಳವಟ್ಟ ಚಿನ್ನಪೂವೆನೆ
ಬೆಳಗಿದುದೊಳ್ಪೊಲವೆನಿಪ್ಪ ಬೆಳ್ವಲ ದೇಶಂ ||೩೨೭||

**ಲೋಕೋತ್ತರವಾದ ಸಿರಸಂಗಿ**

ಈ ಊರನ್ನು ಇಲ್ಲಿ ಋಶಿಶೃಂಗಪುರ ಎಂದು ಹೆಸರಿಸಿದೆ. 'ಸುಕವೀಶ್ವರ ತಂಡದಿಂದೆ' ಎಂಬ ಮಾತಿನಿಂದ ಆ ಕಾಲದಲ್ಲಿ ಈ ಊರಲ್ಲಿ ಇಬ್ಬರು ಮೂವರಾದರೂ ಕಾವ್ಯರಚನೆ ಮಾಡ ಬಲ್ಲವರಿದ್ದರೆಂದು ಸೂಚಿತವಾಗುತ್ತಿದೆ.

ಉ.ಮಾ.|| ಸುತ್ತಿದ ಬೆಟ್ಟದಿಂದೆಸೆವ ನನ್ದನದಿಂ ಪಲವುಂ ತಟಾಕದಿಂ-
ದುತ್ತಮಮಪ್ಪ ದೇವಗೃಹಸಂಕುಳದಿಂ ವರದಿವ್ಯತೀರ್ತ್ಥದಿಂ
ವೃತ್ತಪಯೋಧರಾಂಗನೆಯರಿಂ ಸುಕವೀಶ್ವರ ತಂಡದಿಂದೆ ಲೋ-
ಕೋತ್ತರಮಾಯ್ತು **ಬೆಳ್ವಲದೊಳೀ ಋಶಿಶೃಂಗಪುರಂ** ಮನೋಹರಂ||

೭೨

**ಹಳೇಬೀಡು,** **ಕ್ರಿ. ವ. ೧೧೫೦**

**ಬೇಲೂರು ತಾಲೂಕು,** **ಹೊಯ್ಸಳ ೧ನೆಯ ನರಸಿಂಹ**

ಹಾಸನ ಜಿಲ್ಲೆ (ಎಪಿ. ಕ. ೧೫, ಪು. ೫೦)

**ನೃಸಿಂಹನೃಪನ ಜನ್ಮೋತ್ಸವವೆಂತೆಂದೊಡೆ**

ಈ ನೃಸಿಂಹನು ಹುಟ್ಟಿದ ದಿನವೇ ತಂದೆ ಇವನಿಗೆ ಪಟ್ಟ ಕಟ್ಟಿದುದನ್ನೂ ಅದರ ಕಾರಣ-ವನ್ನೂ ಇಲ್ಲಿ ಹೇಳಿದೆ.

ಚಂ|| ಜನನಿಯ ಗರ್ಭದಿಂದೊಗೆದ ಲಗ್ನದ ಮೇಲೆ ಬಳಿಕ್ಕೆ ಯಾಮದೊಳ್
ಜನಕನರಾತಿಯುಂ ಕವಿಯ ಕಾಳೆಗದೊಳ್ ನೆಱೆ ಕೊಂದು ಗೆಲ್ದು ಬಂ-

ದನುನಯದಿಂ ಪ್ರತಾಪ ನರಸಿಂಹನೆನಲ್ ಹೆಸರಿಟ್ಟು ಪಟ್ಟಮಂ
ಜನಿಯಿಸಿದಂದು ಕಟ್ಟಿದನೆನಲ್ ದೊರೆವೆತ್ತುದು ರಾಜ್ಯಸಂಪದಂ ॥೩೨॥

## ೭೩

**ಕೈದಾಳ,** **ಕ್ರಿ. ವ. ೧೧೫೧**
**ತುಮಕೂರು ತಾಲೂಕು,** **ಹೊಯ್ಸಳ ೧ನೆಯ ನರಸಿಂಹ**
ತುಮಕೂರು ಜಿಲ್ಲೆ (ಎಪಿ. ಕ. ೧೨, ಪು. ೧೩)

### ಚತುಸ್ಸಮಯ ಧರ್ಮೋದ್ಧಾರಧೌರೇಯ ಬಾಚಿ

ಈತನು ಮಣ್ಣುಗರೆ ಎಂಬ ನಾಡನ್ನಾಳುತ್ತಿದ್ದನು. 'ಮಹಾಸಾಮಂತ ಗೂಳಿ ಬಾಚಿದೇವ' ಎಂದು ಈತನನ್ನು ಕರೆಯಲಾಗಿದೆ. ಸರ್ವಧರ್ಮಸಮದೃಷ್ಟಿಯುಳ್ಳವನಾದ ಇವನು, ಶೈವ, ವೈಷ್ಣವ, ಜೈನ, ಬೌದ್ಧ ಈ ನಾಲ್ಕು ಧರ್ಮಗಳವರಿಗೂ ದೇವಾಲಯಗಳನ್ನು ಕಟ್ಟಿಸಿಕೊಟ್ಟು, ದತ್ತಿಗಳನ್ನು ಬಿಟ್ಟು ಪ್ರೋತ್ಸಾಹಿಸಿ 'ಚತುಸ್ಸಮಯ ಧರ್ಮೋದ್ಧಾರಕ'ನೆಂದು ಹೊಗಳಿಸಿಕೊಂಡಿದ್ದಾನೆ. ಪ್ರಾರಂಭದಲ್ಲಿ ಎಲ್ಲ ಸಮಯಗಳ ದೇವರಲ್ಲಿಯೂ ಈತನಿಗಾಗಿ ಶ್ರೇಯಃಪ್ರಾರ್ಥನೆ ಮಾಡಿರುವುದು ಸಮುಚಿತವಾಗಿದೆ.

ಈ ಶಾಸನದ ಬರೆವಣಿಗೆಯಲ್ಲಿ ರೇಫಯುಕ್ತ ಅಕ್ಷರಗಳು ದ್ವಿತ್ವವಾಗಿಲ್ಲ ಎಂಬುದನ್ನು ಗಮನಿಸಬೇಕು. ಉದಾ: ಕೀರ್ತಿ, ಸೂರ್ಯ, ಕೃತಾರ್ಥ ಇತ್ಯಾದಿ.

ಚಂ॥ ಜಿನಪತಿ ಕೂರ್ತು ಬೇಳ್ಪ ಸುಖಸನ್ಪದಮಂ ಹರನೊಲ್ದು ಕೀರ್ತಿಯಂ
ಕನಕಸರೋದ್ಭವಂ ವರಚಿರಾಯುವಮಿಪ್ಪಿನಲೀಗಳಚ್ಯುತಂ
ಮನವೊಸೆದೊಪ್ಪುತಿರ್ಪ ಸಿರಿಯಂ ವರಬುದ್ಧ ಜಯಾಭಿವೃದ್ಧಿಯಂ
ಮನಸಿಜರೂಪ **ಬಾಚಿ** ನಿನಗೀಗೆ ಶಶಾಙ್ಕಕುಳಾದ್ರಿಯುಳ್ಳಿನಂ ॥೩೪॥

ಕಂ ॥ ಉದ್ಧರಿಸಿ ಜೈನಭವನಮು-
ನುದ್ಧರಿಸಿ ಶಿವಾಲಯಙ್ಗಳಂ ಮುದದಿನ್ದ-
ನ್ತುದ್ಧರಿಸಿ ವಿಷ್ಣುಗೇಹಮು-
ನುದ್ಧರಿಸಿದನಲ್ತೆ ಬಾಚಿ ಜಸದುನ್ನತಿಯಂ ॥೩೫॥

ಚಂ॥ ಸೊಗಯಿಪ ಕಾಮಧೇನು ಜಿನಶಾಸನಲಕ್ಷ್ಮಿಗೆ ಕಲ್ಪಭೂರುಹಂ
ಮೃಗಧರಭೂಷಣಾಗಮ[1] ತಪಸ್ವಿಗೆ ಸಿದ್ಧರಸಪ್ರವಾಹಮೇಂ

---

1. ಮೃಗಧರ (ಚಂದ್ರ)+ ಭೂಷಣ+ ಆಗಮ : ಶಿವಾಗಮ.

ನೆಗೆದ-ದು ಬುಧ್ಧಕೋಟಿಗೆನೆ ಚಿನ್ತಿಸದೀವ [1]ಮಹಾಂಶುರತ್ನವಾ
[2]ನಗಧರನಾಗಮಜ್ಞರಿಗಮೆನ್ದೊಡೆ ಬಾಚಿಯಿದೇಂ ಕೃತಾರ್ಥನೋ ||೩೨೬||

ವ|| ಇನ್ತು ಚತುಸ್ಸಮುಸಧರ್ಮೋದ್ಧಾರಧೌರೇಯಂ ಶ್ರೀಮನ್ಮಹಾಸಾಮನ್ತ ಗೂಳಿ ಬಾಚಿದೇವನನೇಕ ದೇವಾಲಯ ಬಸದಿ ವಿಷ್ಣುಗೃಹಙ್ಗಳಂ ಮಾಡಿಸಿಯುಂ ಮಹಾತಟಾಕಙ್ಗಳಂ ಕಟ್ಟಿಸಿಯುಂ[3]—

## ೭೪

**ಪಂಡಿತರವಳ್ಳಿ,**
**ತುಮಕೂರು ತಾಲೂಕು,**
ತುಮಕೂರು ಜಿಲ್ಲೆ

**ಕ್ರಿ. ಶ. ಸು. ೧೧೬೦**
**ಹೊಯ್ಸಳ ನರಸಿಂಹ**
(ಎಪಿ. ಕ. ೧೨ ಪು. ೩೨)

### ವಿಷಯಾಧಿಕಾರಿ ಈಶ್ವರ

ಇವನು ಸರ್ವಾಧಿಕಾರಿ ಎಱೆಯಂಗಮಯ್ಯನ ಚಿತ್ತವನ್ನು ಗೆದ್ದುಕೊಂಡು ಮಱುವಲಿ, ಮಣ್ಣೆ, ತೆಂಗೆರೆ, ಕಲ್ವಳಿ ಎಂಬ ನಾಡುಗಳನ್ನು ಆಳುತ್ತಿದ್ದನು. ಈ ವಿಷಯಾಧಿಕಾರಿಯ ನಾಡಿನಲ್ಲಿ ಹಾಲು-ಹೈನ, ಕಾಳುಕಡಿಗಳ ಸಮೃದ್ಧಿ ಚೆನ್ನಾಗಿತ್ತಲ್ಲದೆ ತೆರಿಗೆ ವಿಪರೀತವಾಗಿರಲಿಲ್ಲ.

ಚಂ|| ಕಱೆವುವು ಕಾಮಧೇನುವೆನೆ ಧೇನು ಪೊಲಂ ಸಲೆ ಪನ್ನಿಧಾನ್ಯಮಂ
ನೆಱೆದಳರ್ದರ್ಗ್ಘಮುಂ ಅಳತೆಯುಂ ಪಿರಿದಾದುದದೆನ್ತು ನೋಳ್ಪಡಂ
ತೆಱೆ ವಿಪರೀತವಿಲ್ಲ ನುಡಿಯೊಳ್ತೊದಳಿಲ್ಲೆನ....[4]ಶ್ವರಂ
ಮಱುವಲಿ ಮಣ್ಣೆ ತೆಙ್ಗೆಱೆ ನೆಗಳ್ತೆಯ ಕಲ್ವಳಿಯೆಂಬ ನಾಳ್ಗಳಂ ||೩೨೭||

---

1 ಚಿಂತಿಸದೀವ ಮಹಾಂಶುರತ್ನ : ಅಪೇಕ್ಷಿಸದೆ ಕೊಡುವ ಪ್ರಕಾಶಮಯ ರತ್ನ.

2. ನಗಧರನ (ವಿಷ್ಣುವಿನ) ಆಗಮಜ್ಞ: ವೈಷ್ಣವಾಗಮವನ್ನು ತಿಳಿದವ, ವೈಷ್ಣವ.

3. ತನ್ನ ತಂದೆಗೆ ಪರೋಕ್ಷವಿನಯವಾಗಿ ಗಂಗೇಶ್ವರ, ತನ್ನ ಮುತ್ತಯ್ಯನಿಗೆ ಪರೋಕ್ಷವಿನಯವಾಗಿ ಚಲವಱೇಶ್ವರ, ತನ್ನ ಮಗಳು ಕುಮಾರಿ ಚೆನ್ನವೆ ನಾಯಕಿತಿಗೆ ಪರೋಕ್ಷವಿನಯವಾಗಿ ಶ್ರೀರಾಮೇಶ್ವರದೇವಾಲಯಗಳನ್ನೂ ತನ್ನ ಹೆಂಡತಿ ಭೀಮವೆ ನಾಯಕಿತಿಗೆ ಪರೋಕ್ಷವಿನಯವಾಗಿ ಭೀಮಜಿನಾಲಯವನ್ನೂ ಕಟ್ಟಿಸಿ ಅವುಗಳಿಗೆ ಉಂಬಳಿಗಳನ್ನು ಬಾಚಿದೇವನು ಕೊಟ್ಟನೆಂಬ ಉಲ್ಲೇಖವು ಮುಂದೆ ಬಂದಿದೆ.

4 ಇಲ್ಲಿ ನಷ್ಟಾಕ್ಷರಗಳು ಲಾಳ್ದನೀ ಎಂಬುವಿರಬೇಕು.

## ೭೫

**ಲಕ್ಷ್ಮೇಶ್ವರ,** **ಕ್ರಿ. ಶ. (ಅ) ೧೧೦೭, (ಆ) ೧೧೫೨**
**ಶಿರಹಟ್ಟಿ ತಾಲೂಕು,** **(ಅ) ಚಾಳುಕ್ಯ ೬ನೆಯ ವಿಕ್ರಮಾದಿತ್ಯ**
ಧಾರವಾಡ ಜಿಲ್ಲೆ **(ಆ) ಕದಂಬ ೩ನೆಯ ತೈಲ**

(ಎಪಿ. ಇಂ. ೧೬, ಪು. ೩೭)

ಒಂದೇ ಕಲ್ಲಲ್ಲಿ ಬೇರೆ ಬೇರೆ ಕಾಲದ ಎರಡು ಸಂಗತಿಗಳನ್ನು ಕೆತ್ತಿದೆ.

**ಅ**

### ಪುರಿಕರನಗರದ ರಮ್ಯಲೀಲೆ

ದಿನ್ನೆ ಇದ್ದಲ್ಲೆಲ್ಲ ಗುಡಿಗಳು, ತಗ್ಗಿರುವಲ್ಲೆಲ್ಲ ಕೆರೆಗಳು, ಸಮನೆಲವಿರುವಲ್ಲೆಲ್ಲ ಉದ್ಯಾನಗಳು ಶೋಭಿಸುತ್ತಿರುವುದರಿಂದ ಈ ಊರು ಪ್ರೇಕ್ಷಣೀಯವಾಗಿತ್ತು.

ಮ.ಸ್ರ.॥ ತೆವರೆಲ್ಲಂ ದೇವತಾಮಂದಿರನಿವಹಮೆ ನಿಮ್ನಸ್ಥಳೀರಾಜಿಯೆಲ್ಲಂ
ಸುವಿರಾಜದ್ದೀರ್ಘಿಕಾಸಂಕುಳಭರಿತಪಯಃಪೂರನೀರೇಜಕಾಸಾ-
ರವೆ ಮತ್ತಂ ತತ್ಸಮಾಳಂಕೃತವಸುಧೆಯದೆಲ್ಲಂ ಲಸಚ್ಚಂದನೋದ್ಯಾ-
ನವೆನಲ್ ರಮ್ಯ[ಂ*] ದಲೆಂದುಂ **ಪುರಿಕರನಗರೀಲೀಲೆ** ಲೋಕಾ-
ವಲೋಕ ॥೩೨೮॥

### ಸ್ವಯಂಭು ದಕ್ಷಿಣ ಸೋಮನಾಥ

ಒಂದೊಂದು ಅಕ್ಷತೆ (ಅಕ್ಕಿಕಾಳು)ಯಿಂದ ಪೂಜಿಸಿದರೆ ಕೊಳಗ ತುಂಬ ಫಲ ಕೊಡುತ್ತಾನೆಂದು ಈ ದೇವರ ಮಹಿಮಾವಾಹಿನಿಯಿತ್ತೆಂದು ತಿಳಿಯುತ್ತದೆ.

ಕಂ॥ ಒಂದೊಂದಕ್ಷತೆಯಂ ಸಾ-
ನಂದದಿನಭ್ಯರ್ಚಿಸಲ್ಕೆ ಕೊಳಗಂ ತೀವಿ-
ತ್ತೆಂದೊಡೆ ಶಿವಲಿಂಗದ ಸಮು-
ಸಂದ ಮಹೋನ್ನತಿಯ ಪವಣನಱಿಯೆಂ **ಪೊಗಳಲ್** ॥೩೨೯॥

ಕಡೆಯದ ಕಂಡರಿಸದ ಬೇ-
ರ್ಪಡಿಸದ ಕಮ್ಮಯಿಸದೊಂದಕೃತ್ರಿಮರೂಪಂ
ಪಡೆದು ಸ್ವಯಂಭು ನೆಲದಿಂ-
ದೊಡೆದುದಯಂಗೆಯ್ದನಲ್ಲಿ **ದಕ್ಷಿಣಸೋಮಂ** ॥೩೩೦॥

### ತೈಲಪದೇವನ ಪಾರಮೇಶ್ವರದತ್ತಿ

ಕದಂಬ ತೈಲಪದೇವನು ಹಾನಗಲ್ಲಿನಲ್ಲಿ ಮಹಾಮಂಡಳೇಶ್ವರನಾಗಿದ್ದನು. ಪುಲಿಗೆರೆಯ ದಕ್ಷಿಣ ಸೋಮನಾಥ ದೇವರ ಸ್ಥಾನಾಚಾರ್ಯನು ಅಲ್ಲಿಗೆ ಹೋಗಿ, ದೇವರ ಪುಷ್ಪಾಕ್ಷತ ಪ್ರಸಾದ-

ವನ್ನು ಆತನಿಗಿತ್ತು ಹರಸಿದನು. ಆಗ ತೈಲಪನು ಕಲ್ಲವಣವೆಂಬ ಗ್ರಾಮವನ್ನು ಪಾರಮೇಶ್ವರ ದತ್ತಿಯಾಗಿ ಅವನಿಗೆ ಧಾರೆಯೆರೆದು ಕೊಟ್ಟನು.

ವ|| ಅಂತೆನಿಸಿದ ಮಹಾಸ್ವಯಂಭು ಸೋಮನಾಥದೇವರ ಸ್ಥಾನಾಚಾರ್ಯ್ಯರ್ಂ ಶಮದಮಯಮನಿಯಮನಿಷ್ಠಾಗರಿಷ್ಠನಪ್ಪ **ಮಹೇಂದ್ರಸೋಮಪಣ್ಡಿತದೇವ**ರ್ಮ್ಮಹಾಮಹಿಮನಪ್ಪ ಸೋಮನಾಥದೇವ ದಿವ್ಯಶ್ರೀಪಾದಾರ್ಚ್ಚನಾಳಂಕೃತ ಘುಸೃಣಮಸೃಣ[1] ಚನ್ದನಾನುಲೇಪಸುಗನ್ಧಮುಮಂ ತತ್ಪ್ರಸಾದ ಶೇಷಾಕ್ಷತಂಗಳುಮಂ ಕೊಣ್ಡು ಪಾನುಂಗಲ್ಲಿಗೆ ಪೋಗಿ, ಮಹಾಮಣ್ಡಳೇಶ್ವರಂ ತೈಲಹದೇವನಂ ಪರಸುವುದುಂ, ಹರ್ಷೋತ್ಕರ್ಷಚಿತ್ತನಾಗಿ ಸ್ಥಾನವಿಶೇಷಮುಮಂ ದೇವತಾವಿಶೇಷಮುಮಂ ಮನದೆಗೊಣ್ಡು ಪಾನುಂಗಲ್ಲಯ್ನೂಱರ ಕಂಪಣಂ ಕುನ್ದವುರ ಮೂವತ್ತಱ ಬಳಿಯ ಬಾಡಂ ಕಲ್ಲವಣಮಂ ಶ್ರೀಸೋಮನಾಥದೇವರ್ಗ್ಗಂಗಭೋಗಕಾಚಂದ್ರಾರ್ಕ್ಕರ್ಂ ಸ್ಥಾಯಿಯಾಗಿ ಸರ್ವ್ವನಮಸ್ಯಮುಂ ಸರ್ವ್ವಬಾಧಾಪರಿಹಾರಮುಮಾಗಿ ಪಾರಮೇಶ್ವರದತ್ತಿಯಾಗಿ ತಾಮ್ರಶಾಸನಸಹಿತಂ ಮಹೇಂದ್ರಸೋಮಪಣ್ಡಿತರ ಕಾಲಂ ಕರ್ಚ್ಚಿ ಧಾರಾಪೂರ್ವ್ವಕಂ ಮಾಡಿ ಬಿಟ್ಟಂ-

೮

## ಮೂವುಲಿ ತೈಲ

ಕಾದಂಬ ಕಂಠೀರವ ಮೂವುಲಿ ತೈಲ (111) ನು ಸೋಮನಾಥದೇವನ ದರ್ಶನವ್ರತವನ್ನು ಕೈಕೊಂಡುದನ್ನು ಉಲ್ಲೇಖಿಸಿದೆ. ಈತನು ಮೇಲೆ ಉಲ್ಲಿಖಿತನಾದ ತೈಲಹನ ಮೊಮ್ಮಗನು.

ಕಂ || ನರೆಯಂಗಲ್ ನೆಲೆವೀಡೆನೆ
ಪರಿಗ್ರಹಂ ಪ್ರಜೆಗಳಾಪ್ತವರ್ಗ್ಗಂ ಪಳೆಯ-
ರ್ಪಿರಿಯಶ್ರೀಕರಣದವ-
ರ್ವ್ವರಮಂತ್ರಿಗಳೆಂದು ಪೊರೆಯಲುದ್ಯತನಾದಂ ||೩೩೧||

ಸನ್ತಾನಸ್ಥಂ ನೃಪಪದ-
ಮನ್ತಳೆದುಂ ಧರ್ಮ್ಮತತ್ಪರಂ ತೈಲನೃಪಂ
ಮನ್ತಣವೇನೊ ಪರತ್ರಾ-
ನನ್ತಸುಖಕ್ಕೆಳಸಿ ಪುಣ್ಯಭಾಜನನಾದಂ ||೩೩೨||

ವ|| ಅನ್ತು ಕತಿಪಯಸಂವತ್ಸರಂ ತದ್ರಾಜ್ಯಲಕ್ಷ್ಮಿಯನಳಂಕರಿಸಿರ್ದ್ದ ಕಾದಂಬಕಣ್ಠೀರವಂ ತೈಲಹದೇವಂ ಸೋಮನಾಥದೇವದರ್ಶನವ್ರತ ಪ್ರಭಾವದಿಂದಿರೆ,

ಕಂ || ಅಸಿಧಾರಾವ್ರತಮಂ ಸಾ-
ಧಿಸಿ ಜಯವಧು ವಾಣಿ ಬಾಣಮುಖಮಂ ಸಲೆ ಸಾ-

1. ಶಾ. ಮೂ. ಘುಶೃಣಮಶೃಣ

ಧಿಸಿ ಬಂದು ಭುಜದೊಳಾಸ್ಯದೊ-
ಳಿಸೆದಿರ್ಪ್ಪರ್ಗಳ್ **ವೀರಪಾಣ್ಡ್ಯ ಭೂಪಾಳಕನ** ||೩೩೩||

**ಹೆಸರಾಂತ ಓಜರು** (ಶಿಲಾಶಿಲ್ಪಿಗಳು)

ಭೂವಿನುತಂ ರೂವಾರಕ-
ಳಾವಿದ ಜಿನ್ನೋಜನಗ್ರಪುತ್ರಂ ಚಾವಂ
ಕೇವಳಮೆ ಸವಣ್ಬಲ್ಲರ
ದೇವಂ ರಾಜೋಜನಿವರ್ಗ್ಗಳೆಸೆದರ್ಧರೆಯೊಳ್ ||೩೩೪||

**ರಾಜೋಜನ** ಕಣ್ಡರಣೆ

೭೬

## ಶ್ರವಣಬೆಳುಗೊಳ, ಕ್ರಿ. ವ. ೧೧೫೯

**ಚೆನ್ನರಾಯಪಟ್ಟಣ ತಾಲೂಕು, ಹೊಯ್ಸಳ ನರಸಿಂಹ**

ಹಾಸನ ಜಿಲ್ಲೆ (ಎಪಿ. ಕ. ೨, ಪು. ೧೪೬)

**ಹುಳ್ಳನ ಜಿನಧರ್ಮಕಾರ್ಯ**

ಕನ್ನಡನಾಡಿನಲ್ಲಿ ಜಿನಶಾಸನೋದ್ಧರಣರೆಂದು ಮೂವರನ್ನು ಮೊದಲು ನೆನೆಯಲಾಗಿದೆ. ೧. ರಾಚಮಲ್ಲನ ಮಂತ್ರಿ ರಾಯ, ೨. ವಿಷ್ಣುವರ್ಧನನ ಮಂತ್ರಿ ಗಂಗಣ, ೩. ಹೊಯ್ಸಳ ನರಸಿಂಹನ ಮಂತ್ರಿ ಹುಳ್ಳ. ಕಲಿವಿಟ್ಟನೆಂಬವನು ಬಂಕಾಪುರದಲ್ಲಿ ಕಟ್ಟಿಸಿದ್ದ ಜಿನಾಲಯವನ್ನು ಹುಳ್ಳನು ಜೀರ್ಣೋದ್ಧಾರ ಮಾಡಿದನೆಂದೂ ಬೆಳ್ಗುಳದಲ್ಲಿ ೨೪ ತೀರ್ಥಂಕರ ಮಂದಿರಗಳನ್ನು ಕಟ್ಟಿಸಿದನೆಂದೂ ಜೈನ ತೀರ್ಥಸ್ಥಳವಾದ ಕೊಪ್ಪಳದಲ್ಲಿ ೨೪ ಜಿನಮುನಿ ಸಂಘಗಳಿಗೆ ಅಕ್ಷಯ ದಾನಗಳನ್ನು ಕೊಟ್ಟನೆಂದೂ ವೃತ್ತಿಗಳನ್ನು ಬಿಡಿಸಿದನೆಂದೂ ಹೇಳಿದೆ.

ಚಂ|| ಸ್ಥಿರಜಿನಶಾಸನೋದ್ಧರಣರಾದಿಯೊಳಾರೆನೆ ರಾಚಮಲ್ಲಭೂ-
ವರ ವರಮಂತ್ರಿ ರಾಯನೆ ಬಳಿಕ್ಕೆ ಬುಧಸ್ತುತನಪ್ಪ ವಿಷ್ಣುಭೂ-
ವರ ವರಮಂತ್ರಿ ಗಂಗಣನೆ ಮತ್ತೆ ಬಳಿಕ್ಕೆ ನೃಸಿಂಹದೇವಭೂ-
ವರ ವರಮಂತ್ರಿ ಹುಳ್ಳನೆ ಪೆಱಂಗಿನಿತುಳ್ಳಡೆ ಪೇಳಲಾಗದೇ ||೩೩೫||

ಕಂ || ನಿಪ್ಪಟಮೆ ಜೀರ್ಣ್ನಮಾದುದ-
ನುಪ್ಪಟ್ಟಾಯ್ತನಮಹಾಜಿನೇಂದ್ರಾಲಯಮಂ
ನಿಪ್ಪೊಸತು ಮಾಡಿದಂ ಕರ-
ಮೊಪ್ಪಿರೆ ಹುಳ್ಳಂ ಮನಸ್ವಿ **ಬಂಕಾಪುರದೊಳ್** ||೩೩೬||

ಮತ್ತಮಲ್ಲಿಯೆ

ಚಂ॥ ಕಲಿತನಮುಂ ವಿಟತ್ವಮುಮನುಳ್ಳವನಾದಿಯೊಳೊರ್ವ್ವನುರ್ವ್ವಿಯೊಳ್
**ಕಲಿವಿಟ**ನೆಂಬನಾತನ ಜಿನಾಲಯಮುಂ **ನೆಱೆ** ಜೀರ್ಣ್ಣಮಾದುದಂ
ಕಲಿ ಸಲೆ ದಾನದೊಳ್ಪರಮಸೌಖ್ಯರಮಾರತಿಯೊಳ್ವಿಟಂ ವಿನಿ-
ಶ್ಚಲಮೆಸೆದಿರ್ದ್ದ **ಹುಳ್ಳ**ನದನೆತ್ತಿಸಿದಂ ರಜತಾದ್ರಿತುಂಗಮಂ ॥೩೩೭॥

ಉ.ಮಾ॥ ಸಂಶಿತ[1] ಸದ್ಗುಣಂ ಸಕಳಭವ್ಯನುತಂ ಜಿನಭಾಷಿತಾರ್ತ್ಥನಿ-
ಸ್ಸಂಶಯಬುದ್ಧಿ ಹುಳ್ಳ ಪೃತನಾಪತಿ ಕೈರವಕುನ್ದಹಂಸ ಶು-
ಭ್ರಾಂಶುಯಶಂ ಜಗನ್ನುತದೊಳೀ ವರ **ಬೆಳ್ಗುಳತೀರ್ತ್ಥ**ದೊಳ್ಚತು-
ರ್ವ್ವಿಂಶತಿ ತೀರ್ತ್ಥಕೃನ್ನಿಳಯಮುಂ ನೆಱೆ ಮಾಡಿಸಿದಂ ದಲಿನ್ತಿದಂ ॥೩೩೮॥

ಮ.ಸ್ರ.॥ ಪ್ರಿಯದಿಂದಂ ಹುಳ್ಳಸೇನಾಪತಿ **ಕೊಪಣಮಹಾತೀರ್ತ್ಥ**ದೊಳ್
ಧಾತ್ರಿಯುಂ ವಾ-
ರ್ದ್ಧಿಯುಮುಳ್ಳನ್ನಂ ಚತುರ್ವ್ವಿಂಶತಿ ಜಿನಮುನಿಸಂಘಕ್ಕೆ ನಿಶ್ಚಿಂತಮಾಗ-
ಕ್ಷಯದಾನಂ ಸಲ್ವ ಪಾಂಗಿಂ ಬಹುಕನಕಮನಾ ಕ್ಷೇತ್ರಜಗ್ಗಿರ್ತ್ತು ಸದ್ವೃ-
ತ್ತಿಯನಿಂತೀ ಲೋಕಮೆಲ್ಲಂ ಪೊಗಳೆ ಬಿಡಿಸಿದಂ ಪುಣ್ಯಪುಂಜೈಕಧಾಮಂ॥

## ೭೭

**ಹೆಗ್ಗೆರೆ,**
**ಚಿಕ್ಕನಾಯಕನ ಹಳ್ಳಿ ತಾಲೂಕು,**
ತುಮಕೂರು ಜಿಲ್ಲೆ

**ಕ್ರಿ. ಶ. ೧೧೬೧**
**ಹೊಯ್ಸಳ ನರಸಿಂಹ**
(ಎಪಿ. ಕ. ೧೨, ಪು. ೨೧೮)

### ಬಿಟ್ಟದೇವನ ವೀರ

ಈ ಬಿಟ್ಟದೇವನು ಹೊಯ್ಸಳರ ಸಾಮಂತ. ಹಗೆಗಳ ದೊಡ್ಡ ಸೇನೆಯನ್ನೂ ಈತನು 'ಗಿಲಿ ಗಿಲಿ ಗಂಬ' (ಕಂಬವನ್ನು ಸುತ್ತುವರಿಯುವ ಆಟವಿರಬಹುದು) ಆಡಿಸುವನೆಂದೂ "ಇದ್ದುದನ್ನೆಲ್ಲ ತೆಗೆದುಕೊ, ನಮ್ಮ ಪತಿ ್ನ್ನ ಕೀರ ಸಾಮಾನ್ಯ ಆಳಿಗೂ ಸರಿಯಲ್ಲ ಇವರ ಮೇಲೆ ಸುಮ್ಮನೆ ಮುನಿಯಬೇಡ" ಎಂದು ಹಗೆಗಳ ಹೆಂಡಿರು ಈತನನ್ನು ಬೇಡಿಕೊಳ್ಳುವರೆಂದೂ ಇವನ ಶೌರ್ಯವು ವರ್ಣಿತವಾಗಿದೆ.

ಈ ಜಿನಶಾಸನವನ್ನು ದೇವಭದ್ರ ಎಂಬ ಮುನಿಪೋತ್ತಂಸನು ಉಚಿತಪದಾಲಂಕಾರ-ಯುಕ್ತವಾಗಿ ರಸಭರಿತವಾಗಿ ರಚಿಸಿದನೆಂದು ಕೊನೆಯಲ್ಲಿ ಹೇಳಿದೆ. ಚಂಪಕಮಾಲಾವೃತ್ತವನ್ನು ಈ ಶಾಸನದಲ್ಲಿ 'ಚಿತ್ರಲತೆ' ಎಂದು ಹೆಸರಿಸಿದೆ.

1. ಸಂಶ್ರಿತ ಇಲ್ಲವೆ ಶಂಸಿತ ಎಂದಿರಬಹುದು.

ನಲಿದುಲಿದಟ್ಟಿಕೊಣ್ಡು ಕವಿತಪ್ಪ ವಿರೋಧಿಬಲಕ್ಕೆ ಭೀತಿಯಿಂ
ನೆಲವೊಲನೆನ್ನದಲ್ಲದಿದು ಪೆರ್ಬ್ಬುಲವೆನ್ನದೆ ದೋಃಪ್ರತಾಪದಿಂ
ಗಿಲಿಗಿಲಿಗಪ್ಪುವಾಡಿಸುವನಾಹವದೊಳ್ಕಲಿ **ಬಿಟ್ಟಿದೇವ** ನಿ-
ನ್ನೆಲೆಗಳವಂಗೆ ಸಂಗರದೊಳಾಪ್ಪನೆ ಗಾಪ್ಪುನವಾರ್ಯಶೌರ್ಯನೊಳ್ ||೩೪೦||

ಶಾ.ವಿ.|| ಬಾಳಂ ತೂಗದಿರುಳ್ಳುದಂ ಕವರ್ದುಗೊಳ್ಳದ್ವಲ್ಲಭರ್ನಿನ್ನ ಕೀ-
ಳಾಳೋಳಿಂಗೆಣೆಯಲ್ಲರೇಕೆ ಮುನಿವೈ ನೀಂ ಕಾರಣಂ ಬೇಡ ನಿ-
ನ್ನಾಳೋಪಕ್ಕೆರ್ದೆಗೆಟ್ಟರೆನ್ದು ನುಡಿಗುಂ ತದ್ವೈರಿಕಾನ್ತಾ ಜನಂ
ಹೇಳೇನೆಮ್ಬುದೊ ಬಿಟ್ಟದೇವನಲಘುದೋ[ರ್]ವ್ವಿಕ್ರಮಕ್ರೀಡೆಯಂ ||

**ಶಾಸನಕವಿ**

ಕಂ || ಉಚಿತಪದಾಲಂಕಾರಂ
ಪ್ರಚುರರಸಂ ನೆಗಳಲಿಸ್ತು ಜಿನಶಾಸನಮಂ
ರಚಿಯಿಸಿದಂ ಹರಹಾಸ ಸು[1]
ರುಚಿರಯಶಂ **ದೇವಭದ್ರ** ಮುನಿಪೋತ್ತಂಸಂ ||೩೪೬||

## ೭೮

## ಮನಗೋಳಿ, ಕ್ರಿ. ಶ. ೧೧೬೧

**ಬಾಗೇವಾಡಿ ತಾಲೂಕು, ಕಳುಚುರ್ಯ ಬಿಜ್ಜಳ**

ವಿಜಾಪುರ ಜಿಲ್ಲೆ (ಎಪಿ. ಇಂ. ೫, ಪು. ೧೬)

**ಮಂದರಗಿರಿ** (ಮೇರುಪರ್ವತ)

ಶಾ. ವಿ || ಶ್ರೀಮತ್ಕಾಂಚನಕಾನ್ತಿಬಂಧುರಿತವಾಶಾಸಿಂಧುರಶ್ರೇಣಿ ಧಾ-
ತ್ರೀಮಧ್ಯಂ ನೆಲೆ ದೇವದಂಪತಿಶತಕ್ರೀಡಾವಿಳಾಸಂ ನಿಜೋ-
ದ್ದಾಮಶ್ರೀಗಭಿರಾಮಧಾಮವೆನೆ ಸಪ್ತದ್ವೀಪ ಸಪ್ತಾರ್ಣ್ಣವ-
ಸ್ತೋಮಾಳಂಕೃತಿ ರಂಜಿಕುಂ ವಿವಿಧಕೇಳೀಕಂದರಂ ಮಂದರಂ[2] ||೩೪೩||

**ಚಾರಿತ್ರ್ಯಸಂಪನ್ನ ಚಾಳುಕ್ಯವಂಶ**

ಈ ವಂಶದವರ ನಡೆನುಡಿಯನ್ನು ನೋಡಿಯೇ ಮನುಸ್ಮೃತಿಯ ಸೂತ್ರಗಳ ಅರ್ಥವನ್ನು ಅರಿತುಕೊಳ್ಳಬಹುದು ಎಂದಿದ್ದಾನೆ ಕವಿ. ಅಂತಹ ಸಚ್ಚಾರಿತ್ರ್ಯ ಅವರದು. ಮನುಮಾರ್ಗಕ್ಕೆ ವ್ಯತಿರಿಕ್ತವಾಗಿ ಅವರು ಎಂದೂ ನಡೆದವರಲ್ಲ.

---

1. ಶಾ. ಮೂ. ಸು ನಷ್ಟವಾಗಿದೆ.
2. ಈ ಊರ ಇನ್ನೊಂದು ಶಾಸನದಲ್ಲಿಯೂ ಈ ಪದ್ಯವುಂಟು.

ಕಂ || ಕನಕನಗದಕ್ಷಿಣೋರ್ವ್ವೀ-
ವನಿತಾಕುನ್ತಳವೆನಿಪ್ಪ **ಕುನ್ತ**ಳಧರೆಯಂ
ವಿನುತಂ ಚಳುಕ್ಯರಾಟ್ಟ-
ರ್ವ್ಮನುಸೂತ್ರದ ಟೀಕೆದೆಂಬಿನಂ ಚಾರಿತ್ರಂ ||೩೪೪||

ವಾಸವವಿಳಾಸದಿಂ ಸಿಂ-
ಹಾಸನವಷ್ಟಾದಶಂ ಪ್ರವರ್ತ್ತಿಸೆ ರಾಜ್ಯ-
ಶ್ರೀಸತಿಯೊಳ್ ನೆರೆದ ಯಶೋ-
ಭಾಸುರ ಚಾಳುಕ್ಯರೊಳಗೆ ಹದಿನೆಂಟನೆಯಲ್ ||೩೪೫||

## ಪಟ್ಟದ ಚಳುಕ್ಯರು

ಚಾಳುಕ್ಯರಾಜರಲ್ಲಿ ೧೮ನೆಯವನಾದ ಕತ್ತಿಯರದೇವನಿಗೆ ಕಿಸುವೊಳಲು (ಪಟ್ಟದಕಲ್ಲು) ವಂಶಪರಂಪರೆಯ ರಾಜಧಾನಿಯಾಗಿತ್ತು. ಅವನ ಕಕ್ಕನ ವಂಶದವರು 'ಪಟ್ಟದ ಚಳುಕ್ಯರು' ಎಂದೆನಿಸಿದರೆಂದೂ ಈ ಪಟ್ಟದ ಚಳುಕ್ಯ ಸಂತತಿಯಲ್ಲಿಯೇ ಪ್ರತಾಪಿಯಾದ ತೈಲಪನು ಜನಿಸಿದನೆಂದೂ ತಿಳಿಯುತ್ತದೆ.

ಚಂ|| ತ್ರಿಭುವನವಿಶ್ರುತಂ **ಕಿಸುವೊಳಲ್ತ**ನಗನ್ವಯರಾಜಧಾನಿಯಾ-
ದಭಿನುತಕೀರ್ತ್ತಿ **ಕತ್ತಿಯರದೇವ**ನ ತಂದೆಯ ತಮ್ಮನನ್ವಯ-
ಪ್ರಭವರೆನಿಪ್ಪ ಪಟ್ಟದ ಚಳುಕ್ಯರ ಸನ್ತತಿಯೊಳ್ಸುರೇಂದ್ರಸ-
ನ್ನಿಭನೆನೆದಂ ಚಳುಕ್ಯಕುಳಭೂಷಣ**ನಯ್ಯಣದೇವ**ಭೂಭುಜಂ ||೩೪೬||

ಕಂ || ಪೆಸರ್ವ್ವೆತ್ತಯ್ಯಣನೃಪತಿಗೆ
ಜಸವೆಸೆವ ಚಳುಕ್ಯ ವಿಕ್ರಮಾದಿತ್ಯಂ ಸಾ-
ಹಸಮೇರು ಪುಟ್ಟಿದಂ ಶ್ರೀ-
ವಸುದೇವಂ ಪುಟ್ಟುವನ್ತೆ ಯಾದವಕುಲದೊಳ್ ||೩೪೭||

## ಮರ್ತ್ಯಮುಕುಂದ ಆಹವಮಲ್ಲ ತೈಲ

ಇವನು ನೂರೆಂಟು ಬಯಲುಗಾಳೆಗಗಳನ್ನು ಗೆದ್ದನು; ಎಂಬತ್ತೆಂಟು ಕೋಟೆಗಳನ್ನು ಹಿಡಿದನು; ರಟ್ಟರೆಂಬ ದೈತ್ಯರ ಪ್ರಘಟ್ಟನದಿಂದ ಜರಿದ ಚಾಳುಕ್ಯರಾಜ್ಯವನ್ನು ಎತ್ತಿದನು. ದೈತ್ಯರಿಂದ ರಸಾತಳಕ್ಕಿಳಿದ ಭೂಮಿಯನ್ನು ಉದ್ಧರಿಸಿದ ವಿಷ್ಣುವಿನ ವರಾಹಾವತಾರವನ್ನು ವರಾಹಲಾಂಛನನಾದ ಈ ಮಹಾಪ್ರತಾಪಿ ತೈಲನಲ್ಲಿ ಆರೋಪಿಸಿ, ಇವನು ಮರ್ತ್ಯಮುಕುಂದ – ನರರೂಪೀ ನಾರಾಯಣ—ಎಂದು ಕವಿ ಬಣ್ಣಿಸಿದ್ದಾನೆ.

ಬಂಟೆನ ಮೆಯ್ಗಲಿ **ತೈಲಂ**
ತೆಂಟಣಿಸುವರಟಿವೆ ಬಯಲ ಕಾಳೆಗವಂ ನೂ–

ಅ೩ಂಟಂ ಕಾದಿದನೆಣ್ಬ-
ತ್ತೆಂಟಂ ಕೊಂಡಂ ಪ್ರತಾಪದಿಂ ಕೋಟೆಗಳಂ ||೩೪೮||

ಚಂ|| ಬೆದಱದ ಮನ್ನೆಯರ್ಬ್ಬಿಱಿತು ಪೋಗದ ಮಣ್ಡಳನಾಥರರ್ಗ್ಗ ತ-
ಗ್ಗದ ನೆಲೆಗೋಟೆ[1] ಧೂಳಿಪಟವಾಗದ ದುರ್ಗ್ಗ[2] ಕುಳಂ ಕುನುಂಗಿ ಪಿಂ-
ಗದ ಪರಮಣ್ಡಳಂ ನಡುಗಿ ಕಪ್ಪಮನೀಯದ ವೈರಿರಾಯರಾ-
ರದಟನ ಬಾಹುಸಾಹಸಸಮಗ್ರತೆಗಾಹವಮಲ್ಲ ತೈಲನ ||೩೪೯||

ಚಂ|| ಧರಣಿಯನಾರಸಾತಳದೊಳದ್ದುವ[3] ನಾದಿವರಾಹರೂಪದಿಂ
ಸರಸಿಜನಾಭನುದ್ಧರಿಸಿದನ್ದದೆ[4] ರಟ್ಟನೃಪಪ್ರಘಟ್ಟದಿಂ
ಜರಿದ ಚಳುಕ್ಯ ರಾಜ್ಯಮನಿಳಾನುತಕೀರ್ತ್ತಿ ವರಾಹಚಿಹ್ನನು-
ದ್ಧರಿಸಿದನೀ ಜಗಕ್ಕೆ ಕಲಿ ತೈಲನೆ ಮರ್ತ್ತ್ಯಮುಕುಂದನಲ್ಲನೆ ||೩೫೦||

## ಮಾಣಿಕ್ಯವಲ್ಲೀ (ಮನಗೋಳಿ) ಪುರಪ್ರಭು ಮಾಧವ

ಮ.ವಿ.|| [5] ಅಭಿಮಾನೋನ್ನತಿ ಮಂದರಾದ್ರಿಗೊಱೆಯಂ ಕಟ್ಟಿತ್ತು ವಾರಾಂಗನಾ-
ಸುಭಗತ್ವಂ ಮದಸಂಗನಾದರಣೆಯಂ ಮಾಡಿತ್ತು ಶಶ್ವದ್ವಚೋ[a]-
ವಿಭವಂ ಕರ್ಣ್ಣನನೇಳಿಸಿತ್ತೆನಿಸುವಂ[b] **ಮಾಣಿಕ್ಯವಲ್ಲೀಪುರ**[c]-
ಪ್ರಭು ವಿಖ್ಯಾತಹರೀತಗೋತ್ರವಿಲಸ[d]ಲ್ಲಕ್ಷ್ಮೀಧವಂ ಮಾಧವ ||೩೫೧||

## ಐನೂರ್ವರು ಮಹಾಜನಗಳು

ಮನುಮಾರ್ಗ್ಗಕ್ಕೆ ಮಣಿಪ್ರದೀಪವೆನಿಸಿತ್ತಾಚಾರಸಂಪತ್ತಿ ಸ-
ಜ್ಜನಹರ್ಷಾಬ್ಧಿಗೆ ಚಂದ್ರಲಕ್ಷ್ಮಿಯೆನಿಸಿತ್ತೌದಾರ್ಯವುಗ್ರದ್ವಿಷ-
ದ್ಘನದರ್ಪ್ಪಾದ್ರಿಗೆ ಬಲ್ಪು ವಜ್ರವೆನಿಸಿತ್ತೆಂದಂದು [6] ಬಾಹ್ಯೋಪರಂ-
ಜನರೇ ಬಾಪ್ಪು [7] ಮಣಿಂಗವಳ್ಳಿಯ ಮಹೀದೇವರ್ಕ್ಕಳಯ್ನೂರ್ವ್ವರುಂ ||

## ಹುರ್ವಿನವರು

ಭೂನುತರಾದ ಆ ಐನೂರ್ವರೊಳಗೆ 'ಹುರ್ವಿನವರು' ಎಂಬ ಒಂದು ಮನೆತನವಿದ್ದಿತು.

---

1. ನೆಲೆಗೋಟೆ: ನೆಲಗೋಟೆ(?); 2 ದುರ್ಗ್ಗ : ಬೆಟ್ಟದ ಮೇಲಣ ಕೋಟೆ

3. ಅರ್ದುದಂ ( ಮುಳುಗಿದುದನ್ನು ) ಎಂದಿರಬಹುದು. ಅೞ್-ಅೞ್ದುದಂ: ಅೞ್ದುದಂ: ಅದ್ದುದಂ.

4. ಶಾ.ಮೂ.: ದನ್ದಡೆ

5. ಈ ಊರ ಇನ್ನೊಂದು ಶಾಸನದಲ್ಲಿ ಇರುವ ಈ ಪದ್ಯದಲ್ಲಿಯ ಪಾಠಾಂತರಗಳು : *a.* ಶಶ್ವದ್ಯಶೋ; *b.* ಎನಿಸುವೀ; *c.* ಪುರಂ; *d.* ಗೋತ್ರತಿಲಕಂ.

6. ಬಾಹ್ಯ + ಉಪರಂಜನರೇ = ತೋರಿಕೆಯ ಜನರಂಜಕರೇ ?

7. ಮಣಿಂಗವಳ್ಳಿ = ಮನಗೋಳಿ.

ಕಂ॥ ಹುರ್ವ್ವಿನ ಜವ್ವುರ್ವ್ವಿಶಿಷ್ಟರ
ಹರ್ವ್ವಿದ ಬಡತನದ ಕೊರ್ವ್ವನುಡುಗಿಸುವುದಱಿಂ[1]
ಹುರ್ವ್ವಿನವರೆ[2]ಂಬ ನಾಮದ-
ಗುರ್ವ್ವಿನ ಗೋವರ್ದ್ಧನಂಗೆ ನಂದನನೆನಿಪ ॥೩೫೩॥

ಚಂ॥ ಪರಹಿತದೊಳ್ಪರಾಕ್ರಮದೊಳಾರ್ಪ್ಪಿನೊಳೂರ್ಜ್ಜಿತಶಕ್ತಿಯೊಳ್ಮಹೇ-
ಶ್ವರಪದಭಕ್ತಿಯೊಳ್ತನಗೆ ಪಾಸಟಿಯಾರ್ಪ್ಪರೆಱರೆಂಬ ಹೆಮ್ಮೆಯೊ-
ಳ್ನೆರೆದು ಮಣಿಂಗವಳ್ಳಿಯ ಧರಾಮರಪಂಚಶತಾನುರಾಗಪಂ-
ಕರುಹವಿಕಾಸಭಾಸ್ಕರನೆನಲ್ ನೆಗಳ್ದಂ **ಬಸವಂ** ಗುಣಾಕರ ॥೩೫೪॥

ಕಂ॥ ಕಯ್ಯಂ ನೊಸಲ್ಗೆ ದಂದೆ-
ಮ್ಮಯ್ಯಂ ಗುಣಿಯೆಂದು ಪೊಗಳೆ ಧರೆ[3] ಸಲೆ ಲೋಕ-
ಕ್ಕಯ್ಯನೆನಿಸಿಪ್ಪ ಬಸವರ-
ಸಯ್ಯಂ ಶ್ರೀಮಣಿಗವಳ್ಳಿಗೂರ್ಜ್ಜಿತವೆನಿಸಲ್ ॥೩೫೫॥

## ಬಸವರಸಯ್ಯನ ಧರ್ಮ-ಕಲಿದೇವ ದೇವಾಲಯ

ಮ.ವಿ.॥ ಇದು ವೇದತ್ರಯ ತತ್ತ್ವಧಾಮವಿದನಂತಾನಾದಿ ಸಂಸಿದ್ಧವಿಂ-
ತಿದು ತೇಜೋಮಯದಿಬ್ಯಲಿಂಗ[4]ವಿದು ಲೀಲಾಲೋಕಸಾನ್ನಿಧ್ಯವೆಂ-
ಬ ದಯಾಭ್ಯುನ್ನತಿ ಚೆನ್ನನಾದ **ಕಲಿದೇವೇಶಂ**ಗೆ ಲೋಕೋತ್ಸವಾ-
ಸ್ಪದಮಂ ಮಾಡಿಸಿದಂ ನಿಜಾನ್ವಯಯಶಸ್ಸಂದೋಹಮಂ ಗೇಹಮಂ ॥

ಚಂ॥ ಇದು ರಜತಾದ್ರಿಯಿಂದಧಿಕವೆಂಬಿನೆಗಂ ಬಸವಂ ನಿವಾಸಸಂ-
ಪದಮನೊಡರ್ಚ್ಚಿದಂ ಮಣಿಗವಳ್ಳಿಯ ವಿಪ್ರವರರ್ಕ್ಕುಬೇರನೊ-
ಳ್ಪುದುವೆನಿಸಿಪ್ಪರ್ ಭಕ್ತಿಯುತರಿಲ್ಲಿಯೆ ಸಂತತವಿರ್ಪ್ಪೆನೆಂಬ ಸಂ-
ನಿದತನವೊಪ್ಪುವಂತೆ ಕಲಿದೇವಮಹೇಶನಿವಾಸವೊಪ್ಪುಗುಂ ॥ ೫೭॥

---

1. ಉಡುಗಿಕುಮದಱಿಂ ಅಥವಾ ಉಡುಗಿಸುವುದಱಿಂ ಎಂದಿರಬಹುದು.

2 ದಟ್ಟವಾದ ಹುಬ್ಬಿನವನಿಂದ ಬಂದಿರಬಹುದಾದ ಮನೆತನದ ಅಡ್ಡ ಹೆಸರು ಇಲ್ಲಿ ಗೋವರ್ಧನನ ದಾನಗುಣದ ವರ್ಣನೆಗೆ ಅಲಂಕಾರವಾಗಿದೆ.

3. ಈತನ ಮಾತು ಹೊರಟಾಗ, ' ನಮ್ಮಯ್ಯ ಗುಣಿ ' ಎಂದು ಜನರು ಹಣೆಗೆ ಕೈಯೊಯ್ದು ಗೌರವವನ್ನು ತೋರುತ್ತಿದ್ದರು.

4. ತೇಜೋಮಯದಿಬ್ಯಲಿಂಗ = ದಿವ್ಯವಾದ ಜ್ಯೋತಿರ್ಲಿಂಗ ಎಂಬರ್ಥದಲ್ಲಿ.

**ಈ ಧರ್ಮವನ್ನು ಅಳಿದರೆ—**

ಕಂ|| ಊರೊಡೆಯರಕ್ಕೆ ಗಣವ-
ಕ್ಕೂರಾಳ್ವರಸಕ್ಕೆ ನಾಡಕೊಂಡೆಯು[1] ರಕ್ಕಿಂ-
ತಾರೀ ಧರ್ಮ್ಮಮನಳಿದಡೆ-
ವೋರಂತಿರೆ ರೌರವಕ್ಕೆ ಗಳಗಳನಿಳಿಗು ||೩೫೮||

ಗಂಗಾಸಾಗರ ಯಮುನಾ-
ಸಂಗಮದೊಳ್ ವಾರಣಾಸಿ ಗಯೆಯೆಂಬೀ ತೀ-
ರ್ತ್ಥಂಗಳೊಳಗಣಿತಸದ್ದ್ವಿಜ-
ಪುಂಗವಗೋಕುಳವನಳಿದನಿಂತಿ[ದನ]ಳಿದ ||೩೫೯||

## ೭೯

**ಹೂಲಿ,** **ಕ್ರಿ. ಶ. ೧೧೬೨**

**ಸವದತ್ತಿ ತಾಲೂಕು,** **ಕಳಚುರ್ಯ ಬಿಜ್ಜಳ**

ಬೆಳಗಾವ ಜಿಲ್ಲೆ (ಕ. ಇನ್ಸ್ ೧, ಪು. ೫೩)

**ಕಾಳಿದಾಸೋತ್ತಮ**

ಅಗಸ್ತೇಶ್ವರ ದೇವರಿಗೆ ಮತ್ತು ನಾಗಬಾವಿ, ಧರ್ಮದ ಏತ, ಅಗ್ಗಿಷ್ಟಿಗೆಯ ಆರ್ಯೆಕೆಗಳಿಗೆ ಹೂಲಿಯ ಶಿವಯಗೇರಿಯ ದಾಸಿರಾಜನು ದತ್ತಿಯನ್ನು ಕೊಟ್ಟನೆಂದು ಈ ಶಾಸನದಲ್ಲಿ ಹೇಳಿದೆ. ಆ ದಾಸಿರಾಜನ ತಂದೆಯಾದ ಕಾಳಿದಾಸೋತ್ತಮನು 'ಸುಕವೀಂದ್ರತ್ವದಲ್ಲಿ ಪದ್ಮಾಸನ(ಬ್ರಹ್ಮ)ನೆಂದು ವರ್ಣಿತನಾಗಿದ್ದಾನೆ.

ಮ. ವಿ|| ಅಕಳಂಕಂ ತನುವಾಗಿ ವರ್ತ್ತಿಸುವ ಚಂದ್ರಂ ಕಾನ್ತಿಯೊಂದೇಳ್ಗೆಯಿಂ
ಸಕಳವ್ಯಾಪಕನಾಗಿ ಜಾಡ್ಯತನಮಂ ಬಿಟ್ಟಬ್ದ ಪದ್ಮಾಸನಂ
ಸುಕವೀಂದ್ರತ್ವದೊಳೀಶನಿಂ ಕಿಡದ ಕಾಮಂ ರೂಪಸಂಪತ್ತಿಯಿಂ
ಪ್ರಕಟಂಬೆತ್ತ ಚರಿತ್ರದಿಂ ಮನುವೆನಿಪ್ಪಂ **ಕಾಳಿದಾಸೋತ್ತಮಂ** ||

**ಕಳಚುರ್ಯ ಬಿಜ್ಜಣ**

ಬಿಜ್ಜಳನ ಮಹಾಶೌರ್ಯವನ್ನೂ ಅವನು ಕಾದಿ ಗೆದ್ದ ರಣರಂಗದ ಭೀಭತ್ಸ ಚಿತ್ರವನ್ನೂ ಈ ಪದ್ಯಗಳು ಬಣ್ಣಿಸುತ್ತಿವೆ.

ಚಂ|| ಜವನಿವನೇವನೆಂಬನದಟಿಂ ಕುಳಿಕಾಹಿಯ ಹಲ್ಗಳಂ ಕಳ-
ಲ್ಚುವನಿದಿರಾಗೆ ರಾವಣನುಮಂ ನೆಲಕಿಕ್ಕು[ವನು]ಗ್ರಹೈಹೆಯಂ

---

1. ಈ ಊರ ಇನ್ನೊಂದು ಶಾಸನದಲ್ಲಿ 'ಕೊಂಟೆಯ' ಎಂದುಂಟು.

ಬವರದೊಳಾನ್ತೊಡಾತನ ಭುಜಂಗಳಿನೊಪ್ಪುವ ಖಳ್ಗಧಾರೆಯಿಂ-
ದವೆ[1] ಕಡಿಖಂಡಮಾಗೆ ತಱಿವಂ ಸಲೆ ಬಿಜ್ಜಣದೇವಭೂಭುಜಂ ||೩೬೧||
ಪರಿವರುಣಾಂಬು ಸೂಸಿದ ಮಿದುಳ್ಪರೆದೊಕ್ಕ ಕರುಳ್ಗಳಲ್ದು ಜೋ-
ಲ್ವರಿಕರಿಸಂಕುಳಂ ಸುಱಿದು ಕಿತ್ತುವ ಹುಣ್ಬೆರಸಾಡುವಟ್ಟೆಯಿಂ[2]-
ಚರಮೆಸೆಯು[3]ಲ್ಕೆ ಪಾಡುವ ಭಟರ್ಕ್ಕಳ ಪಣ್ದಲೆ[4]ಯಿಂದೆ ನೋಡಲಾ-
ಸುರಮು[ಮ][5]ಗುರ್ವ್ವಮಾಯ್ತುಱಿದು ಗೆಲ್ದೆಡೆ ಬಿಜ್ಜಣದೇವ ಭೂಪನ ||

## ೮೦

**ಶ್ರವಣಬೆಳುಗೊಳ,** **ಚೆನ್ನರಾಯಪಟ್ಟಣ ತಾಲೂಕು,** ಹಾಸನ ಜಿಲ್ಲೆ

**ಕ್ರಿ. ವ. ಸು. ೧೧೭೫** **ಹೊಯ್ಸಳ ವಿಷ್ಣುವರ್ಧನ** (ಎಪಿ. ಕ. ೨, ಪು. ೧೦೧)

### ಗಂಗಚಮೂಪತಿಯು ತಿಗುಳ (ತಮಿಳ) ದಾಮನನ್ನು ಗೆಲಿದುದು

ಪ್ರತ್ಯಕ್ಷಯುದ್ಧ ಪ್ರಸಂಗದ ವರ್ಣನೆ ಇಲ್ಲಿ ಅಪರೂಪವಾಗಿದೆ. ಚೋಳನ ಸಾಮಂತರನ್ನು ಸೋಲಿಸಿ ನಾಡನ್ನು ಗೆಲಿದು ಕೊಟ್ಟುದಕ್ಕಾಗಿ ವಿಷ್ಣುವರ್ಧನನು ಮೆಚ್ಚಿ, 'ಬೇಡಿದುದನ್ನು ಕೊಡುವೆ, ಕೇಳಿ'ಂದರೆ, ಈ ಗಂಗಚಮೂಪತಿ ತನಗಾಗಿ ಸಿರಿ ಅಧಿಕಾರ ಯಾವುದನ್ನೂ ಬೇಡಲಿಲ್ಲ. 'ಗೊಮ್ಮಟನ ಪೂಜೆಗಾಗಿ ಗೋವಿಂದವಾಡಿ'ಯನ್ನು ಕೇಳಿ ಇವನು ತನ್ನ ಉದಾರೋದಾತ್ತ ಚರಿತೆಯನ್ನು ಮೆರೆದನು. ಅಲ್ಲದೆ ಇವನು ಗಂಗವಾಡಿಯಲ್ಲಿಯ ಎಲ್ಲ ಬಸದಿಗಳ ಜೀರ್ಣೋದ್ಧಾರ ಮಾಡಿದನು. ಈ ಪ್ರಸಂಗ ಶ್ರವಣಬೆಳುಗೊಳದ ಎರಡು ಶಾಸನಗಳಲ್ಲಿ ವರ್ಣಿತವಾಗಿದ್ದು, ಇಲ್ಲಿಯ ಕೆಲವು ಪದ್ಯಗಳು ಮೂರನೆಯದೊಂದರಲ್ಲಿಯೂ ಬಂದಿವೆ.

ಕಂ || ಮನುಚರಿತನೇಚಿಗಾಂಕನ
ಮನೆಯೊಳ್ಮನಿಜನಸಮೂಹಮುಂ ಬುಧಜನಮುಂ
ಜಿನಪೂಜನೆ ಜಿನವಂದನೆ
ಜಿನಮಹಿಮೆಗಳಾವ ಕಾಲಮುಂ ಶೋಭಿಸುಗುಂ ||೩೬೩||

ವ|| ಅನ್ತೆಸೆಸಿದ ಏಚಿರಾಜನ ಪೋಚಿಕಬ್ಬೆಯ ಪುತ್ರನಖಿಳ ತೀರ್ತ್ಥಕರ ಪರಮದೇವಪರಮಚರಿತಾಕರ್ಣ್ಣನೋದೀರ್ಣ್ಣ ವಿಪುಳಪುಳಕ ಪರಿಕಳಿತವಾರಬಾಣನು-ಮಸಮಸಮರರಸರಸಿಕ ರಿಪುನೃಪಕಳಾಪಾವಲೇಪಲೋಲುಪ ಕೃಪಾಣನುವಾಹಾರಾ-

---

1. ಶಾ. ಮೂ. ದಮೆ 2. ಹುಣ್ (ಗಾಯ) + ಬೆರಸು + ಅಡುವ + ಅಟ್ಟೆ (ದೇಹ)
3 ಶಾ. ಮೂ. : ಯ ನಷ್ಟವಾಗಿದೆ 4 ಪಣ್ದಲೆ = ಪಂದಲೆ
5. ಶಾ. ಮೂ. : [ಮಿ]

ಭಯಭೈಷಜ್ಯಶಾಸ್ತ್ರದಾನವಿನೋದನುಂ ಸಕಳಲೋಕಶೋಕಾಪನೋದನುಂ[1—1] ಎನಿಪ ಶ್ರೀಮನ್ಮಹಾಪ್ರಧಾನಂ ದಣ್ಡನಾಯಕಂ ದ್ರೋಹಘರಟ್ಟ **ಗಂಗರಾಜಂ,** ಚೋಳನ ಸಾಮನ್ತನದಿಯುಮಂ ಘಟ್ಟದಿಂ ಮೇಲಾದ ಗಂಗವಾಡಿ ನಾಡ ಗಡಿಯ ತಳಕಾಡ[2] ಬೀಡಿನೊಳ್ಪಡಿಯಿಪ್ಪನ್ತಿರ್ದ್ದ[3] ಚೋಳಂ ಕೊಟ್ಟ ನಾಡಂ ಕೊಡದೆ ಕಾದಿ ಕೊಳ್ಳಿಮೆನ್ದೆ, ವಿಜಿಗೀಷುವೃತ್ತಿಯಿನ್ದಮೆತ್ತಿ ಬಲಮೆರಡುಂ ಸಾರ್ಚಿದಲ್ಲಿ,

ಉ.ಮಾ॥ ಇತ್ತಣ ಭೂಮಿಭಾಗದೊಳದನ್ಯ[4]ರದೇಕೆ ಭವತ್ಪ್ರತಾಪಸಂ-
ಪತ್ತಿಯ ವರ್ಣ್ನನಾವಿಧಿಗೆ ಗಂಗಚಮೂಪ ಜಿಗೀಷುವೃತ್ತಿಯಿಂ-
ದೆತ್ತಿದ ನಿನ್ನ ಕಯ್ಯ ನಿಸಿತಾಸಿಯ ತೌಮೊನೆ ಬೆನ್ನ ಬಾರನೆ-
ತ್ತುತ್ತಿರೆ ಪೋಗಿ ಕಂಚಿ ಗುಱಿಯಪ್ಪಿನಮೋಡಿದ ದಾಮನೆಯ್ದನೆ ॥೩೬೪॥

ಚಂ॥ ಕದನದೊಳನ್ದು ನಿನ್ನ ತರವಾರಿಯ ಬಾರಿಗೆ[5] ಮೆಯ್ಯನೊಡ್ಡಲಾ-
ಱದೆ ನಳಿದಿನ್ನುಮನ್ತದನೆ ಜಾನಿಸಿ ಜಾನಿಸಿ ಗಂಗ ತನ್ನ ಸಂ-
ಬಿದ ಸುದತೀಕದಂಬದೆರ್ದೆ[6] ಪೌವನೆವೋ[7]ಗಿರೆ ಪುಲ್ಲೆವೆಚ್ಚು[8]ವೆ-
ಚ್ಚಿದಪನಹರ್ನ್ನಿಶಂ ತಿಗುಳ ದಾಮನರಣ್ಯಶರಣ್ಯವೃತ್ತಿಯಿಂ ॥೩೬೫॥

ಮ.ವಿ.॥ ಎನಿತಾನುಂ ಬವರಂಗಳೊಳ್ಪಲಬರಂ ಬೆಂಕೊಂಡ ಗಣ್ಡಿನ್ದಮೋ-
ವೆನಿಸುತ್ತಂ ತಳಕಾಡೊಳಿನ್ನೆವರಮಿರ್ದ್ದೀ[9]ಗಳ್ಕರಂ ಗಂಗರಾ-
ಜನ ಖಡ್ಗಾಹತಿಗಳ್ಕಿ ಯುದ್ಧವಿಧಿಯೊಳ್ಬೆನ್ನಿತ್ತು ನಾಯುಣ್ಣದೋ-
ಡಿನಲುಣ್ಡಿರ್ದ್ದ[10]ಪನತ್ತ ಶೈವಶಮಿವೋ[11]ಲ್ಸಾಮನ್ತ **ದಾಮೋದರಂ॥**

## ಕೊಡುವುದನ್ನು ದೇವರಿಗೆ ಕೊಡಿ

ವ॥ ಎಂಬಿನಮೊನ್ದೆ ಮೆಯ್ಯೊಳವಯವದಿನೆಯ್ದಿ ಮೂದಲಿಸಿ ಧೃತಿಗಿಡಿಸಿ ಬೆಂಕೊಣ್ಡು ಮತ್ತಂ ನರಸಿಂಗವರ್ಮ್ಮಂ ಮೊದಲಾಗೆ ಘಟ್ಟದಿಂ ಮೇಲಾದ ಚೋಳನ

1–1 ಇಲ್ಲಿ ಈ ಗಂಗಚಮೂಪತಿಯನ್ನು ವರ್ಣಿಸುವ ಒಂದು ಸಂಸ್ಕೃತ ಶ್ಲೋಕವಿದೆ.
2. ಇನ್ನೊಂದು ಶಾಸನದಲ್ಲಿ 'ತಳೆಕಾಡ' ಎಂದಿದೆ.
3 ಇನ್ನೊಂದರಲ್ಲಿ 'ಟ್ದು'
4 ಇನ್ನೊಂದರಲ್ಲಿ ಧನ್ಯ
5 ಇನ್ನೊಂದರಲ್ಲಿ ಹರಿಗೆ
6 ಇನ್ನೊಂದರಲ್ಲಿ ರೆಟ್ಟೆ
7. ಇನ್ನೊಂದರಲ್ಲಿ ಪೋ
8. ಪುಲ್ಲೆಯ ಬೆಚ್ಚು = ಚಿಗರಿಯಂತಹ ಅಂಜಿಕೆ
9 ಇನ್ನೊಂದರಲ್ಲಿ ಮಿಟ್ದೀ
10. ಇನ್ನೊಂದರಲ್ಲಿ ಟ್ದ
11. ಇನ್ನೊಂದರಲ್ಲಿ ಶಯ್ವ ಶಮಿಯೊ(ಶಮಿ = ಯತಿ)

ಸಾಮನ್ತರೆಲ್ಲರಂ ಬೆಂಕೊಣ್ಡು ನಾಡಾದುದೆಲ್ಲಮನೇಕಚ್ಛತ್ರದುಣ್ಡಿಗೆ ಸಾಧ್ಯಂ ಮಾಡಿ ಕುಡೆ ಕೃತಜ್ಞಂ ವಿಷ್ಣುನೃಪತಿ[1] ಮೆಚ್ಚಿ, ಮೆಚ್ಚಿದೆಂ ಬೇಡಿಕೊಳ್ಳೆಮೆನೆ,

ಕಂ|| ಅವನಿಪನೆನಗಿತ್ತಪನೆ-
ನ್ದವರಿವರವೊಲುಳಿದ ವಸ್ತುವಂ ಬೇಡವೆ ಭೂ-
ಭುವನಂ ಬಣ್ಣಿಸೆ ಗೋವಿ-
ನ್ದವಾಡಿಯಂ ಬೇಡಿದಂ ಜಿನಾರ್ಚ್ಚನಲುಬ್ಧಂ ||೩೬೭||

ಗೊಮ್ಮಟಮೆನೆ ಮುನಿಸಮುದಾ-
ಯಂ ಮನದೊಳ್ಮೆಚ್ಚಿ ಮೆಚ್ಚಿ ಬಿಚ್ಚಳಿಸುತ್ತುಂ
ಗೊಮ್ಮಟದೇವರ ಪೂಜೆಗ-
ದಂ ಮುದದಿಂ ಬಿಟ್ಟನಲ್ತೆ ಧೀರೋದಾತ್ತಂ ||೩೬೮||

ಅಕ್ಕರ||ಗಂಗವಾಡಿಯ ಬಸದಿಗಳೆನಿತೊಳವನಿತುಮಂ ತಾನೆಯ್ದೆ ಪೊಸಯಿಸಿದಂ
ಗಂಗವಾಡಿಯ ಗೊಮ್ಮಟದೇವರ್ಗ್ಗೆ ಸುತ್ತಾಲಯಮನೆಯ್ದೆ ಮಾಡಿಸಿದಂ
ಗಂಗವಾಡಿಯ ತಿಗುಳರಂ ಬೆಂಕೊಣ್ಡು ವೀರಗಂಗಂಗೆ[2] ನಿಮಿರ್ಚ್ಚಿ ಕೊಟ್ಟಂ
ಗಂಗರಾಜನಾ ಮುನ್ನಿನ ಗಂಗರರಾಯಂಗಂ ನೂರ್ಮ್ಮಡಿ ಧನ್ಯನಲ್ತೇ ||೩೬೯||

## ೮೧

**ಕುರುಗೋಡು,** **ಕ್ರಿ. ಶ. ೧೧೭೩**

**ಬಳ್ಳಾರಿ ತಾಲೂಕು,** **ರಾಯಮುರಾರಿ ಸೋಮೇಶ್ವರ**

ಬಳ್ಳಾರಿ ಜಿಲ್ಲೆ (ಸೌ. ಇಂ. ಇ. ೯, ಭಾ. ೧, ಪೃ. ೩೧೮)

**ಕಲಿದೇವಸ್ತುತಿ**

ಶಾ.ವಿ|| ಶ್ರೀರಾಮಾರವಣಪ್ರಣೂತ[3]ಮಹಿಮಂ ಬೃಂದಾರಕೋದಾರಬೃ-
ನ್ದಾರಾಧ್ಯಂ ತ್ರಿದಶಾಧಿನಾಥನಗಜಾ ಚಂಚತ್ಕುಚಾಲೋಲಕಾ-
ಶ್ಮೀರೋರಃಸ್ಥಳನಬ್ಜಸಂಭವನತಂ ತ್ರೈಳೋಕ್ಯನಿಸ್ತಾರ ವಿ-
ಸ್ತಾರಂ ಶ್ರೀಕಲಿದೇವನೊಲ್ದು ನಮಗೀಗಿಷ್ಟಾರ್ತ್ಥಸಂಸಿದ್ಧಿಯಂ ||೩೭೦||

**ಕುರುಗೋಡು ಕೋಟೆ**

ತುಂಗಭದ್ರೆಯ ದಕ್ಷಿಣದಲ್ಲಿದ್ದ ಬಲ್ಲಕುಂದೆ ನಾಡಿನಲ್ಲಿ ಕುರುಗೋಡು ದುರ್ಗವು ನಾನಾ

---

1 ವಿಷ್ಣುನೃಪತಿ : ಹೊಯ್ಸಳ ವಿಷ್ಣುವರ್ಧನ.

2. ವೀರ ಗಂಗ : ಹೊಯ್ಸಳ ವಿಷ್ಣುವರ್ಧನ

3 ಶಾ.ಮೂ. : ಪ್ರಣುತ

ಎನ್ನುವ ರಾಜರನ್ನು ಹಣ್ಣುಮಾಡುವ ಬಲಿಷ್ಠ ಕೋಟೆಯಾಗಿತ್ತು. 'ಕಾಳೆಗ ಎಂದರೆ ಏಳು ಮುಡಿ ಹೆಚ್ಚುತ್ತಿತ್ತು'ಂತೆ ಆ ಕೋಟೆ.

ಉ.ಮಾ॥ ಚೋಳನನಾಳುಮಾಡುವುದು ಗೂರ್ಜ್ಜರರಂ ಸಲೆ ತರ್ದ್ದಿಕುಂ ಕರಂ
ಲಾಳನನಾಳಿಮಾಡುವುದು ಪಾಂಡ್ಯನನಂಡಲೆಗುಂ ತೆಲುಂಗ ಭೂ-
ಪಾಲನನೇಳಿದಿಕ್ಕೆಯನೆ ಮಾಡುವುದೀ **ಕುಱುಗೋಡಕೋಟೆ** ತಾಂ
ಕಾಳೆಗವೆಂದಡೇಳು ಮಡಿ ಪೆರ್ಚ್ಚುವುದಚ್ಚರಿಯಾರೊ ಕಾದುವರ್॥

## ಮುಮ್ಮುರಿ ದಂಡಗಳ ಹಿರಿಮೆ

ಇಲ್ಲಿಯ ಐನೂರ್ವರು ಮುಮ್ಮುರಿದಂಡಗಳಿಂದಾಗಿ ಈ ಊರು, ಹಿರಿಮೆಯಲ್ಲಿ ಅತ್ಯಂತ ಪ್ರಖ್ಯಾತವಾಗಿದ್ದ ಅಯ್ಯಾವೊಳೆ (ಐಹೊಳೆ) ಯಿಂದ ಎರಡನೆಯ (ನೇರ್ಗಿರಿ) ದಾಗಿ ಎಣಿಸಲ್ಪಟ್ಟಿತ್ತು. ಈ ಮುಮ್ಮುರಿದಂಡಗಳು ಗುಣ-ಪಾಂಡಿತ್ಯಗಳಲ್ಲಿ ಶ್ರೇಷ್ಠರು ಮಾತ್ರವಲ್ಲದೆ 'ತೋಟ (ಕದನ) ಎಂದರೆ ಕೋಟಲಾಭ' ಎಂದು ಉಲಿಯುವವರಾಗಿದ್ದರು.

ರಗಳೆ॥ ಸ್ವಸ್ತಿ ಗವರೇಶಪದಪದ್ಮಷಟ್ಚರಣರುಂ
ವಿಸ್ತೀರ್ಣ್ಣವಸ್ತುಗುಣವಿನಿಹಿತಾಚರಣರುಂ ॥೩೭೨॥
ಪಂಚಶತವೀರಶಾಸನಗುಣೋದ್ಧರಣರುಂ
ಸಂಚಿತಸಮಸ್ತಧರ್ಮ್ಮಕನಿಸ್ತರಣರುಂ ॥೩೭೩॥
ಬ್ಯವಹಾರನಯವಿನಯ ವಿಜ್ಞಾನವಿದ್ಯರುಂ
ನವರತ್ನಪಾಹನಪರೀಕ್ಷಾನವದ್ಯರುಂ ॥೩೭೪॥
ತೋಟಯೆಂದಡೆ ಕೋಟಲಾಭವೆಂದುಲಿವರುಂ
ಆಟಂದಬವರಕ್ಕೆ ನಾಟಕಂ ನಲಿವರುಂ ॥೩೭೫॥
**ಅಯ್ಯಾವೊಳೆ**ಯ ತಳದಿನಿದುವೆ ನೇರ್ಗ್ಗಿಱಿದೆನಿಪ
ರಯ್ಯಮಾದ್ವಾರಾವತೀಪುರಕೆ ಕುಱುವೆನಿಪ ॥೩೭೬॥
ಕುಱುಗೋಡ ತಳದೊಳಗೆ ತಳರದಯ್ನೂರ್ವ್ವರುಂ
ನೆಱೆ ನೋರ್ಪ್ಪಡವರೊಳಗೆ ಪಗೆಗಂಜರೊರ್ವ್ವರುಂ ॥೩೭೭॥

## ಮಹಾಶಿವಭಕ್ತ ಕಲ್ಲಿಸೆಟ್ಟಿ

ಕಲ್ಲಿಸೆಟ್ಟಿ ಎಂದು ಕರೆಯಲ್ಪಟ್ಟ ಇವನ ಹೆಸರು ಕಲಿದೇವಸೆಟ್ಟಿ. ಮುಮ್ಮುರಿದಂಡಗಳೊಳಗೆಲ್ಲ ಇವನು ಪರಮಧಾರ್ಮಿಕನು, ಮಹಾಶಿವಭಕ್ತನು. ಇವನ ಹೃದಯದಲ್ಲಿ ಮಹಾದೇವನೇ ನೆಲಸಿ ಪುನಃಪ್ರೇರಕನಾಗಿ ಕಲಿದೇವಸೆಟ್ಟಿಯನ್ನು ನಡೆಸುತ್ತಿದ್ದಾನೆಂಬ ಪ್ರತೀತಿಯಿತ್ತು. ಈ ಭಕ್ತನು ತನ್ನ ವ್ಯವಹಾರವನ್ನು ಯಾವ ದೃಷ್ಟಿಯಿಂದ ನೋಡುತ್ತಿದ್ದನೆಂಬುದು ಇಲ್ಲಿಯ ಪದ್ಯಗಳಲ್ಲಿ ವ್ಯಕ್ತವಾಗಿದೆ.

ಉ.ಮಾ॥ ಸತ್ಯದ ಬಿತ್ತು ಸಾಹಸದ ಸಾಗರವೊಳ್ಗುಣದಾಗರಂ ಜನ-
ಸ್ತುತ್ಯತೆಯೊಳ್ಪು ಧರ್ಮ್ಮದ ತವರ್ಮ್ಮನೆ ಮಾಂತನದಿರ್ಕ್ಕೆದಾಣವೌ-
ಚಿತ್ಯದ.... ಜಸದ ಸಯ್ಪು ನೆಗಳ್ತೆಯ ಲೋಕದೇಳ್ಗೆಯೌ-
ನ್ನತ್ಯದ ಗೊತ್ತೆನುತ್ತೆ ಧರೆ ಬಣ್ಣಿಪುದೀ ಕಲಿದೇವ ಸೆಟ್ಟಿಯಂ ॥೩೭೮॥

ಕಂ॥ ಭಕ್ತಿಯ ಭಂಡ ಮೊದಲ್ ನಿಜ-
ಭಕ್ತಿಯೆ ಕೋಟಾನುಕೋಟಿ ಲಾಭಂ ಶಿವಸ-
ದ್ಭಕ್ತಿಯ ಬೆಳಸಿ ...
ಭಕ್ತಂ ಕಲಿದೇವಸೆಟ್ಟಿ ನೆಗಳ್ದಂ ಧರೆಯೊಳ್ ॥೩೭೯॥

ವ॥ ಆತನ ಹೃದಯಕಮಲದೊಳ್ ಮನಃಪ್ರೇರಕ ಮಹಾದೇವಂ ಜೀವನಾಗಿರ್ಪ್ಪನೆನ್ತೆನೆ—

**ಚಿನ್ತಾಮಣಿಲಿಂಗಂ** ಹೃದ-
ಯಾನ್ತರದೊಳ್ನಿನ್ದು ಕಲ್ಲಿ ಸೆಟ್ಟಿಗೆ ದಯೆಯಿಂ-
ದಿನ್ತು ನಡೆಯಿನ್ತು ನುಡಿಯೆಂ
ದಿನ್ತು ಸದಾಶಿಕ್ಷಿಸುತ್ತೆ ರಕ್ಷಿಸುತಿರ್ಪ್ಪಂ ॥೩೮೦॥

ವ॥ ಅಂತು ನಿಜಾಂತರಂಗದೊಳಿರ್ದ ಭಕ್ತಿಯುಮಂ ಶಕ್ತಿಯುಮಂ ಕುಡೆ ಬಹಿರಂಗಕೆ ವರಪ್ರಸಾದಂ ಬಳೆದು, ಕುಱುಗೋಡ ತೆಂಕಣ ಭಾಗದಲ್ ಮಾಟಕೂಟ ಪ್ರಾಸಾದದೇಗುಲಮಂ ಮಾಡಿಸಿ***

ಕಟ್ಟಿಸಿದ ಕೆಱೆ[3] ಮನೋಮುದ-
ದಿಟ್ಟಾರವೆ ಪಸಿಯಲೀಯದಿಕ್ಕುವ ಸತ್ರ[1]
ಬಿಟ್ಟ ಬೆಳಗೆಯ್ಗಳೆ[2] ಱೆವಱ-
ವಟ್ಟಿಗೆ ಕಲಿದೇವಸೆಟ್ಟಿ ಮಾಡಿದ ಧರ್ಮ್ಮಂ ॥೩೮೧॥

## ೮೨

**ಕುರಗೋಡು,** **ಕ್ರಿ. ಶ. ೧೧೭೭**

**ಬಳ್ಳಾರಿ ತಾಲೂಕು,** **ಕಳಚುರ್ಯ ಸಂಕಮ**

ಬಳ್ಳಾರಿ ಜಿಲ್ಲೆ (ಸೌ. ಇಂ. ಇ. ೯, ಭಾ ೧, ಪು. ೩೨೨)

**ಬಲ್ಲಕುಂದೆ ನಾಡು**

ಈ ನಾಡಿನಲ್ಲಿಯ ಊರುಗಳಿಗೆ ಮೂರು ಸುತ್ತಿನ ಕೋಟೆಗಳಿದ್ದುವೆಂದೂ ಕುಡಿಯೊಕ್ಕಲ

---

1 ಅಭ್ಯಾಗತರಿಗೆ ಹಸಿವೆಯಾಗಗೊಡದಂತೆ ಹೊತ್ತಿಗೆ ಉಣಬಡಿಸುವ ಸತ್ರ.

2 ಬೆಳೆದುನಿಂತ ಹೊಲವನ್ನು ದಾನವಾಗಿ ಕೊಡುವ ಪರಿಪಾಠವಿತ್ತು.

ಮಕ್ಕಳು ಧನದ ಧಾನ್ಯದ ಸೊಮ್ಮಿನ ಸೊಕ್ಕಿನಿಂದ 'ನಮಗಾರು ಸರಿ!' ಎನ್ನುವಂತಹ ಊರ್ಜಿತ ಸ್ಥಿತಿಯಲ್ಲಿದ್ದರೆಂದೂ ಬಣ್ಣಿಸಿದೆ.

ಚಂ|| ತಿಳಿಗೊಳದಿಂ ಮಡಲ್ತು ತಳಿತಾರವೆಯಿಂ ನೆಱೆಪೂತು ಕಾಯ್ತು ಪ-
ಣ್ತೆಳೆಗೆ ವಿಳಾಸಮಪ್ಪ ವನದಿಂ ಪಥಿಕರ್ಗ್ಗೆ ತೃಷಾಶ್ರಮಕ್ಷುಧಾ-
ವಳಿಯನದಾಗಲೀಯುವನಾವಾರ್ಗ್ಗವೆನಲ್ಕಡು [1]ರಯ್ಯಮಾಗಿ ಕ-
ಣ್ಗೊಳಿಸುವ **ಬಲ್ಲಕುಂದೆ**ವೆಸರಿನ್ದೆಸೆವಾ ವಿಷಯಾಂತರಾಳದೊಳ್ ||೨೮೩||
ಬಳೆದು ಮಡಲ್ತ ಶಾಳಿವನದಿಂ ಬೆಳದಾಗಸಮನ್ತುಡುಂಕುತುಂ
ಗಿಳಿಗಳ ಪಿಣ್ಡಿನಿನ್ದೆಸೆವ ಕೆಯ್ವೊಲದಿಂ ಮುಗಿಲುದ್ದವಾಗಿ ಮೂ-
ವಳಿಸಿದ ಕೋಟೆಯಿಂ ಧನದ ಧಾನ್ಯದ ಸೊಮ್ಮಿನ ಸೊಕ್ಕಿನಿಂದಮಾ-
ರ್ಗ್ಗಳ ದೊರೆ[2] ನಮ್ಮೊಳೆಂಬ **ಕುಡಿಯೊಕ್ಕಲ** ಮಕ್ಕಳಿನೂರ್ಗ್ಗಳೊಪ್ಪುಗುಂ||

## ಕುರುಗೋಡು ಊರ ವರ್ಣನೆ

ಬಲ್ಲಕುಂದೆನಾಡಿನ ರಾಜಧಾನಿ ಕುರುಗೋಡು. ಇಲ್ಲಿ ಅಖಿಳಕಳಾಪರಿಪೂರ್ಣನಾದ ರಾಚ-ಮಲ್ಲನಾಳುತ್ತಿದ್ದನು. ಈ ಊರ ಹರದರ (ವ್ಯಾಪಾರಿಗಳ) ಪೇಟೆ, ಬ್ರಾಹ್ಮಣರ ಕೇರಿ, ಸೂಳೆಗೇರಿ-ಗಳನ್ನು ಬಣ್ಣಿಸಿದ್ದೊಂದು ಇಲ್ಲಿಯ ಗ್ರಾಮವರ್ಣನೆಯ ವಿಶೇಷ. ಹಲವಾರು ವೈರಿವೀರರನ್ನು ಸೋಲಿಸಿದ ಕುರುಗೋಡು ಕೋಟೆಯ ಭದ್ರತೆಯನ್ನು ಕುರಿತು ಇಲ್ಲಿಯೂ ಹೇಳಲಾಗಿದೆ.

ಕಂ || ಆ ನಾಳ್ಗೆ ರಾಜಧಾನಿ ಧ-
ರಾನಾರೀ ಹಾರಲುಳಿತನಾಯಕಮಣಿವೋ-
ಲ್ನಾನಾರತ್ನಾಕೀರ್ಣ್ಣನ-
ಗಾನೀಕದ ಬಳಸಿನಿಂದೆ ಕುಱುಗೋಡೆಸಗು ||೨೮೪||
ಅಲ್ಲಲ್ಲಿಗೆ ತಿಳಿಗೊಳನುಂ
ಮಲ್ಲಿಗೆಯುಂ ಮಾಧವೀಲತಾಮಣ್ಡಪಮುಂ
ಪಲ್ಲವಿತಚೂತವನಮುಂ
ಸಲ್ಲಲಿತಂ ನೋಡಲೆತ್ತಲುಂ ಪೊಱವೊಳಲೊಳ್ ||೨೮೫||

### ಕೋಟೆ

ಚಂ|| ಉರವಣೆಯಿಂದೆ ಬಂದ ಮಗಧಾಂಧ್ರಕಳಿಂಗ ಚಳುಕ್ಯಪಾಂಡ್ಯಗೂ-
ರ್ಜರರೆನಿಪಗ್ಗದಣ್ಣಲೆಗಳೆನ್ನೊಳೆ ಭಂಗಮನಾಂತು ಪೋದರಾ-
ರ್ದ್ದೊರೆಯೆನಗೆಂಬಹಂಕೃತಿಯಿನುನ್ನತಿವೆತ್ತುದೆನಲ್ಕೆ ಪೆರ್ಚ್ಚೆಯುಂ-
ಬರಮನದಾದ [3]ಗಳ್ಳಿಱಿಗುಮೋವೊಗಳ್ವಿಂ **ಕುಱುಗೋಡು ಕೋಟೆ**ಯುಂ ||

1. ಶಾ. ಮೂ. ರಂಯ್ಯ
2. ಶಾ. ಮೂ. ರ್ಗ್ಗಳದೊಮ್ಮ
3. ಮಳ್ಳಿಱಿಗು ಎಂದಿರಬಹುದೆ?

## ವ್ಯಾಪಾರಿಗಳ ಬೀದಿ

ಕಂ || ಧನದಿಂ ಧನದನಿನಗ್ಗಳ-
ಮೆನಿಸುವ ಪರದರಿನಮೂಲ್ಯ ರತ್ನಂಗಳಿನ-
ತ್ಯನುಪಮ ವಿಚಿತ್ರವಸ್ತ್ರಾ-
ದ್ಯನೇಕದಿಂದೊಪ್ಪುಗುಂ[1] ವಣಿಗ್ವಾಟಂಗಳ್ ||೩೮೭||

## ಬ್ರಾಹ್ಮಣರ ಕೇರಿ

ಮ. ವಿ || ವಿವಿಧೋತ್ತುಂಗಲಸತ್ಸುಧಾಧವಳಸಂಕಾಶಾಚ್ಛಸುಚ್ಛಾಯೆಯಿಂ
ಭುವನಾಳಂಕೃತಮಪ್ಪ ದೇವಭವನಾನೀಕಂಗಳಿಂ ತರ್ಕ್ಕಶಾ-
ಸ್ತ್ರವಿವಾದಂಗಳಿನುದ್ಧವೇದರವದಿಂದಂ ಹೋಮಧೂಮಂಗಳಿಂ-
ದವನೀಶೋಭಿತಮಾಗಿ ಕಣ್ಗೊಳಿಸುಗುಂ ವಿಪ್ರೇಂದ್ರವಾಟಂಗಳು ||

## ಸೂಳೆಗೇರಿ

ಕಂ || ಸ್ಮರರಾಜರಾಜಧಾನಿಯೊ[2]-
ಸುರವನಿತಾಜನ್ಮಭೂಮಿಯೋ ಚೆಲ್ವಿಂಗಾ-
ಗರಮೋ ಪೇಳೆಂಬಿನೆಗಂ
ಕರಮೆಸೆಗುಂ ಸೂಳೆಗೇರಿಗಳು ತತ್ಪುರದೊಳ್ ||೩೮೯||

## ಮುಮ್ಮುರಿ ದಂಡಗಳು

ಇಂತೆನಿಸಿ ನೆಗಳ್ದ ಧಾತ್ರೀ-
ಕಾಂತೋತ್ತಮ **ರಾಚಮಲ್ಲನೃಪ**ನನುಮತದಿಂ
ದಂ[3] ತತ್ಪುರ ಮೂಲಸ್ತಂ
ಭಂ ತಾಮೆನಿಸಿರ್ದ್ದರಲ್ತೆ ಮುಮ್ಮುರಿದಂಡಂ ||೩೯೦||

ಚಂ|| ಕಡುಮುಳಿಸಿಂದೆ ಬಯ್ದಡೆ ದಿಟಂ ಬಿಡಿ ತಾನೆ ಕನಲ್ದು ಬಯ್ದು ನಾ-
ಟ್ದುಡಿದಡೆವೋಲೆಯಂ ಜವನುಮಾತನ ಬಾಳ್ಕೆಯ ಲೆಕ್ಕದೋಲೆಯಂ
ತೊಡದುಬಿಸುಟ್ಟರೆಂದಱಿವುದೆಂದಡದೇಂ ಪೊಗೞ್ವಪ್ಪನೇಂ ಬಣ್ಣಿ-
.ದಿದಪನೇನನಾಪುರದ ವೀರಬಣಂಜಿಗರುಗ್ರತೇಜಮಂ ||೩೯೧||

---

1. ಶಾ. ಮೂ. ಗು
2. ಶಾ. ಮೂ. ಸ್ಮರರಾಜಧಾನಿಯೊ
3. ಶಾ. ಮೂ. ದ

# ೮೩

**ರೋಣ,**
**ರೋಣ ತಾಲೂಕು,**
ಧಾರವಾಡ ಜಿಲ್ಲೆ

**ಕ್ರಿ. ಶ. ೧೧೮೯**
**ಕಳಚುರ್ಯ ಸಂಕಮ**
(ಎಪಿ. ಇಂ. ೧೯, ಪು. ೨೨೮)

ಸಿಂದ ಮಂಡಳಿಕನು ನಡೆಸಿದ ಧರ್ಮಪ್ರಸಂಗದ ಉಲ್ಲೇಖ ಈ ಶಾಸನದಲ್ಲಿ ಬಂದಿದೆ. ಇಂತಹ ಉದಾಹರಣಗಳು ಇನ್ನೂ ಕೆಲವು ಶಾಸನಗಳಲ್ಲಿ ಸಿಕ್ಕುತ್ತಿವೆ. (ಸಿರಸಂಗಿ ಶಾಸನದಲ್ಲಿ ಹಬ್ಬೆಯ ನಾಯಕನ ಧರ್ಮಪ್ರಸಂಗ, ಸಾತೇನಹಳ್ಳಿ ಶಾಸನದಲ್ಲಿ ಸೆಟ್ಟಿಕವ್ವೆಯ ಧರ್ಮಪ್ರಸಂಗ ಈ ಸಂಚಯದಲ್ಲಿಯೆ ಬಂದಿವೆ. ಶಾ. ಸಂ. ೮೮, ೯೩) ಇದರಿಂದ ಅರಸರು ಅಥವಾ ಹಿರಿಯ ಅಧಿಕಾರಿಗಳು ಆಗಾಗ ಧರ್ಮಪ್ರಸಂಗಗಳನ್ನು ನಡೆಯಿಸುತ್ತಿದ್ದರೆಂದು ವ್ಯಕ್ತವಾಗುವುದು.

## ಸಮುದ್ರ ವರ್ಣನೆ

ಮ. ಸ್ರ॥ ಜಳಹಸ್ತಿವ್ರಾತಹಸ್ತಾಹತಿಯಿನೊಗೆದು ನುಣ್ಮುತ್ತುಗಳ್ ಸೂಸೆ ತೀರ-
ಸ್ಥಳಿಯೊಳ್ ಮೆಯ್ವೆರ್ಚ್ಚಿ ಮೇಗಣ್ಗೊಗೆದು ತೆರಳೆ ನೂಂಕುತ್ತೆ
ಶುಭ್ರಾಭ್ರವುಂ ನಿ-
ರ್ಮ್ಮಳಕಲ್ಲೋಳೌಘದಿಂದಂ ಗಗನತಳಕೆ ತೂಂತಿಟ್ಟವೋಲೀಕ್ಷಿಸಲ್ ಕ-
ಣ್ಗೊಳಿಕುಂ ಭೂಗೋಳಮುಂ ಸುತ್ತಿಱಿದತುಳತರಧ್ವಾನವಂಭೋನಿಧಾನಂ॥

## ಭೂವರ್ಣನೆ

ವ॥ ಅನ್ತು ಸೊಗಯಿಸುವ ಮುಂನೀರೆ ಮೇರೆಯಾಗಿ ನಿಖಿಳದ್ವೀಪಕುಳ-ಕುಧರಕುಹರಕುಂಜರಂಜಿತಮುಂ ವಿಶೇಷದೋಷಾಪಹರಣಪರಿಣತಪ್ರಭಾವ ಸುಕ್ಷೇತ್ರ-ಮುಮೆನಿಸಿ ಸೊಗಯಿಸುವ ಜಂಬೂದ್ವೀಪದ ನಟ್ಟನಡುವೆ,

ಮ. ವಿ॥ ಸುರಕಾಂತಾರತಕೂಜಿತಪ್ರತಿರವಪ್ರೋಜ್ಜೃಂಭಿತಂ ಕಿಂನರೀ-
ವರಗೀತಾರವಮೋಹಿತದ್ವಿಪಕುಳಂ ಸಿದ್ಧಾಂಗನಾಪಾದಪಂ-
ಕರುಹಪ್ರಾಂಚಿತ ಕುಂಕುಮಸ್ಥಗಿತಚಂಚಚ್ಚಂದ್ರಕಾಂತೋಪಳಂ
ಕರಮೊಪ್ಪಿಪ್ಪುದು ರತ್ನಕೂಟರಮಣೀಯಂ ಮೇರುಧಾತ್ರೀಧರಂ ॥೩೯೨॥

### ಗೋಧಾನ್ಯಪ್ರಕೀರ್ಣ ಕುಂತಳದೇಶ

ಮ. ಸ್ರ॥ ಪೊಲನೆಲ್ಲಂ ಗಂಧಶಾಳಿಪ್ರಕರಪರಿವೃತಂ ನಂದನಶ್ರೇಣಿಯೆಲ್ಲಂ
ಫಳಭಾರಾನಮ್ರಚೂತಾವನಿಜವಳಯಿತಂ ದೀರ್ಘಿಕಾನೀಕಮೆಲ್ಲಂ
ದಳಿತಾಂಭೋಜಾತರೇಣುಸ್ಥಗಿತಲಲಿತಮೂರೂಗ್ರ್ಗಳೆಲ್ಲಂ ಪ್ರಜಾಸಂ-
ಕುಳಗೋಧಾನ್ಯಪ್ರಕೀರ್ಣ್ಣಾಂಚಿತಮೆನಲೆಸೆಗುಂ **ಕುಂತಳೋರ್ವ್ವೀ**ವಿಳಾಸಂ॥

## ರುಚಿರವಾದ ಮಧ್ಯದೇಶ

ಆಗಿನ ಆರ್ಥಿಕ ರಾಜಕೀಯ ವ್ಯವಸ್ಥೆಯಲ್ಲಿ ಊರುಗಳಿಗೆ ಅವುಗಳ ಸ್ಥಾನಮಾನ ಜನ ಸಂಖ್ಯಾ ಬಲಗಳ ಮೇರೆಗೆ ಕೊಡಲಾಗಿದ್ದ ಸಂಕೇತಗಳು ಮುಂದಿನ ಪದ್ಯದಲ್ಲಿ ಬಂದಿವೆ.

ವ|| ಆ ಕುಂತಳದೇಶದೊಳು,

ಮ ಸ್ರ.|| ಪಲವುಂ ಗ್ರಾಮಂಗಳಿಂ ಪಟ್ಟಣನಿಕರದಿ ಸಂವಾಹನಬ್ರಾತದಿಂ ಪೇ-
ಷಳಖೇಡವ್ಯೂಹದಿಂ ಖರ್ವ್ವಡನಗರಮಡಂಬೌಘದಿಂ ಕೂಡೆ ಚೆಲ್ವಂ
ತಳೆದ ದ್ರೋಣಾಮುಖಶ್ರೇಣಿಯಿನೆಸೆವ ನದೀಜಾಳದಿಂ ಭೂರಿಭೂಮಂ-
ಡಳದೊಳ್ ಕಂಗೆಡ್ಡಮಾಗಿರ್ಪ್ಪುದು ರುಚಿರತೆಯಿಂ ಮಧ್ಯದೇಶಂ
ವಿಶೇಷಂ ||೩೯||

## ನಿಶ್ಶಂಕ ಲಂಕೇಶ್ವರ ಸಂಕಮದೇವ

ವ|| ಆ ದೇಶಾಧೀಶ್ವರನ ಭುಜಪ್ರತಾಪಮೆಂತೆಂದಡೆ

ಮ.ಸ್ರ.|| ಬಳವದ್ವಿದ್ವಿಷ್ಟ ಭೂಪಾಳಕರನುಱಿಪೆ ಕೀರ್ತ್ತಿಕ್ಕಿ ತದ್ರಾಜ್ಯಚಿಹ್ನಂ-
ಗಳನುದ್ಯದ್ದೇಶಕೋಶಂಗಳನವಯವದಿಂ ಕೊಂಡು ಸಲ್ಲೀಲೆಯಿಂದಂ
ಜಳಧಿವ್ಯಾವೇಷ್ಟಿತೋರ್ವ್ವೀವಳಯವನಿತುಮಂ ತಾಳ್ದಿದಂ ತನ್ನ
ದೋರ್ದ್ದಂ-
ಡಳದೊಳ್ ನಿಶ್ಶಂಕಲಂಕೇಶ್ವರನಮಳಯಶಂ **ಸಂಕಣ**ಕ್ಷೋಣಿಪಾಲಂ ||

## ಸಿಂದ ವಂಶದ ವೀರರು

ಈ ಶಾಸನ ಕಾಲದಲ್ಲಿ ಕಿಸುಕಾಡು ನಾಡನ್ನು ಸಿಂದ ವಿಕ್ರಮಾದಿತ್ಯನು ಆಳುತ್ತಿದ್ದನು. ಅವನ ಗುಣಪ್ರಶಂಸೆಯ ಮೊದಲು ಅವನ ಪೂರ್ವಜರ ಪರಿಚಯವನ್ನು ಸೂಚಿಕೊಡಲಾಗಿದೆ.

ವ|| ವಿಳಸಿತಮೆನಿಪ ಕುಂತಳದೇಶದೊಳು ಬಹುಫಳಧಾನ್ಯ ಧೇನು ಧನ-ಪೂರ್ಣ್ಣವೆನಿಸುವೂರ್ಗ್ಗಳ ನೆಲೆನಾಡು **ಕಿಸುಕಾಡು**

### ಸಿಂದ ಆಚುಗಿ

ಮ ವಿ||ಮಲೆಯಂ ಸಾಧಿಸಿ ಡಾಹಳಾಧಿಪತಿಯಂ ಬೆಂಕೊಂಡು ಮಿಕ್ಕಿರ್ದ್ದ ದೋ-
ರ್ವ್ವಲದಿಂ**ದುಕ್ಸಿನಕಟ್ಟೆಯಂ**[1] ಕವರ್ದು ಸಂಗ್ರಾಮಾಗ್ರದೊಳ್ ಸಂದಮ-
ಯ್ಗಲಿಯಾಗಿರ್ದ್ದ **ಕಡಾರಗಂಗ**ನನಗುರ್ವ್ವರ್ವ್ವೀಳ್ವಿನಂ ಕೊಂದು ಭೂ-
ತಳದೊಳ್ ತಾನೆಸೆದಿರ್ದ್ದನಾಚುಗಿನೃಪಾಳಂ ಸಿಂದವಂಶೋತ್ತಮ ||೩೮||

---

1. ಶಾ. ಮೂ. ದುಪ್ಪಿನಕಡ್ಡೆಯಂ. ಉಪ್ಪಿನಕಟ್ಟೆ ಕಾರವಾರ ಜಿಲ್ಲೆಯಲ್ಲಿದೆ. ಈ ಊರ ಉಲ್ಲೇಖ ಸಾತೇನಹಳ್ಳಿಯ ಶಾಸನದಲ್ಲಿಯೂ ಬಂದಿದೆ.

## ಸಿಂದ ಪೆರ್ಮಾಡಿ

ಘನಬಾಹಾಬಳದಿಂದೆ ಹೊಯ್ಸಳನ ಮತ್ತೇಭಂಗಳಂ ವಸ್ತುವಾ-
ಹನವುಂ ಕೊಂಡತಿಧೀರನಂ ತೊಱಹನಂ ಬೆಂಕೊಂಡು ತೂಳ್ದಿಯ್ದಿ ಮು-
ಟ್ಟಿ ನೆರಂಬಾರದೆ ಕಟ್ಟಿ ತಂದು ಚಲದಿಂ ಚಾಳುಕ್ಯರಾಯಂಗೆ ಕೊ-
ಟ್ಟನನೂನಪ್ರಬಳಪ್ರತಾಪವಿಭವಂ ಪೆರ್ಮ್ಮಾಡಿಭೂಪಾಳಕಂ ||೯೮||

## ಸಿಂದ ಚಾವುಂಡ

ವರಹೋಮಾಗ್ನಿತ ವಾಜಿಮಾಂಸಮುಸಲಂಪಿಂ ಮೆಲ್ವ ಮಾತಂಗಭೀ-
ಕರಕುಂಭಸ್ಥಿತರಕ್ತಪಾನಮನರುತ್ತಾನಂದದಿಂ ಪೀರ್ವ್ವ ನಿ-
ಷ್ಠುರನಿಸ್ತ್ರಿಂಶನಿಜಾಸಿಯೊಳ್ ನೆರೆದು ದೇವೀಸಂಗರಂ ಸಾಧಿಪ-
ದ್ಧುರದೊಳ್ ಚಿತ್ರಮಿದಪ್ತೆ ಶತ್ರುಮಹಿಪರ್ಚಾವುಂಡ ಭೂಪಾಲನಿಂ ||೯೯||

## ನೂತನಬಲಿ ಸಿಂದ ವಿಕ್ರಮಾದಿತ್ಯ

ಈ ಸಿಂದ ವಿಕ್ರಮಾದಿತ್ಯನು ಕಿಸುಕಾಡನ್ನು ಸದ್ಧರ್ಮದಿಂದ ಆಳುತ್ತಿದ್ದನೆಂದು ಇಲ್ಲಿ ಹೇಳಿದೆ.

ಪ್ರಜೆಯಂ ಪಾಲಿಸಿ ಧರ್ಮ್ಮಮಂ ನಿಲಿಸಿ ಶಿಷ್ಟಬ್ರಾತಮಂ ಕಾದರಿ-
ಬ್ರಜಮಂ ಸೋದು ನಿರಂತರಂ ವಿಪುಳಲಕ್ಷ್ಮೀಧಾಮನಾದಂ ಮಹೀ-
ಭುಜಚೂಡಾಮಣಿ ಸಿಂದಸಂಶ್ಯನಜಿತಂ ಶ್ರೀವಿಕ್ರಮಾದಿತ್ಯನಾ-
ಪ್ತಜನೋದ್ಯನ್ನಿಧಿ ಮಂಡಳೇಶತಿಳಕಂ ಚಾವುಂಡದೇವಾತ್ಮಜಂ ||೪೦೦||

ಕಂ|| ಖ್ಯಾತಂ ಬಾಲ್ಯದೊಳಂ ಮಾಂ-
ಧಾತಂ ತಾನೆನಿಸಿ ಮಂಡಳಿಕಮಾಂಧಾತಂ
ಭೂತಳಮಂ ಪಾಲಿಸಿದಂ
**ನೂತನ ಬಲಿಯೆನಿಸಿ ವಿಕ್ರಮಾದಿತ್ಯನೃಪಂ** ||೪೦೧||

## ಧರ್ಮಪ್ರಸಂಗ

ವ|| ಸ್ವಸ್ತಿ. ಸಮಧಿಗತ ಪಂಚಮಹಾಶಬ್ದ ಮಹಾಮಂಡಳೇಶ್ವರಂ ಉದ್ದಂಡಮಂಡಳಿಕರಿಪುಮದನಮಹೇಶ್ವರಂ, ಸಿಂದಗೋವಿಂದನುವುದಾತ್ತರಾಮನುಂ ವೈರಿಮಂಡಳಿಕ ಶಿರೋವಜ್ರದಂಡನುಮೆನಿಸಿದ ವಿಕ್ರಮಾದಿತ್ಯದೇವಂ[1] ನಿಜರಾಜಧಾನಿಯೆನಿಪೆರಂಬರಗೆಯ[2] ನೆಲೆವೀಡಿನೊಳು ಸುಖಸಂಕಥಾವಿನೋದದಿಂ ರಾಜ್ಯಂಗೆಯುತ್ತ-ಮಿರ್ದ್ದು, ಧರ್ಮ್ಮಪ್ರಸಂಗದೊಳು

1. ಶಾ. ಮೂ. ವಿಕ್ರಮಾದಿತ್ಯದೇವಂ ಎಂಬುದಿಲ್ಲ.
2. ಎರಂಬರಿಗೆ ಈಗಿನ ಯಲಬುರ್ಗಿ.

ಧರ್ಮ್ಮ ಏವ ಹತೋ ಹಂತಿ ಧರ್ಮ್ಮೋ ರಕ್ಷತಿ ರಕ್ಷಿತಃ
ತಸ್ಮಾದ್ಧರ್ಮ್ಮೋ ನ ಹಂತವ್ಯಸ್ಸರ್ವೈರೈಶ್ವರ್ಯ್ಯಫಳೇಪ್ಸುಭಿಃ॥1

ಎಂಬ ಸುಭಾಷಿತವಚನಂಗಳಂ ಕೇಳ್ದು, ತಾಂ ಸಾಜದಿಂ ಧರ್ಮ್ಮಬುದ್ಧಿಯಪ್ಪುದ-ಱಿಂದಂ ತಮ್ಮ ಬಪ್ಪಂ ಶ್ರೀಮನ್ಮಹಾಮಂಡಳೇಶ್ವರಂ ಚಾವುಂಡರಸದೇವರ್ಗ್ಗೆ ಪರೋಕ್ಷವಿನಯ ಪ್ರಾಯಶ್ಚಿತ್ತನಿಮಿತ್ತಂ, ಯೆರಂಬರಗೆಯುಲು ಭೂದಾನ ಗೃಹದಾನ ಗೋದಾನ ಸುವರ್ಣ್ಣದಾನಂಗಳಂ ಮಾಡುತ್ತಮಿರ್ದ್ದ ತತ್ಕಾಲದೊಳು,

ಸ್ವಸ್ತಿ. ಯಮನಿಯಮಸ್ವಾಧ್ಯಾಯಧ್ಯಾನಧಾರಣ ಮೋನಾನುಷ್ಠಾನ-ಪರಾಯಣ ಜಪಸಮಾಧಿಶೀಲಸಂಪನ್ನರುಂ, ಔಪಾಸನಾಗ್ನಿಹೋತ್ರದ್ವಿಜಗುರುದೇವ-ಪೂಜಾತತ್ಪರರುಂ, ಮಾರ್ತ್ತಂಡೋಜ್ಜ್ವಳಕೀರ್ತ್ತಿಯುತರುಂ, ತೊಱಿಪಕುಳಾಂತಕ-ರುಮಪ್ಪ ಶ್ರೀಮನ್ಮಹಾಗ್ರಹಾರಂ **ರೋಣದ** ನೂಱನಾಲ್ವರಶೇಷ ಮಹಾಜನಂಗಳ ಸಂನಿಧಾನದಲಲ್ಲಿಯ ಕಲ್ಲಮಠದಾಚಾರ್ಯ್ಯ ಗುರುಭಕ್ತ ದೇವರ್ಗ್ಗೆ***

## ೮೪

## ಶ್ರವಣಬೆಳುಗೊಳ, ಚೆನ್ನರಾಯಪಟ್ಟಣ ತಾಲೂಕು, ಹಾಸನ ಜಿಲ್ಲೆ

## ಕ್ರಿ. ಶ. ೧೧೮೧ ಹೊಯ್ಸಳ ವೀರಬಲ್ಲಾಳ

(ಎಪಿ. ಕ. ೨, ಪು. ೧೩೫)

### ವೀರಬಲ್ಲಾಳನ ಸಮರವಿಜಯ

ಇವನ ಭೇರೀನಾದವನ್ನು ಕೇಳಿ ಲಾಳ, ಗೂರ್ಜರ, ಗೌಳ, ಪಲ್ಲವ ಮತ್ತು ಚೋಳ ರಾಜರು ಹೇಗೆ ಕೈಕಾಲುಗೆಟ್ಟರೆಂಬ ವರ್ಣನೆಯೂ ಚಿರಕಾಲ ಹಗೆಗಳಿಗೆ ಅಸಾಧ್ಯವಾಗಿದ್ದ ಉಚ್ಚಂಗಿದುರ್ಗವನ್ನು ಇವನು ಗೆದ್ದು ಪಾಂಡ್ಯರಾಜರನ್ನು ಸೆರೆಹಿಡಿದ ಸಂಗತಿಯೂ ವೀರಬಲ್ಲಾಳನ ಪ್ರತಾಪವನ್ನು ಚೆನ್ನಾಗಿ ಬಿಂಬಿಸುವಂತಿವೆ.

ಮ.ಸ್ರ॥ ಗತಲೀಳಂ ಲಾಳನಾಳಂಬಿತಬಹಳಭಯೋಗ್ರಜ್ವರಂ ಗೂರ್ಜ್ಜರಂ ಸ-
ನ್ಧೃತಶೂಳಂ ಗೌಳನುಚ್ಚೈಃಕರಧೃತವಿಳಸತ್ಪಲ್ಲವಂ ಪಲ್ಲವಂ ಪ್ರೋ-
ಜ್ಝಿತಚೇಳಂ ಚೋಳನಾದಂ ಕದನವದನದೊಳ್ ಭೇರಿಯಂ ಪೊಯ್ಸೆ ವೀರಾ-
ಹಿತಭೂಭೃಜ್ಜಾಳಕಾಳಾನಳನತುಳಬಳಂ ವೀರಬಲ್ಲಾಳದೇವಂ ॥೪೦೨॥
ಭರದಿಂದಂ ತನ್ನ ದೋರ್ಗ್ಗರ್ಬ್ಬದಿನೊಡೆಯುರಸಂ ಕಾಯ್ದು ಕಾದಲ್ಕಣಂ ಪೂ-
ಣ್ದಿರೆ ಬಲ್ಲಾಳಕ್ಷಿತೀಶಂ ನಡದು ಬಳಸಿಯುಂ ಮುತ್ತೆ ಸೇನಾಗಜೇನ್ದ್ರೋ-

---

1 ತಾತ್ಪರ್ಯ : ನಾವು ಧರ್ಮವನ್ನು ಭಂಗಿಸಿದರೆ ಅದು ನಮ್ಮನ್ನು ಭಂಗಿಸುತ್ತದೆ, ಕಾಯ್ದರೆ ಕಾಯುತ್ತದೆ; ಆದುದರಿಂದ ಸಕಲೈಶ್ವರ್ಯವನ್ನು ಬಯಸುವವನು ಧರ್ಮವನ್ನು ಭಂಗಿಸಲಾಗದು.

ತ್ಕರದನ್ತಾಘಾತಸಂಚೂರ್ಣ್ಣಿತಶಿಖರದೊಳುಚ್ಚಂಗಿಯೊಳ್ಸಿಲ್ಕಿದಂ ಭಾ-
ಸುರಕಾನ್ತಾದೇಶಕೋಶವ್ರಜಜನಕಹಯೌಘಾನ್ವಿತಂ ಪಾಣ್ಡ್ಯಭೂಪಂ||

ಮ.ವಿ.|| ಚಿರಕಾಲಂ ರಿಪುಗಳ್ಗಸಾಧ್ಯಮೆನಿಸಿದ್ದುರ್ಗ್ಗಚ್ಚಂಗಿಯುಂ ಮುತ್ತಿ ದು-
ರ್ದ್ಧರತೇಜೋನಿಧಿ **ಧೂಳಿಗೋಟೆ**ಯುನೆ ಕೊಣ್ಡಾ ಕಾಮದೇವಾವನೀ-
ಶ್ವರನಂ ಸನ್ನೊಡೆಯಕ್ಷಿತೀಶ್ವರನನಾ ಭಣ್ಡಾರಮಂ ಸ್ತ್ರೀಯುರಂ
ತುರಗವ್ರಾತಮುಮಂ ಸಮನ್ತು ಪಿಡಿದಂ ಬಲ್ಲಾಳಭೂಪಾಳಕಂ ||೪೦೪||

೮೫

## ಮನ್ನೇರ ಮುಸಲವಾಡ, ಹರಪನಹಳ್ಳಿ ತಾಲೂಕು, ಬಳ್ಳಾರಿ ಜಿಲ್ಲೆ

## ಕ್ರಿ. ವ. ೧೧೮೩ ಚಾಳುಕ್ಯ ಜಗದೇಕಮಲ್ಲ

(ಸೌ. ಇಂ. ಇ. ೯, ಭಾ. ೧, ಪು. ೨೯೬)

ಮಹಾಮಂಡಳೇಶ್ವರನಾದ ವಿಜಯಪಾಂಡ್ಯನ ಮನ್ನೆಯನಾಗಿ ವಿಕ್ರಭೂಭುಜನು ಮೊಸಳೆವಾಡ–೧೨ನ್ನು ಆಳುತ್ತಿದ್ದನು. ಆ ಊರ ಹೆಸರು ಈಗ ಮುಸಲವಾಡ ಎಂದಾಗಿದೆಯಾದರೂ ಹಿಂದೆ ಅದು ೧೨ ಗ್ರಾಮಗಳಿಗೆ ಹಿರಿಯದಾಗಿದ್ದುದರ ಕುರುಹಾಗಿ ಮನ್ನೆಯರ ಎಂಬ ಉಪಾಧಿಯನ್ನು ಇನ್ನೂ ಉಳಿಸಿಕೊಂಡಿದೆ. ಈ ಪದ್ಯದ ಒಂದು ಪಾದ ಮುಕ್ಕಾಗಿದ್ದರೂ ಆ ಕಾಲದ ವೀರರು ಕಾಲಲ್ಲಿ ಬಿರುದಿನ ತೊಡಿಗೆ ತೊಡುತ್ತಿದ್ದುದನ್ನೂ ಯುದ್ಧದ ರೀತಿಯನ್ನೂ ನೀತಿಯನ್ನೂ ತಿಳಿಸುತ್ತಿದೆ.

ಚಂ|| ಬಿರುದಿನ ಅಂಕಮಾಲೆ ತೊಡರಿಕ್ಕಿದ ಕಾಲಲು ಗಂಡಪೆಂಡರಂ
ಕರಗಸಗಾಳನಿಚ್ಚಣಿಗೆ ದಬ್ಬುಕವೆಂಬಿವನಿಕ್ಕಿ ಕಾದಿ ನಿ-
ತ್ತರಿಸದೆಯೋಡಿಪೋದ.... ....[1] ಬೆ-
ಳ್ಗೆರಳೆಯು ಬೇಂಟೆಯುಲ್ ಕೊಲಲುವೊಲ್ಲದೆ ಕಾವನು ವಿಕ್ರ[2]ಭೂಭುಜ ||

1. ಮೂಲಶಾಸನದಲ್ಲಿ ೧೨ ಅಕ್ಷರಗಳು ಬಿಟ್ಟುಹೋಗಿವೆ.
2 ವಿಕ್ರಮ ಎಂಬುದಕ್ಕೇ ವಿಕ್ರ ಎಂದು ಕವಿ ಬಳಸಿದ್ದಾನೆ.

## ೮೬

**ಸಿರಸಂಗಿ,** **ಕ್ರಿ. ವ. ೧೧೮೬**

**ಸವದತ್ತಿ ತಾಲೂಕು,** **ತ್ರಿಭುವನಮಲ್ಲ ವೀರಸೋಮೇಶ್ವರ**

ಬೆಳಗಾವಿ ಜಿಲ್ಲೆ (ಕ. ಇ. ೧, ಪು. ೩೮)

**ಕುನ್ತಳ ದೇಶ**

ಕಂ || ಅದು ಕುಂತಳದೇಶವೆನಿ-
ಪ್ಪುದಱಿಂದಂ ಮಧ್ಯದೇಶಕಂ **ಕಾಂಚೀದೇ-**
**ಶದ** ಚೆಲ್ವಿಂಗಂ ಮೇಲೆನಿ-
ಪುದು ಮೇಲಂ ಮೇಲೆನಿಪ್ಪುದೇಂ ಗಳಪಂಗೇ ||೪೦೬||

## ೮೭

**ಸಿರಸಂಗಿ,** **ಕ್ರಿ. ವ. ೧೧೮೬**

**ಸವದತ್ತಿ ತಾಲೂಕು,** **ಚಾಳುಕ್ಯ ೪ನೆಯ ಸೋಮೇಶ್ವರ**

ಬೆಳಗಾವಿ ಜಿಲ್ಲೆ (ಕ. ಇ. ೧, ಪು. ೪೦)

**ಹಬ್ಬೆಯನಾಯಕನ ಶ್ರೇಯಃಪ್ರಾರ್ಥನೆ**

**ಪ್ರಸನ್ನ ಹಬ್ಬೇಶ್ವರನಲ್ಲಿ**

ಉ. ಮಾ|| ಶಾಶ್ವತಮೂರ್ತ್ತಿ ಶೌರ್ಯ್ಯನಿಧಿ ಹಬ್ಬೆಯನಾಯಕನಂ ಪ್ರಸನ್ನಹ-
ಬ್ಬೇಶ್ವರದೇವನೊಲ್ದು ಪರಿಪಾಲಿಸುತಿರ್ಕ್ಕೆ ನರೋರಗಾಮರಾ-
ಧೀಶ್ವರಮೌಳಿಲಾಳಿತಪದಾಂಬುಜನಂಬುಜನಾಭವಾಗ್ವಧೂ-
ಟೀಶ್ವರವಂದ್ಯಮಾನಚರಿತಂ ತ್ರಿಜಗದ್ಭರಿತಂ ಸುಖಾತ್ಮಕಂ ||೪೦೭||

**ಪ್ರಸನ್ನ ಭೈರವನಲ್ಲಿ**

ಚಂ|| ದಿವಿಜಗಣೇಂದ್ರರಾತ್ಮಕುಲದೆಯ್ವವೆನುತ್ತೆ ಬಿಗಲ್ ಪ್ರಚಣ್ಡಮಾ-
ನವನಿವಹೇಂದ್ರರಾಗಳುವಲಂದಿನೊಳೊಲ್ದೆ ಬಿಗಲ್ ಫಣೀಂದ್ರರು-
ತ್ಸವದೆಱಗಲ್ ಜಗತ್ತ್ರಿತಯವಂದಿತನಾದಧಿಕಂ ಪ್ರಸನ್ನಭೈ-
ರವನನುರಾಗದಿಂ ಕುಡುಗೆ **ಹಬ್ಬೆಯನಾಯಕ**ನೀಪ್ಸಿತಾರ್ತ್ಥಮಂ ||೪೦೮||

ಕಂ || ಬಲದಿಂ ಹಬ್ಬೇಶ್ವರನನು-
ಬಲದಿಂ ಶ್ರೀಮತ್‌ಪ್ರಸನ್ನ ಭೈರವನ ಮಹಾ-

ಬಲದಿಂ ಹಬ್ಬೆಯನಾಯಕ-
ನೆ ಲೋಕದೊಳ್ ಸಕಳಬಲಸಮನ್ವಿತನಾದಂ ॥೪೯॥

**'ಕುಂತಳ'ದಲ್ಲಿ ಒಪ್ಪುವ ಚಿನ್ನಹೂ ಬೆಳುವಲ**

ಚಂ॥ ಸುರುಚಿರಕುಂತಳಸ್ಥಳದೊಳುದ್ಘಸುವರ್ಣವಿನೂತ್ನರತ್ನಭಾ-
ಸುರವೆನೆ **ಚಿನ್ನಹೂ**ವೆನಿಸುವೂರೆಸೆಯುತ್ತಿರೆ **ಬೆಳ್ವಲಂ**[1] ಮನೋ-
ಹರವೆನಿಸಿಪ್ಪರ್‌ದಂತದಱೊಳಗ್ಗದ ಕಂಪಣವಾದ ಪೆಂಪದೊ-
ಪ್ಪಿರೆ **ಕೊಳನೂರ್ಕ್ಕ**ರಂ ಸೊಗಯಿಕುಂ ಮೊದಲಾವಿಷಯಕ್ಕದೆಂಬಿನಂ ॥

## ೮೮

**ಸಿರಸಂಗಿ,**
**ಸವದತ್ತಿ ತಾಲೂಕು,**
ಬೆಳಗಾವಿ ಜಿಲ್ಲೆ

**ಕ್ರಿ. ವ. ೧೧೮೬**
**ತ್ರಿಭುವನಮಲ್ಲ ವೀರಸೋಮೇಶ್ವರ**
(ಕ. ಇ. ೧, ಪು. ೪೦)

ಒಟ್ಟು ನೂರು ಸಾಲುಗಳುಳ್ಳ ಈ ದೊಡ್ಡ ಶಾಸನ ಚಿಕ್ಕ ಚಂಪೂಕಾವ್ಯದಂತಿದೆ. ಶಾಸನ ಕವಿ ತಾನು 'ಭಾಸುರಮತಿ ಸಜ್ಜನತಿಳಕ' ಎಂದೂ 'ಶಾಸನವನ್ನು ಉಸಿರುವ ನೆವದಿಂದ ಲೇಸೆನಿಸಿದ ರಿಶ್ಯಶೃಂಗದ (ಎಂದರೆ ಸಿರಸಂಗಿಯ) ಮಹಿಮೋನ್ನತಿಯನ್ನು ಹೊಸಗನ್ನಡದಿಂದ ಬಣ್ಣಿಸಿದೆನೆ'ಂದೂ ಕೊನೆಯ ಪದ್ಯದಲ್ಲಿ ಅಭಿಮಾನದಿಂದ ನುಡಿದಿದ್ದಾನೆ.

**ಸಾಕ್ಷರಿಕನಿಧಾನ ಹಬ್ಬೆಯ ನಾಯಕ**

ಇಲ್ಲಿಯ ಗದ್ಯಪದ್ಯಗಳಲ್ಲಿ ಸಿರಸಂಗಿಯ ಪ್ರಭು ಹಬ್ಬೆಯ ನಾಯಕನ ವೀರವ್ಯಕ್ತಿತ್ವ, ಆತನ ಧರ್ಮಪ್ರಸಂಗ, ಆತನ ಧರ್ಮ-ದತ್ತಿಗಳು ಚೆನ್ನಾಗಿ ವರ್ಣಿತವಾಗಿವೆ. ನಮ್ಮ ನಾಡಿನಲ್ಲಿ ಎಲ್ಲೆಲ್ಲಿಯೂ ಕಂಡುಬರುವ ಗುಡಿಗುಂಡಾರಗಳ ನಿರ್ಮಿತಿಗೆ ಹಿನ್ನೆಲೆಯಾಗಿರುವ ಸಾಂಸ್ಕೃತಿಕ ಕಲ್ಪನೆಯು ಯಾವುದೆಂಬುದು ಹಬ್ಬೆಯ ನಾಯಕನ ಧರ್ಮಪ್ರಸಂಗದಲ್ಲಿ ವ್ಯಕ್ತಪಟ್ಟಿದೆ. ನಾಯಕನ ಚರಿತ್ರಾರಂಭದ ಮೊದಲ ಪದ್ಯ ಮನೋಜ್ಞವಾಗಿದೆ.

ಕಂ॥ ಪಡೆವಡೆ ಗುಣಿ ಹಬ್ಬಯ್ಯನ
ಪಡಿಯೆನಿಸುವ ಸುತನನೊಸೆದು ಬಲ್ಲವ್ವೆ[2]ಯವೋಲ್
ಪಡೆವುದು ಕೋ[ಟಿ]ಗೆವಕ್ಕಳು[3]-
ವಡೆಯದೊಡೇಂ ಬಂಜೆಯಂ ನೃಪರ್ದ್ದಂಡಿಪರೇ ॥೫೧॥

* * * *

1. ಶಾ. ಮೂ. ಬೆಳುವಲಂ
2. ಹಬ್ಬೆಯ ನಾಯಕನ ತಾಯ ಹೆಸರು.
3. ಹತ್ತರ ಕೂಡ ಹನ್ನೊಂದೆಂಬಂತೆ ಕೋಟಿಗೆ ಮತ್ತೊಂದು ಭರತಿ.

ಚಂ|| ಬಿರುದರ ದರ್ಪ್ಪವಮಂ ಕಿಡಿಪ ಬೀರದ ಬಲ್ಕಣಿಯಿಂ ಧನಾರ್ತದಿಂ[1]-
[ದೆರೆ]ದರ[2] ಭೀಷ್ಟವುಮಂ ಕುಡುವಗುರ್ಬ್ಬಿನ ಚಾಗಿಯುನಳ್ಕಿ ಭೀತಿಯಿಂ
ಶರಣೆನೆ ಕಾವ ದೇವನನಿಳಾವಳಿಯುಂ ಪೊಗಳ್ದಪ್ಪುದೊಲ್ದು ಸಾ-
ಕ್ಷರಿಕನಿಧಾನನಂ ನೆಗಳ್ದ **ಹಬ್ಬೆಯನಾಯಕ**ನಂ ಗುಣಾತ್ಮನಂ ||೪೧೨||

ವ|| ಇನ್ತೆನಿಸಿ, ***

ಮಟ್ಟವೀರದೇ[3] ಸಿಟ್ಟಂ ನುಡಿವ ದುಟ್ಟ ನಾಯಕರ ನಿಟ್ಟೆಲ್ವಂ ಮುಱಿ-ದೊಟ್ಟೆಜೆಯಿಂದಟ್ಟಿಯಾಡಿಸುವ, ಬಿರುದನಾಯಕರ ಶಿರದ ಸಿರ್ಪ್ಪಂ ಬಿದಿರ್ಚ್ಚುವ-ಚಪಳನಾಯಕ ಹೃದಯಸೆಲ್ಲ ಭೀತನಾಯಕರ ಕೊಲ್ಲ, ಸತ್ಯರಾಧೇಯ ಸಾಹಸವೈನ-ತೇಯ, ಸಕಳದಿವಿಜದನುಜಭುಜಗಕಿಂನರೋರಗಸಿದ್ಧವಿದ್ಯಾಧರೇಂದ್ರಾನತ ಮಣಿ-ಮಕುಟ ಮಾಣಿಕ್ಯ ಸಂಘಟ್ಟಿತವಾದಪೀಠಾಳಂಕೃತ ಶ್ರೀಮನ್ನೀಲಲೋಹಿತ ರುದ್ರಾವ-ತಾರಶ್ರೀವೀರಭೈರ[ವ*]ದೇವದಿವ್ಯಶ್ರೀಪಾದಪದ್ಮಾರಾಧಕಂ, ಪರಮ[ಂ*]ಡಳಸೂಱೆ[3]-ಕಾರನುಮಪ್ಪ[4] ಶ್ರೀಮತು **ಹಬ್ಬೆಯ** ನಾಯಕಂ ನಿಜಭುಜಬಳೋಪಾರ್ಜ್ಜಿತಸಂಪ-ತ್ತಿಯಿಂ ಸುಖದಿನನುಭವಿಸುತ್ತಿರ್ದ್ದೊಂದು ದೆವಸಂ, ತಾನಸಹಾಯಶೂರನಪ್ಪು-ದಱಿಂ ಪುರಾತನರಪ್ಪಸಹಾಯಶೂರರ ಕಥಾಪ್ರವಂಚಗಳುಮ[5] ನವರಂ ಕುಱಿತ್ತು ಪೇಳ್ದ ಸುಭಾಷಿತಂಗಳುಮಂ[6] ಕೇಳುತ್ತಿರ್ದ್ದನದೆಂತೆಂದೊಡೆ,

ಶ್ಲೋಕ|| ನ ಶ್ರೀ ಕುಲಕ್ರಮಂ ಯಾತಿ ಶಾಸನೇ ಲಿಖಿತಾಪಿ ವಾ
ಖಡ್ಗಮಾಶ್ರಯತೇ ಲಕ್ಷ್ಮೀ ವೀರಭೋಜ್ಯಾ ವಸುಂಧರಾ ||೪೧೩||
ಅಸಮರ್ತ್ಥಂ ಪರಿತ್ಯಜ್ಯ ಸಮರ್ತ್ಥಂ ಪ್ರತಿಯಾತಿ ಸಾ
ಪೃಥಿಬ್ಯಾ ನಾಸ್ತಿ ಮರ್ಯ್ಯಾದಾ ವೀರಭೋಜ್ಯಾ ವಸುಂಧರಾ[4] ||೪೦೪||

ಇವು ಮೊದಲಾಗೆ ನಿಜಪ್ರತಾಪಾನುಸಾರಿಗಳಪ್ಪ ಪಲವು ಸುಭಾಷಿತಂಗಳಂ ಬಲ್ಲವ-ರ್ಕ್ಕೇಳಿಸೆ, ತಾಂ ಬಲ್ಲರ್ಗ್ಗೆ ಬಲ್ಲನಾಗಿಯುವೆಲ್ಲವಱಭಿಪ್ರಾಯದ ನಂಬುಗೆ ಮನಂಬುಗ-ಲೆಲ್ಲಾ[7] ಸಂವತ್ಸುಗಳ್ಗಂ ಪುಣ್ಯಮೆ ಮೊದಲಾ ಪುಣ್ಯಕ್ಕೆಲ್ಲವೀಶ್ವರಪ್ರತಿಷ್ಠೆಯೆ ಮೊತ್ತಮೊದಲೆಂತೆನಲಾ ಪುಣ್ಯದ ಬಳಿವಿಡಿದೆಲ್ಲಾ ಪುಣ್ಯಂಗಳುಂ ದೊರೆಕೊಳ್ಗುಂ.

---

1. ಶಾ. ಮೂ. : ದನಾರ್ತ್ತದಿಂ 2. ಶಾ. ಮೂ. : [ವರ]ದರ

3. ಶ್ರೀ ಕೆ. ಜಿ. ಕುಂದಣಗಾರರ ಪಾಠ : ಮಟ್ಟನಿರದೆ (ಇನ್ಸ್. ನೊ. ಕ. ಮತ್ತು ಕೊ.)

4. ಶಾ. ಮೂ. ಕಾರನ್ಮಪ್ಪ 5 ಪ್ರಪಂಚಗಳ್ಮ 6 ಸುಭಾಷಿತಂಗಳ್ಮಂ

7 ತಾತ್ಪರ್ಯ : ಲಕ್ಷ್ಮಿ, ವಂಶಪರಂಪರೆಯಾಗಿ ಅಥವಾ ಶಾಸನ ಬರೆದಿಟ್ಟದೆಯೆಂದು ಬರುವವಳಲ್ಲ; ಆಕೆ ಖಡ್ಗವನ್ನು ಆಶ್ರಯಿಸಿರುತ್ತಾಳೆ. ಪೃಥ್ವಿ ಹೇಡಿಯನ್ನು ತೊರೆದು ಕಲಿಯನ್ನು ವರಿಸುತ್ತಾಳೆ; ಆಕೆಗೆ ಮರ್ಯಾದೆಯಿಲ್ಲ; ವೀರಬೋಜ್ಯಳಾಕೆ.

8. ಶಾ. ಮೂ. : ಬುಗಳೆಲ್ಲಾ

ಮತ್ತವೆಲ್ಲಾ ಪ್ರತಿಮೆಗಳಂ ಪ್ರತಿಷ್ಠೆಮಾಡಿದೊಡವಾ ದೇವರ್ಕ್ಕಳ ಹೆಸರೆಯುಕ್ಕ್ವೀಶ್ವರಪ್ರತಿಷ್ಠೆಯುಂ ಮಾಡಿದವನೀಶ್ವರನೆಯುಕ್ಕ್ವೆಂಬುದನಾ ದೇವರ ಪೆಸರಾತನ ಪೆಸರಕ್ಕುವೆಂದಱಿದುಕೊಳ್ವುದಾ ದೇವಾಯತನಮುಂ ದಾರುಕರ್ಮ್ಮ ವಿಷ್ಟಿಕಾಕರ್ಮ್ಮಶಿಳಾಕರ್ಮ್ಮಂಗಳೆಂದೊಂದಕ್ಕೆ[1] ಸಹಸ್ರಾಧಿಕ ಗುಣಫಳದಾಯಿಗಳೆಂದುಶಿಳಾಕರ್ಮ್ಮದಿಂ ದೇವಾಯತನಮುಂ ನಿರ್ಮ್ಮಿಸುವುಪಕ್ರಮಮನೆತ್ತಿಕೊಂಡು, ನಿಜ ಸಂಪತ್ತಿವೃತ್ತಿಯೆನಿಸಿ[2]

## ಹಬ್ಬೇಶ್ವರ-ಪ್ರಸನ್ನ ಭೈರವ ದೇವಾಲಯುಗಳು

ಕಂ || ಸ್ಥಿರವೆನಿಪ ರಿಶ್ಯಶೃಂಗೀ-
ಪುರದೊಳು ಹಬ್ಬೇಶ್ವರಪ್ರತಿಷ್ಠೆಯುನಾ ಮಂ-
ದಿರಮುಂ ಕಲ್ವೆಸನೊಪ್ಪ-
ತ್ತಿರೆ ಹಬ್ಬೆಯುನಾಯುಕಂ ವಿನಿರ್ಮ್ಮಿಸಿದನದಂ ||೪೧೫||

ಶ್ರೀಮತು ಪ್ರಸನ್ನಭೈರವ-
ಧಾಮಮುನಾ ಭೈರವಪ್ರತಿಷ್ಠೆಯುುಮಂ ಪ್ರೋ-
ದ್ದಾಮಂ[2] ಹಬ್ಬೆಯುನಾಯುಕ-
ನೀಮಹಿ ಪೊಗಳುತ್ತಿರಲು ವಿನಿರ್ಮಿಸಿ ನೆಗಳ್ದಂ ||೪೧೬.||

## ಹಬ್ಬೆಯು ನಾಯುಕನು ಇತ್ತ ವೃತ್ತಿ

ಊರ ಆರು ಜನ ಗಾವುಂಡರು, ಆಚಾರ್ಯರು, ಎಂಟು ಹಿಟ್ಟಿಗಳು, ಗ್ರಾಮದ ಪ್ರಭೂತರ್ಕ್ಕಳು ಎಲ್ಲರೂ ನೆರೆದು ಒಡಂಬಡಲಾಗಿ ಹಬ್ಬೆಯನಾಯಕನು ವೃತ್ತಿಯನ್ನು ಕೊಟ್ಟನಂತೆ.

ಮ. ವಿ|| ದೊರೆವೆತ್ತಗ್ಗದ ರಿಶ್ಯಶೃಂಗಿಯುಱುವಗ್ಗಾವುಂಡರುಂ ದೇವತೋ-
ತ್ಕರದಾಚಾರ್ಯ್ಯರುವೆಂಟುಹಿಟ್ಟಿಗಳುವಾ ಗ್ರಾಮಪ್ರಭೂತರ್ಕ್ಕಳುಂ
ನೆರೆದೆಲ್ಲಂ ಬಗೆಗೊಂಡೊಡಂಬಡುತಿರಲ್ ಹಬ್ಬೇಶ್ವರಾವಾಸಕಾ-
ದರದಿಂ ಹಬ್ಬೆಯುನಾಯುಕಂ ಸುಮುನದೊಳ್ ತಾನಿತ್ತನೀ ವೃತ್ತಿಯಂ ||

## ಶಾಸನಕವಿ

ಕಂ || ಶಾಸನಮನುಸಿರ್ದ ನೆವದಿಂ
ಲೇಸೆನಿಸಿದ ರಿಶ್ಯಶೃಂಗಮುಹಿಮೋನ್ನತಿಯಂ
ಭಾಸುರಮತಿ ಬಣ್ಣಿಸಿದಂ
ಶ್ರೀ**ಸಜ್ಜನತಿಳಕ**ನೊಸೆದು ಪೊಸಗನ್ನಡದಿಂ ||೪೧೮||

---

1. ಳೊಂದೊಂದಕ್ಕೆ ಎಂದಿರಬೇಕೋ ? : ಒಂದಕ್ಕಿಂತ ಒಂದಕ್ಕೆ ಸಾವಿರ ಪಟ್ಟು ಫಲ.
2. ಶ್ರೀ. ಕೆ. ಜಿ. ಕುಂದಣಗಾರರ ಪಾಠ : ವೃತ್ತಿಯನೀಸಿ (ಇನ್ಸ್. ನೊ. ಕ. ಮತ್ತು ಕೊ.)

## ೮೯

**ಅರಸಿಕೆರೆ,** **ಕ್ರಿ. ವ. ೧೧೮೮**

**ಅರಸಿಕೆರೆ ತಾಲೂಕು,** **ಹೊಯ್ಸಳ ವೀರಬಲ್ಲಾಳ**

ಹಾಸನ ಜಿಲ್ಲೆ (ಎಪಿ. ಕ. ೧೫, ಪು. ೨೪)

**ಗಿಳಿವಿಂಡಿನ ಕಳಕಳ**

ಮುನಿದ ನಲ್ಲ–ನಲ್ಲೆಯರನ್ನು ಗಿಳಿಗಳು ರಮಿಸುತ್ತಿದ್ದುವಂತೆ.

ಮುಳಿದಾಗಡೆ ಕೂರ್ಪ್ಪವರೊ-
ಳ್ತಿಳಿವುದು ತಿಳಿವುದು ಗಡೆನ್ದು ಸಾರುವ ತೆಱದಿಂ
ಗಳಪುವ ಗಿಳಿವಿಣ್ಡಿನ ಕಳ-
**ಕಳವರಸಿಯಕೆಱೆ**ಯ ಬನದೊಳೊಪ್ಪುತ್ತಿರ್ಕ್ಕುಂ ॥೪೧೯॥

## ೯೦

**ಮುತ್ತಿಗೆ,** **ಕ್ರಿ. ವ. ೧೧೮೯**

**ಬಾಗೇವಾಡಿ ತಾಲೂಕು,** **ಯಾದವ ಭಿಲ್ಲಮ**

ವಿಜಾಪುರ ಜಿಲ್ಲೆ (ಎಪಿ. ಇಂ. ೧೫, ಪು. ೨೭)

ಜಂಬೂದ್ವೀಪ, ಹೇಮಾಚಲ, ಭರತಕ್ಷೇತ್ರ ಇವುಗಳ ಭೌಗೋಲಿಕ ವಿವರಣೆಯನ್ನು ಮಾತ್ರ ಕೊಡದೆ, ಅಲ್ಲಿಯ ಜನ, ಸಂಪತ್ಸಮೃದ್ಧಿ, ನಿಸರ್ಗಸೌಂದರ್ಯ, ವಿನೋದ ವಿಹಾರಗಳನ್ನು ಸೊಗಸಾಗಿ ಹೇಳಿರುವುದು ಇಲ್ಲಿಯ ಒಂದು ವಿಶೇಷವೆನ್ನಬಹುದು.

**ಸಮುದ್ರ ವರ್ಣನೆ**

ಮ. ಸ್ರ॥ ಎನಸುಂ ಕಣ್ಗೆಯ್ದೆ ಚೆಲ್ವಂ ಪಡೆವುದು ವಿಚಳತ್ಕೂರ್ಮಪಾಠೀನಸಂಘ-
ಟ್ಟನಪಾಥೋದಂತಿದಂತಾಹತಮಕರಕರಕ್ಷೋಭಸಂಜಾತಕಲ್ಲೋ-
ಳನಿಕಾಯಕ್ಷಿಪ್ತ ಮುಕ್ತಾನಿಕರಮುರುತರೋಡ್ಡೀನಫೇನಬ್ರಜಾಸ್ಫಾ-
ಳನರೌದ್ರಸ್ಫಾರಧೀರಾರವವಿಜಿತಘನಧ್ವಾನವಂಭೋನಿಧಾನಂ ॥೪೨೦॥

**ಜಂಬೂದ್ವೀಪ**

ಕಂ || ಆ ಜಳಧಿಪರಿವೃತಂ ರಾ-
ರಾಜಿತವರವಸ್ತುವಿಸ್ತೃತಂ ಸಕಳಕಳಾ-
ಭ್ರಾಜಿತವಿಶ್ರುತವಿಬುಧಸ-
ಮಾಜಂ ಸೊಗಯಿಪುದು ನೆಗಳ್ದ ಜಂಬೂದ್ವೀಪಂ ॥೪೨೧॥

**ಹೇಮಾಚಲ**

ವ|| ಆ ಜಂಬೂದ್ವೀಪದ ಮಧ್ಯಪ್ರದೇಶದೊಳ್,

ಮ. ಸ್ರ|| ಗಗನಪ್ರೋಚ್ಚುಂಬಿ ನಾನಾಮಣಿಗಣವಿಳಸತ್ಕೂಟಕೋಟಿಪ್ರಭಾಭಾ-
ಸಿ ಗಳನ್ಮಂದಾರಪುಷ್ಪಪ್ರಕರಸುರಭಿಗಂಧಿಸ್ಥಳೀಸಂಚರದ್ದೇ-
ವಗಣಂ ಕಣ್ಗೆಯ್ವ ಚೆಲ್ವಂ ಪಡೆವುದು ವರವಿದ್ಯಾಧರೀಚಾರುವೀಣಾ-
ಪ್ರಗತಪ್ರಸ್ತುತ್ಯಮಂದ್ರಧ್ವನಿಲಲಿತದರೀರುಂದ್ರ **ಹೇಮಾಚಳೇಂದ್ರಂ** ||

**ಭರತಕ್ಷೇತ್ರ**

ಕಂ || ಆ ಗಿರಿವರದಕ್ಷಿಣ[1] ದಿ-
ಗ್ಭಾಗದೊಳೆಸೆದಿರ್ಪ್ಪುದತುಳ ಭರತಕ್ಷೇತ್ರಂ
ಶ್ರೀಗೆ ನೆಲೆಯೆನಿಸಿ ಸಕಳಕ-
ಳಾಗಮಕೋವಿದವಿಶಿಷ್ಟಬುಧಜನಲಲಿತಂ ||೪೨೩||

**ಶಂಕರಸ್ವಾಮಿಯ ನಾಲಗೆ ಸಾರಸ್ವತಪೀಠ**

ಶಂಕರಸ್ವಾಮಿಯು ವಿಷ್ಣೂಪಾಸಕನಾದ ಉಪಶಾಂತ ಬುಧೋತ್ತಮನ ಮಗ.

ಮ. ವಿ|| ಬಗೆ ಸಾಹಿತ್ಯರಸಪ್ರಪೂರ್ಣ್ಣವಿಪುಳಶ್ರೌತಂ ಶ್ರುತಂ ವಾಗ್ವಧೂ-
ಟಿಗೆ ಕೈಗನ್ನಡಿ ಸೂಕ್ತಿ ಸೂನೃತಸುಧಾವಾರಾಶಿಮುಕ್ತಾಳಿ ನಾ-
ಲಗೆ ಸಾರಸ್ವತಪೀಠವಾರ್ಪು ವರವಿಪ್ರಬ್ರಾತವಿದ್ವಜ್ಜನಾ-
ಳಿಗೆ ಕಲ್ಪದ್ರುಮಮೆಂದು ಧಾತ್ರಿ ಪೊಗಳ್ಗುಂ **ಶ್ರೀಶಂಕರಸ್ವಾಮಿ**ಯುಂ ||

## ೯೧

**ಹೊಳಲು,** **ಕ್ರಿ. ಶ. ೧೧೭೭**

**ಹಡಗಲಿ ತಾಲೂಕು,** **ಹೊಯ್ಸಳ ವೀರಬಲ್ಲಾಳ**

ಬಳ್ಳಾರಿ ಜಿಲ್ಲೆ (ಸೌ. ಇಂ. ಇನ್ಸ್. ೯, ಭಾಗ ೧, ಪು. ೩೪೩)

ಬಸವೆಯ ನಾಯಕನೆಂಬ ವೀರನು ಚೋರದಳದೊಡನೆ ಕಾದಿ ಅವರನ್ನು ಕೊಂದು ತಾನೂ ಸ್ವರ್ಗಸ್ಥನಾಗುತ್ತಾನೆ. ಊರ ಎಲ್ಲಾ ಮಹಾಜನಗಳೂ ಸಭೆಕೂಡಿ, ಅತನ ಮಗ ಚೌಡೆಯ ನಾಯಕನಿಗೆ ಉಂಬಳಿ ಬಿಡುತ್ತಾರೆ.

ಚಂ|| ಬಸವೆಯ ನಾಯಕಂ ಧುರದೊಳಚ್ಚರಿಯಾಗಿರೆ ಚೋರಯೂಥಮಂ
ಪೆಸ[ವರಿ]ಗೆಯ್ದು ಭೂತಗಣಕುತ್ಸವಮಾಗಿರೆ ತನ್ನ ವೀರವ-

1. ಶಾ. ಮೂ. ಗಿರಿವರದ ದಕ್ಷಿಣ

ತ್ಯಸದಳವಾಗೆ ಭೂಜಗದೊಳಿತ್ತ ಸುರಾಂಗನೆಯರ್ಸವುಂತು ಸಂ-
ತೊಸದೊಳೆ ಕೊಂಡು ಪೋದರತಿಸೇವ್ಯನನೂರ್ಜ್ಜಿತ ವೀರಗಂಡನಂ ||೪೨೬||

ವ|| ಆ ಬಸವೆಯ ನಾಯಕನ ಮಗ ಚೌಡೆಯನಾಯಕಂಗೆಯಶೇಷಮಹಾಜನಂಗಳುಂ ಸಭಾಸ್ಥಾನದಲ್ಲಿದ್ದು ಬಿಟ್ಟುಂಬಳಿಯೆಂತೆಂದಡೆ, ಬಟೆಯಗವುಂಡಗೆಯ[1] ಬಡಗಣಮೊಯ್ಯ[2] ಮದೆಳಗಟ್ಟದ ತೆಂಕಣಮೊಯ್ಯ[3]ಲೆರೆ ಮತ್ತರು[4] ೨, ನಾಕೆನೆಯ ಹಸುಗೆಯ ಗದ್ದೆ, ಗವುಂಡಗೇರಿಯ ಮನೆಯುಂ ಸರ್ವ್ವಬಾಧಾಪರಿಹಾರವಾಗಿ ಮಾನ್ಯಮಂ ಬಿಟ್ಟರು.

## ೯೨

# ಜಾಜೂರು,

**ಅರಸಿಕೆರೆ ತಾಲೂಕು,**
ಹಾಸನ ಜಿಲ್ಲೆ

**ಹೊಯ್ಸಳ ವೀರಬಲ್ಲಾಳ**
(ಎಪಿ. ಕ. ೧೫, ಪು. ೨೮)

## ಅಸಹಾಯಶೂರ ವೀರಬಲ್ಲಾಳ

ಅಪರಿಮಿತವಾದ ಸೇನಾಬಲದೊಡನೆ ಏರಿಬಂದ ಸೇವುಣರನ್ನು ಬಲ್ಲಾಳನು ಒಂದಾನೆಯಿಂದ ಸೋಲಿಸಿದನು. ಕದನಕ್ಕಂಜಿ ಹಿಂದುಳಿವ ಬುದ್ಧಿಯಿಂದ 'ಅರಸರ ನೆಲೆ' ಎಂಬುದೊಂದನ್ನು ಮಾಡಿಕೊಂಡು ದೂರ ಇದ್ದು, ಅನ್ಯರನ್ನು ಅನ್ಯರಿಂದಲೇ ಗೆಲ್ಲುವ ಅರಸುಗಳೆಂಬವರ ಹಾಗಲ್ಲ ಇವನು. ಸ್ವತಃ ಒಂದಾನೆಯನ್ನೇರಿ ಮುನ್ನುಗ್ಗಿ ಕಾದುವನು.

ಮ. ವಿ.|| ಕರಿಗಳ್ ಪಣ್ಣಿದ ಪೊನ್ನ ಪಣ್ಣುಗೆಯವೊಂದೇಳೆಂಟು ನೂಱೆಟ್ಟಿ ಪೆ-
ರ್ದ್ದೆರೆಗಳ್ಮೆಯ್ವಡೆದುಂದದಿಂ ಕವಿವ ಜಾತ್ಯಶ್ವಂಗಳೇಳೆಂಟು ಸಾ-
ಯಿರವಸ್ತ್ರದ್ಯುತಿ ತಳ್ತ ಪಾಯದಳವೊಂದೇಳೆಂಟು ಲಕ್ಕಂ ತೆರ-
ಳ್ತರೆ ಹುಃ[5]ಸೇವುಣರಂ ಪಡಲ್ವಡಿಸನೇ ಬಲ್ಲಾಳನೊಂದಾನೆಯಿಂ ||೪೨೭||

ಚಂ|| ಅರಸುಗಳೆಂಬವರ್ಬ್ಬವರದೊಳ್ ಸೆರಗಿಂ ಪೆಱಗಿರ್ಪ್ಪ ಬುದ್ಧಿಯಿಂ-
ದರನೆಲೆಯೆಂದು ಮಾಡಿ ಪೆಱರಂ ಪೆಱರಿಂದಮೆ ಗೆಲ್ವರಲ್ಲದಿಂ-
ತಿರೆ ಪೆಱಗಾಗೆ ತನ್ನ ಬಲವನ್ಯಬಲಂ ಬೆಱಗಾಗಲೊಂದೆ ಸಿಂ-
ಧುರದೊಳೆ ಗೆಲ್ವರೇ ಪಗೆಯನಾರ್ಸ್ಸಮನಿಂತಸಹಾಯಶೂರನೊಳ್ ||೪೨೮||

---

1,2,3. : ಶಾ. ಮೂ. ಯಕಾರಗಳಿಗೆ ದ್ವಿತ್ವವಿಲ್ಲ.
4. ಶಾ. ಮೂ. : ತ್ತರು ಇಲ್ಲ
5 ಹುಃ : ಉಪೇಕ್ಷಾಭಾವವಾಚಕ ಉದ್ಗಾರ

೯೩

## ಅಬಲೂರು, ಕ್ರಿ.ವ. ಸು. ೧೨೦೦

## ಹಿರೆಕೆರೂರ ತಾಲೂಕು, (ಎಪಿ. ಇಂ. ೫, ಪು. ೨೪೫)

ಧಾರವಾಡ ಜಿಲ್ಲೆ

ಪವಾಡಪುರುಷನಾದ ಶಿವಶರಣ ಏಕಾಂತದ ರಾಮಯ್ಯನು ಅಬಲೂರಲ್ಲಿ ತನ್ನ ತಲೆಯನ್ನೇ ಪಣವಾಗಿ ತರಿದು ಕೊಟ್ಟು ತಿರುಗಿ ಪಡೆದು ಶಿವನೇ ದೇವರೆಂದು ಸಿದ್ಧಪಡಿಸಿ, ಜೈನರನ್ನು ಸೋಲಿಸಿ ಜಿನಮೂರ್ತಿಯನ್ನೊಡೆದು ಆ ಸ್ಥಳದಲ್ಲಿ 'ವೀರ ಸೋಮೇಶ್ವರ' ಎಂಬ ಶಿವಲಿಂಗವನ್ನು ಪ್ರತಿಷ್ಠಿಸಿ, ಬಿಜ್ಜಳರಾಯನಿಂದಲೂ ಕದಂಬ ಕಾಮದೇವರಸನಿಂದಲೂ ಚಾಳುಕ್ಯ ಸೋಮೇಶ್ವರನಿಂದಲೂ ಗೌರವಿಸಲ್ಪಟ್ಟ ಕಥೆಯನ್ನು ಈ ಶಾಸನ ಘೋಷಿಸುತ್ತದೆ. ಇದು ರಾಮಯ್ಯನ ಚರಿತ್ರವನ್ನು ಆಮೂಲಾಗ್ರವಾಗಿ ಹೇಳುವ ಚಿಕ್ಕ ಚಂಪೂಕಾವ್ಯವೆಂದೇ ಹೇಳಬಹುದು. ಇವನು ವೀರಭದ್ರಾಂಶಸಂಭೂತನು. ಕಲಬುರ್ಗಿ ಜಿಲ್ಲೆಯ ಆಳಂದೆಯಲ್ಲಿ ಪುರುಷೋತ್ತಮನೆಂಬ ದ್ವಿಜೋತ್ತಮನಿಗೆ ಮಗನಾಗಿ ಜನಿಸಿ, ಬಾಲ್ಯದಿಂದಲೂ ಶಿವಧ್ಯಾನಪರಾಯಣನಾಗಿ, ಹರಯದಲ್ಲಿ ಶೈವ ಕ್ಷೇತ್ರಯಾತ್ರೆ ಮಾಡುತ್ತಾ ಲಕ್ಷ್ಮೇಶ್ವರಕ್ಕೆ ಬಂದು ದಕ್ಷಿಣಸೋಮನನ್ನು ಆರಾಧಿಸಿಕೊಂಡು ಕೆಲ ದಿನ ಅಲ್ಲಿದ್ದನು. ಬಳಿಕ ಆ ದೇವನ ಆದೇಶದ ಮೇರೆಗೆ ಅಬಲೂರಿಗೆ ಬಂದು ಅಲ್ಲಿ ಅನುಪಮ ವೀರ ಶಿವಭಕ್ತಿಯನ್ನು ಮೆರೆದು ಶೈವಧರ್ಮವನ್ನು ಉದ್ಧರಿಸಿದನು.

ಈ ಶಾಸನದ ಕವಿಯ ಬಗೆಗೆ ಕೊನೆಯಲ್ಲಿ ಈ ಕಂದಪದ್ಯವಿದೆ :

ಕೇಶವರಾಜಚಮೂಪಂ। ಶಾಸನವಂ ಪೇಳ್ದನಂತದಂ ತಿದ್ದಿ ನಿರಾ-॥
ಯಾಸನೆ ಬರದನೀಶನ। ದಾಸಂ ಶಿವಚರಣಕಮಳಶರಣಂ ಸರಣಂ ॥೪೨॥

ಇದರಿಂದ ಈ ಶಾಸನರಚನೆಯ ಶ್ರೇಯಸ್ಸು ಪಡೆವಳನಾದ ಕೇಶಿರಾಜ ಮತ್ತು ಶಿವಶರಣನಾದ ಸರಣ ಇವರಿಬ್ಬರಿಗೆ ಸಲ್ಲುವುದೆಂದು ತೋರುತ್ತದೆ. ಆದರೆ, 'ತಿದ್ದಿ ನಿರಾಯಾಸನೆ ಬರೆದಂ' ಎಂದಿರುವುದರಿಂದ, ತಿದ್ದಿ ತೀಡಿ (ಸುಂದರವಾಗಿ) ಕಷ್ಟವಿಲ್ಲದೆ (ಕಲ್ಲ ಮೇಲೆ) ಬರೆದನೆಂಬ ಊಹೆಯೂ ಹೊರಡುವುದರಿಂದ, ಈ ಕಾವ್ಯದ ಕರ್ತೃತ್ವದ ವಿಷಯದಲ್ಲಿ ಕೇಶವರಾಜನಿಗೇ ಹೆಚ್ಚಿನ ಬೆಂಬಲ ದೊರೆಯುತ್ತದೆ.

# ಏಕಾಂತದ ರಾಮಯ್ಯನ ಚರಿತ್ರ

## ಹುಟ್ಟೂರು ಆಳಂದೆ

ಈ ಊರು ಯಾವಾಗಲೂ ಬೆಳೆ ಬರುವಂತಹದು; ಧನ-ಧಾನ್ಯ-ಜಲ ಸಮೃದ್ಧವಾದುದು.

ಕಂ॥ ಸೊಗಯಿಪುದಲನ್ದೆಯೆಂಬುದು
ನಗರಂ ಚೆಲುವೆಸೆದು ನಾಡೆಯಮರಾವತಿಗಂ
ಮಿಗಿಲೆನಿಸಿ ವಿಬುಧಜನದಿಂ-
ದಗಣಿತಧನಧಾನ್ಯಜಳಸಮೃದ್ಧಿಯಿನೆಂದುಂ ॥೪೨॥

ಪ್ರಕಟಿತಕಮರಾವತಿಯೊಳ್
ಸುಕೇಶಿಯುಂ ಮಂಜುಘೋಷೆಯುಂ ತಾಮಿರ್ಬ್ಬ-
ರ್ಸಕಳವಧೂತತಿಯೆಲ್ಲಂ
ಸುಕೇಶಿಯುಮ್ಮಂಜುಘೋಷೆಯುತ್ತತ್ಪುರದೊಳ್ ||೪೩೦||

## ರಾಮಯ್ಯನ ಹುಟ್ಟು

ಆಳಂದೆಯ ಪುರುಷೋತ್ತಮಭಟ್ಟನು ಸಂತತಿಗಾಗಿ ಶಿವನನ್ನು ಆರಾಧಿಸುತ್ತಾನೆ. ಕೈಲಾಸದೋಲಗದಲ್ಲಿ ಶಿವನು ಪರಸಮಯಗಳನ್ನು ನಿಯಾಮಿಸುವುದಕ್ಕಾಗಿ ವೀರಭದ್ರನಿಗೆ ಭೂಲೋಕದಲ್ಲಿ ಜನಿಸೆಂದು ವಿಧಿಸುತ್ತಾನೆ. ಆಮೇರೆಗೆ ವೀರಭದ್ರನು ಆ ಬ್ರಾಹ್ಮಣನಿಗೆ ಮಗನಾಗಿ ಹುಟ್ಟುತ್ತಾನೆ.

ಕಂ|| ಶ್ರೀವತ್ಸಗೋತ್ರನುರ್ಬ್ಬೀ-
ದೇವನುತಂ ನಿಖಿಳವೇದವೇದಾಂಗವಿದಂ
ಪಾವನಚರಿತ್ರಗುಣಸ-
ದ್ಭಾವಂ ಪುರುಷೋತ್ತಮಂ ದ್ವಿಜೋತ್ತಮನೆನಿಪಂ ||೪೩೧||

ಆ ವಿಪ್ರನ ಸತಿ ಸೀತಾ-
ದೇವಿಗವಾಸತ್ಯತಪನ ಸತಿಗಂ ಗುಣಸ-
ದ್ಭಾವದೆ ಪದ್ಮಾಂಬಿಕೆ ಸಲೆ
ಪಾವನಸುಚರಿತ್ರೆ ಪತಿಹಿತಬ್ರತೆಯೆನಿಪಳ್ ||೪೩೨||

ವ|| ಆ ದಂಪತಿಗಳ್ಪಲಕಾಲವನಪತ್ಯರಾಗಿರ್ದ್ದೊಂದು ದೆವಸಂ 'ನಾಪುತ್ರಸ್ಯ ಲೋಕೋಽಸ್ತಿ' ಯೆಂಬ ವೇದವಾಕ್ಯಮಂ ತಿ[ಳಿದು],

ಕಂ || ಪುತ್ರಾರ್ತ್ಥವಾಗಿ ಸತ್ಯಪ-
ವಿತ್ರಾಚರಣಂ ನೆಗಳ್ದ ಪುರುಷೋತ್ತಮನಾ-
ಪತ್ರಾಣನೀಶನೆಂದು ಕ-
ಳತ್ರಾನ್ವಿತನಾಗಿ ಶಂಭುವಂ ಪೂಜಿಸಿದನ್ ||೪೩೩||

ವ|| ಅನ್ನೆಗಮಿತ್ತ ದಿವಿಜದನುಜವೃಂದವಂದಿತಪಾದಾರವಿಂದ[ನಪ್ಪ] ಮಹೇಶ್ವರಂ ಕವಿಳಾಸಪರ್ಬ್ಬತದ ರಮ್ಯಭೂಮಿಯೊಳ್ ಕೇಶವವಾಸವಾಬ್ಜಭವ-ರೋಲಗಿಸಲಸಂಖ್ಯಾತಗಣಪರಿವೃತನುಮಾ[1] ಸಹಿತವೊಡ್ಡೋಲಗದೊಳ್ ಸುಖಸಂ-ಕಥಾವಿನೋದದಿಂದಮಿರೆ, ನಾರದನೆಂಬ ಗಣೇಶ್ವರನಿಂತೆಂದ:

ಉ.ಮಾ|| ಓಹಿಲ ದಾಸಿ ಚೆನ್ನ ಸಿರಿಯಾಳ ಹಳಾಯುಧ ಬಾಣನುದ್ಭಟ-
ರ್ದೇಹದೊಳೊಂದಿ ಬಂದ ಮಳಯೇಶ್ವರಕೇಶವರಾಜರಾದಿಯಾ-

---

1. ಶಾ. ಮೂ. ಸಹಿತಂ ವೊಡ್ಡೋಲಗ

ಗೈಹಿಕಸೌಖ್ಯಮಂ ಬಿಸುಟಸಂಖ್ಯಗಣಂ ನಿಜವಾದ ಭಕ್ತಿಸ-
ದ್ಗೇಹದೊಳಿಲ್ಲಿರಲ್ ಸಮಯಮುತ್ಕಟವಾದುದು[1] ಜೈನಬೌದ್ಧರೊಳ್ ||

ವ|| ಎಂಬುದುಂ ಮಹೇಶ್ವರಂ ದರಹಸಿತವದನಾರವಿಂದನಾಗಿ ವೀರಭದ್ರನಂ ನೀಂ ಮನುಷ್ಯಲೋಕದೊಳ್ ನಿನ್ನಂಶದೊಳೊರ್ಬ್ಬನಂ ಪುಟ್ಟಿಸಿ ಪರಸಮಯಗಳಂ ನಿಯಾಮಿಸೆಂಬುದುಂ ವೀರಭದ್ರನುಂ ಪುರುಷೋತ್ತಮ ಭಟ್ಟಗ್ಗೆ ಸ್ವಪ್ನದೊಳ್ತಾಪಸ-ರೂಪದಿಂ ಬಂದು ಪುತ್ರಂ ಪರಸಮಯ ನಿಯಾಮಕಂ ನಿಮಗೆ ಪುಟ್ಟುಗುಮೆಂ[ಂ]ದು [2]ಪರಮ ಪ್ರಸಾದಂ ಮಾಡಿ ಪೋಪುದುಂ, ಪುರುಷೋತ್ತಮಭಟ್ಟರು ಕೃತಾರ್ತ್ಥರಾಗಿ ಸಂತಸಂಬಟ್ಟು, ಮಗನಂ ಪಡೆದು ಜಾತಕರ್ಮ್ಮಾದಿ ಕ್ರಿಯೆಗಳಂ ಮಾಡಿ, ದೇವತೋ-ದ್ದೇಶದಿಂ[3] ರಾಮನೆಂದು ಹೆಸರಿಟ್ಟರಾತನುಂ ತನ್ನ ದಿಬ್ಯಜನ್ಮಾನುರೂಪಮಾಗೆ ಶಿವ ಯೋಗಯುಕ್ತನಾಗಿ ನಿಸ್ಪೃಹವೃತ್ತಿಯಿಂ ಚರಿಯಿಸುತ್ತುಂ

ಕಂ|| ಏಕಾಗ್ರಭಕ್ತಿಯೋಗದಿ-
ನೇಕಾಕಿಯೆನಲ್ಕೆ ಸಂದು ಶಿವನಂ ಪಿರಿದ-
ಪ್ಪೇಕಾಂತದೊಳಾರಾಧಿಸಿ-
ಯೇಕಾಂತದರಾಮನೆಂಬ ಪೆಸರ[ಂ*] ಪಡದಂ ||೪೩೫||

## ಅಬ್ಬಲೂರಿಗೆ ಆಗಮನ

ಲಕ್ಷ್ಮೇಶ್ವರದ ದಕ್ಷಿಣ ಸೋಮನಾಥನ ಅಪ್ಪಣೆಯ ಮೇರೆಗೆ ರಾಮಯ್ಯನು ಪ್ರಬಲರಾಗಿದ್ದ ಜೈನರನ್ನು ಗೆಲ್ಲುವುದಕ್ಕಾಗಿ ಆಬಲೂರಿಗೆ ಬಂದು, ಅಲ್ಲಿಯ ಬ್ರಹ್ಮೇಶ್ವರನ ಗುಡಿಯಲ್ಲಿ ಇರುತ್ತಾನೆ.

ಮ. ವಿ.|| ಸತತಂ ಸಂದು ಶಿವಾಗಮೋಕ್ತವಿವಿಧಕ್ಷೇತ್ರಂಗಳೊಳ್ ಶಾಂಭವಾ-
ಯತನಾನೇಕನದೀನದಪ್ರಕರದೊಳ್ ಗೌರೀವರಾಂಘ್ರಿದ್ವಯಾ-
ಶ್ರಿತವಾಕ್ಕಾಯಮನೋನುಗಂ ಚರಿಯಿಸುತ್ತಂ ಬಂದು ಕಣ್ಡಂ ಸುರಾ-
ರ್ಚ್ಚಿತನಂ ದಕ್ಷಿಣಸೋಮನಾಥನನಘೌಘತ್ರಾಸಿಯಂ ಪ್ರೀತಿಯಿಂ ||೪೩೬||

ವ|| ಅಂತು ಬಂದನವರತವಿನಮದಮರವರಮೌಳಿಮಣಿಕಿರಣಮಂಜರೀ-ರಂಜಿತಾಂಘ್ರಿಯುಗ್ಮನಪ್ಪ ಹುಲಿಗೆಱೆಯ ಸೋಮನಾಥನನಾರಾಧಿಸುತ್ತಮಿಪ್ಪು-ದುಮಾ ಪರಮೇಶ್ವರಂ ಪ್ರತ್ಯಕ್ಷವಾಗಿ,

ಅಬ್ಬಲೂರುವರಗ್ರಾಮಂ ಗತ್ವಾ ರಾಮ ಮಮಾಜ್ಞಯಾ
ತತ್ರ ವಾಸಂ ಕುರು ಸ್ವಸ್ಥಂ ಯಜ ಮಾಂ ಭಕ್ತಿಯೋಗತಃ ||

---

1. ಶಾ. ಮೂ. ವಾವುದು.

2. ದಕ್ಷಿಣಾಪಥದಲ್ಲಿ ಜೈನಧರ್ಮಾವಲಂಬನದಿಂದ ಕೆಟ್ಟು ಹೋದ ಜನರನ್ನು ನಿನ್ನ ಮಗ ರಾಮನು ಉದ್ಧರಿಸುವನು ಎಂಬರ್ಥದ ಸಂಸ್ಕೃತ ಶ್ಲೋಕವನ್ನು ಇಲ್ಲಿ ಬಿಟ್ಟಿದೆ.

3. ಬಿಡಲಾದ ಸಂಸ್ಕೃತ ಪದ್ಯದಲ್ಲಿ ನಿನ್ನ 'ನಿನ್ನ ಮಗ ರಾಮ' ಎಂದು ದೇವರು ಕನಸಿನಲ್ಲಿ ಹೇಳಿದುದರಿಂದ 'ದೇವತೋದ್ದೇಶದಿಂ' ಎಂದಿಲ್ಲಿ ಹೇಳಲಾಗಿದೆ.

ಜ್ಜೈನೈ[ಃ*] ಸಹ ವಿವಾದಂ ಚ ಶಂಕಾಂ ಹಿತ್ವಾ ಕುರುಷ್ವಥ
ಸ್ವಶಿರೋಽಪಿ ಪಣಂ ಕೃತ್ವಾ ಪುತ್ರ ತ್ವಂ ವಿಜಯಿೀ ಭವ[1] ||

ಎಂದು ಸೋಮನಾಥದೇವರ್ಬೆಸಸಿದಡೇಕಾಂತದ ರಾಮಯ್ಯನಬ್ಬಲೂರ ಬ್ರಹ್ಮೇಶ್ವರ ಸ್ಥಾನದೊಳ್[2] ನಿಸ್ಪೃಹವೃತ್ತಿಯಿಂದಮಿರೆ,

## ರಾಮಯ್ಯನೊಡನೆ ಜೈನರ ಕಲಹ

ಜೈನರು ಆ ಶಿವಾಲಯಕ್ಕೆ ಬಂದು ಜಿನನೇ ದೈವವೆಂದು ಘೋಷಿಸುತ್ತ ರಾಮಯ್ಯನನು ಕೆಣಕುತ್ತಾರೆ. 'ಶಿವನ ಸನ್ನಿಧಿಯಲ್ಲಿ ಅನ್ಯದೈವವನ್ನು ಹೊಗಳಲಾಗದು, ಹೋಗಿರಿ' ಎಂದು ಅವನೆಂದರೂ ಹೋಗದೆ ಅವರು, 'ನಿನ್ನ ತಲೆಯನ್ನು ಶಿವನಿಗೆ ಕಡಿದುಕೊಟ್ಟು ತಿರುಗಿ ಪಡೆದರೆ, ನೀನೇ ಭಕ್ತ, ಆತನೇ ದೇವರು' ಎಂದೆನ್ನುತ್ತಾರೆ.

ಕಂ || ಉ[3]ಲಿದಡ್ಡಿ ಬಂದು ಜೈನ-
ರ್ಪ್ಪಲರಂತಾ ಸಂಕಗೌಣ್ಡ ಸಹಿತಂ ಪಿರಿದುಂ
ಚಲದಿಂ ಕೈವಾರಿಸಿದ-
ತ್ತೊರ್ಲಗದೆ ಜಿನದೈವನೆಂದು ಶಿವಸನ್ನಿಧಿಯೊಳ್ ||೪೩೭||

ವ|| ಅದಂ ಕೇಳ್ದೇಕಾಂತದ ರಾಮಯ್ಯನತಿಕ್ರುದ್ಧನಾಗಿ ಶಿವಸನ್ನಿಧಿಯೊಳನ್ಯ-ದೇವತಾಸ್ತವನಂ ಮಾಡಲಾಗದೆಂದಡದಂ ಮಾಣದೆ ನುಡಿಯುತ್ತಿರಲಿಂತೆಂದಂ

ಕಂ|| ಹರನಂತಿರೀವನೇ ನಿಂ-
ಮರುಹಂ ಮುಂಕೊಟ್ಟಟಾವುದಾವುದು ಮುನ್ನಂ
ಹರನೊಳ್ಪಡದರನೇಕ-
ವ್ವರಮುಂ ಬಾಣದಿನಿಶಾಳಭಕ್ತಗಣಂಗಳ್ ||೦೩೮||

ಎನೆ ಜೈನರೆಂಗು ನೀಂ ಮುಂ-
ನಿನ ಹಿತರಂ[4] ಹೇಳಲೇಕೆ ನಿನ್ನಯ ಶಿರಮುಂ
ಜನಮುಱಿಯಲರಿದು ಕೊಟ್ಟಾ-
ತನೊಳಿಂ ಪಡೆ ನೀನೆ ಭಕ್ತನಾತನೆ ದೇವಂ ||೪೩೯||

---

1. ತಾತ್ಪರ್ಯ: ರಾಮ, ಅಬ್ಬಲೂರಿಗೆ ಹೋಗಿ ನನ್ನನ್ನು ಭಜಿಸುತ್ತ ಅಲ್ಲಿ ವಾಸವಾಗಿರು. ಯಾವ ಶಂಕೆಯೂ ಇಲ್ಲದೆ ಜೈನರೊಡನೆ ವಾದಿಸು; ನಿನ್ನ ತಲೆಯನ್ನು ಕೂಡ ಪಣಕ್ಕಿಟ್ಟು ಗೆಲ್ಲು; ಮಗನೆ ಇದು ನನ್ನಾಜ್ಞೆ.

2. ಶಾ. ಮೂ. : ಸ್ಥಾನುದಾಳ್

3 ಶಾ. ಮೂ. : ಯು. ಹಿಂದಿನ ಗದ್ಯದ ಕೊನೆಯ ಇರೆ, ಮತ್ತು ಈ ಪದ್ಯದ ಮೊದಲ ಉಲಿ ಎರಡೂ ಪದಗಳನ್ನು ಸಂಧಿಸಿ ಹೀಗೆ ಬರೆದಿರಬಹುದು. ಈ ರೀತಿ ಅನೇಕ ಶಾಸನಗಳಲ್ಲಿ ಕೆಲವೆಡೆ ಕಂಡುಬರುತ್ತದೆ.

4. ಶಾ. ಮೂ : ಹಿತರರ

## ಶಿವನಂಘ್ರಿಗೆ ಮಸ್ತಕಾರ್ಪಣ

'ನಾನು ಹಾಗೆ ಮಾಡುವುದಕ್ಕೆ ನಿಮ್ಮ ಪಣವೇನು ?' ಎಂದು ರಾಮಯ್ಯ ಕೇಳಲು, 'ಜಿನನನ್ನು ಕಿತ್ತು ಶಿವನನ್ನು ಸ್ಥಾಪಿಸುತ್ತೇವೆ' ಎಂದು ಜೈನರು ಕೋಪದಿಂದ ಎನ್ನುತ್ತಾರೆ. ಹಾಗೆ ಅವರಿಂದ ಓಲೆಯನ್ನು ಬರೆಸಿಕೊಂಡು ಅವನು ಶಿವನನ್ನು ಧ್ಯಾನಿಸುತ್ತ ತನ್ನ ತಲೆಯನ್ನು 'ಹುಲ್ಲಕಟ್ಟನ್ನು ಕೊಯ್ಯುವಂತೆ' ನಿಃಶಂಕೆಯಿಂದ ಕೊಯ್ದು ಶಿವನಿಗೆ ಅರ್ಪಿಸುತ್ತಾನೆ. ಆ ಅರಿದ ತಲೆ ಏಳು ದಿನ ಮೆರೆದು ಬಳಿಕ ಅವನ ಶರೀರದ ಮೇಲೆ ಮತ್ತೆ ಸ್ಥಿರವಾಗುತ್ತದೆ.

ಎನಲೇಕಾಂತದ ರಾಮಂ
ಮನಸಿಜರಿಪುಗಿತ್ತು ತಲೆಯುನಾಂ ಪಡೆದಡೆ ನೀ-
ವೆನಗೀವ ಪಣಮದೇನೆನೆ
ಮುನಿದೆಂದರ್ಜ್ಜಿನನ ಕಿತ್ತು ಶಿವನಂ ನಿಲಿಪೆವು ||೪೪೦||
ಎನೆ ಕೊಡುವುದೋಲೆಯಂ ನೀ-
ವೆನಗೆಂದಿತ್ತೋಲೆಗೊಂಡು ಶಿರಮಂ ತಾಂ ಭೋ[ಂ*]-
ಕೆನಲಿರಿದು ಕುಡುವ ಪದದೊಳ್
ಶಿವನಂ ಸಾನ್ನಿಧ್ಯಮಾಡಿ ರಾಮಂ ನುಡಿಗುಂ ||೪೪೧||

ಚಂ|| ಉಡುಗದೆ ಶಂಭು ನೀನೆ ಶರಣೆನ್ನದಡಂ ಮನಮನ್ಯಭಾವದೊ-
ಳೊಡರ್ದಡಮಿ ಕೃಪಾಣಮುಖದಿಂ ತಲೆ ಪೋಗದೆ ನಿಲ್ಕದಲ್ಲದಿ-
ರ್ದ್ದಡೆ ಶಿವ ನಿನ್ನ ಮುನ್ನಡಿಗುರುಳ್ಗೆನುತಂ ಕಲಿ ರಾಮನಾರ್ದ್ದು ಕೆ-
ಯ್ಗೆಡದರಿ[1]ದಿಕ್ಕಲಾರಯಿಸಿದಂ[1] ಶಿರಮಂ ಶಿವನಂಘ್ರಿಯುಗ್ಮದೊಳ್ ||೪೪೨||

ಮ.ವಿ|| ಅರಗಯ್ಗೊಂಡನೆ[2] ಕಿತ್ತು ನೋಡಿದನೆ [3]ಕೂರ್ಪ್ಪಿಂಗಳ್ಕಿ ಮೆಯ್ಗಾಯ್ದನೇ
ಸೆರಗಂ ವಾರ್ದ್ದನೆ ಬಾಳ್ಗೆ ಭಕ್ತರೆನುತಂ ಬಲ್ಲಾಳು ರಾಮಂ ಸ್ವಕಂ-
ಧರಮಂ ಚಕ್ಕನೆ ಹುಲ್ಲ ಕಟ್ಟನರಿವಂತಕ್ಲೇಶದಿಂದಾಗಳಂ
ತರಿದೀಶಾಂಘ್ರಿಯೊಳಿ[ಕ್ಕಿ ಶಂಕರ] ಗಣಕ್ಕಾನಂದವಂ ಮಾಡಿದಂ ||೪೪೩||

ಕಂ|| ಅರಿದ ತಲೆಯೇಳು ದೆವಸಂ-
ಬರೆಗಂ ಮೆಱದಿಂಬಳಿಕ್ಕವಿತ್ತ್ರಂ ಹರನಾ–

---

1 ಶಾ ಮೂ.: ದಿಕ್ಕಲುಂ ರಯಿಸಿದಂ

2. ಶಾ. ಮೂ.: ಅರಗಯಿಗೊಂಡನೆ ಶ್ರೀ. ಜೆ. ಎಫ್. ಫ್ಲೀಟರು ಇದನ್ನು 'ಅರ. ಗಾಯ್ಗೊಂಡನೆ' ಎಂದು ಶುದ್ಧೀಕರಿಸಿ ಕೊಟ್ಟಿದ್ದಾರೆ. ಆದರೆ 'ಅರ (ಅರ್ಧಕ್ಕೆ) ಗೈ [ಕೈ] ಕೊಂಡನೆ' ಎಂದರ್ಥವಾಗುವಂತಿರುವುದರಿಂದ ಮೂಲ ಪ್ರಯೋಗವನ್ನು ನಿರಾಕರಿಸುವ ಕಾರಣವಿಲ್ಲ.

3. ಶಾ. ಮೂ. : ಕೂರ್ಪ್ಪಂಗಳ್ಕಿ

ದರದಿಂ ತಲೆ ಕಲೆಯಿಲ್ಲದೆ
ತಿರವಾದುದು ಲೋಕವಱಿಯೆ[1] ರಾಮಂ ಪಡೆದಂ ||೪೪೪||

## ಜಿನಪ್ರಳಯ

ಬೆಱಗಾಗಿ ಜೈನರೆಲ್ಲಂ
ಮಱುಗಿ ಜಿನಪ್ರಳಯವೆಂಬುದಂ [2]ಮಾಡದಿರೆಂ-
ದೆಱಗಿ[2] ಕಾಲ್ವಿಡಿಯೆ ಮಾಣದೆ
ಬಱಸಿಡಿಲಂತೆಱಗಿ ಜಿನನ ತಲೆಯುಂ ಮುಱಿದಂ ||೪೪೫||

ಮ. ವಿ|| ಬಡಿಗೊಂಡೊರ್ಬ್ಬನೆ ಸೊಕ್ಕಿ ಬಾಳೆವನಮಂ ಕಾಡಾನೆ [3]ಪೊಕ್ಕಂತಿರು-
ಕ್ಕಡಗಲ್[3] ಕಾಪಿನ ವೀರರಂ ತುರಗಮಂ ಸಾಮಂತರಂ ತೂಳ್ದು ಮಾ-
ರ್ಪ್ಪಡೆಗಳ್ ಜೈನರ ಮಾರಿ ಬಂದುದೆನುತುಂ ಬೆ[ಂ*]ಗೊಟ್ಟು ಪೋಗಲ್ ಜಿನಂ
ಕೆಡೆವನ್ನಂ ಬಡಿದಲ್ಲಿ ಕೈಕೊಳಿಸಿದಂ ಶ್ರೀವೀರಸೋಮೇಶನಂ ||೪೪೬||

## ಬಿಜ್ಜಣರಾಜನಿಂದ ಜಯಪತ್ರ

ಜೈನರು ರಾಮಯ್ಯನಮೇಲೆ ಬಿಜ್ಜಣರಾಯನಲ್ಲಿ ದೂರಿಕೊಳ್ಳುತ್ತಾರೆ. ರಾಮಯ್ಯ ಅವರು ಬರೆದುಕೊಟ್ಟ ಓಲೆಯನ್ನು ತೋರಿಸಿ, "ಇನ್ನೂ ಬೇಕಾದರೆ ತಲೆಯನ್ನು ಕಡಿದುಕೊಟ್ಟು, ಅದನ್ನು ಸುಟ್ಟಬಳಿಕ ಮರಳಿ ಪಡೆಯುತ್ತೇನೆ; ಅದಕ್ಕೆ 'ಆನೆಸೆಜ್ಜೆಯ ಬಸದಿ' ಮುಖ್ಯವಾದ ೭೦೦ ಬಸದಿಗಳ ಜಿನರನ್ನು ಪಣವೊಡ್ಡಲಿ" ಎನ್ನುತ್ತಾನೆ. 'ಈಗಾದುದೇ ಸಾಕು, ನಾವೊಲ್ಲೆವೆ'ನ್ನುತ್ತಾರೆ ಅವರು. ರಾಜನು ರಾಮಯ್ಯನಿಗೆ ಜಯಃಪತ್ರವನ್ನು ಕೊಟ್ಟು ಅವನ ವೀರಸೋಮೇಶ್ವರ ದೇವಾಲಯಕ್ಕೆ ಗೋಗಾವೆ ಎಂಬ ಊರನ್ನು ದತ್ತಿಯಾಗಿ ಕೊಡುತ್ತಾನೆ.

ಮ. ವಿ|| ಅದನೆಲ್ಲಂ ನೆಱೆ[3] ಪೋಗಿ ಬಿಜ್ಜಣಮಹೀಪಾಳಂಗೆ ಜೈನರ್ಕ್ಕಳು-
ಕ್ಕರ್ವದಿಂ ಪೇಳ್ದು ವಿರೋಧವಾಗಿ ಪಿರಿದುಂ ದೂಱುತ್ತಿರಲ್ ಕೋಪದು-
ರ್ಮ್ಮದನಾ ಬಿಜ್ಜಣಭೂಭುಜಂ ಮುನಿಸಿನಿಂ ರಾಮಯ್ಯನಂ ಕಂಡು ನೀ-
ನಿದನನ್ಯಾಯಮನೇಕೆ ಮಾಡಿದೆಯೆನಲ್ಕೊಟ್ಟೋಲೆಯಂ ತೋಱಿದಂ ||

ಕಂ || ಅವರಿತ್ತವೋಲೆಯಿದೆ ನೀ-
ನವಧರಿಸುವುದಿಕ್ಕು ನಿನ್ನ ಭಂಡಾರದೊಳಿಂ-
ನವರೊಡ್ಡವಿರಲಿಯಿನ್ನೊ-
ಡ್ಡುವುದಾರ್ಪ್ಪಡೆ ನಿನ್ನ ಮುಂದೆ ಜಿನರಂ ಪಲರುಂ ||೪೪೭||

---

1. ಶಾ. ಮೂ. : ಲೋಕವಟಿಯೆ 2. ಶಾ. ಮೂ.: ಮಾಡದಿರಿಂನೆಡೆಱಗಿ

3. ಶಾ. ಮೂ. : ಪೊಕ್ಕಂತಿರುಕಡಗಲ್ ಶ್ರೀ. ಜೆ. ಎಫ್. ಫ್ಲೀಟರು 'ಪೊಕ್ಕಂತಿರಲ್ ಕಡಗಲ್' ಎಂದು ಶುದ್ಧಪಾಠ ಕೊಟ್ಟಿದ್ದಾರೆ.

ವ॥ ಅಂತಪ್ಪಡೀ ತಲೆಯನರಿದವರ ಕೈಯೊಳೊಡ್ಡುವೆನೆವರದಂ ಸುಟ್ಟಿಂ ಬಳಿಕ್ಕವಾಂ ಪಡವೆನೆನ**ಗಾನಸೆಜ್ಜೆ ಯ ಬಸದಿ**ಮುಖ್ಯವಾಗಿ[1] ಯೆಣ್ನೂಱುಂ ಬಸದಿಯ ಜಿನರಂ ಪಲರನೊಡ್ಡುವುದೆನೆ, ಬಿಜ್ಜಣರಾಯಂ ನಾಮಿೂ ಕೌತುಕವಂ ನೋಡುವವೆಂದು[2] ಬಸದಿಗಳ ಪಂಡಿತರುವಂ ಜೈನವಂ ಕರದು, ನೀವಾಪ್ಪರ್ಡೆ[3] ಬಸದಿಗಳಂ ಪಣಂಮಾಡಿ ಓಲೆಯಂ ಕುಡಿವೆಂದಡವರಾವೀ ಮುನ್ನೊಡದ ಬಸದಿಯಂ **ದೂಱಲ್** ಬಂದೆವಲ್ಲದಿನ್ನೊಡ್ಡಿ ಜಿನಪ್ರತಿಯುಮಂ ಮಾಡಲ್ ಬಂದವರಲ್ಲೆನೆನೆ, ಬಿಜ್ಜಣ ರಾಯಂ ನಕ್ಕು, ನೀವಿನ್ನು ಸಿರದೆ ಪೋಗಿ ಸುಖದಿನಿರಿವೆಂದವರಂ ಕಳಿಸಿ, ರಾಮಯ್ಯಗಳಿ-ಗೆಲ್ಲರುವಱಿಯೆ ಜಯಪತ್ರಮಂ ಕೊಟ್ಟು,

ರಾಮಯ್ಯಂಗಳು ಮಾಡಿದ ಪರಮಸಾಹಸಕಂ ನಿರತಿಶಯವಪ್ಪ ಮಾಹೇ-ಶ್ವರಭಕ್ತಿಗ[ಂ*] ಮೆಚ್ಚಿ, ವೀರಸೋಮನಾಥದೇವರ ದೇಗುಲದ ಮಾಟ ಪ್ರಾಕಾರ ಖಂಡಸ್ಫುಟಿತ ಜೀರ್ಣ್ಣೋದ್ಧಾರಕ್ಕ[ಂ*] ದೇವರಂಗಭೋಗನೈವೇದ್ಯಕಂ ಬನವಸೆ [3]ಪನ್ನಿಚ್ಛಾಸಿರದ ಕಂಪಣಂ ಸತ್ತಳಿಗೆಯೆಪ್ಪತ್ತರ ಮನ್ನೆಯ ಚಟ್ಟರಸನುಮಾ ಕಂಪಣದಗ್ರಾಯಿತ ಪ್ರಭುಗೌಂಡುಗಳಂ ಮುಂದಿಟ್ಟು, ಶ್ರೀಮದ್ಬಿಜ್ಜಣದೇವ[ಂ*] ಸತ್ತಳಿಗೆಯೆಪ್ಪತ್ತಱೊಳಗೆ ಮಳುಗುಂದದಿಂ ತೆಂಕಣ ಗೋಗಾವೆಯೆಂಬ ಗ್ರಾಮವುಂ ಪ್ರಸಿದ್ಧಸೀಮಾಸಹಿತಂ ತ್ರಿಭೋಗಮುವಂ ಶ್ರೀಮದೇಕಾಂತದ ರಾಮಯ್ಯಂಗಳ ಕಾಲಂ ಕಚ್ಚಿ ಧಾರಾಪೂರ್ಬ್ಬಕಂ ಮಾಡಿ ಕೊಟ್ಟು ಪ್ರತಿಪಾಳಿಸಿದಂ.

## ಚಾಳುಕ್ಯ ಸೋಮೇಶ್ವರನಿಂದ ಮನ್ನಣೆ

ಚಾಳುಕ್ಯ ಸೋಮೇಶ್ವರನು 'ಸೆಲೆಯಕಳ್ಳಿಕೊಪ್ಪ'ದಲ್ಲಿ ಸುಖಸಂಕಥಾವಿನೋದದಿಂದಿದ್ದಾಗ, ಒಂದು ದಿನ ಧರ್ಮಗೋಷ್ಠಿಯಲ್ಲಿ ರಾಮಯ್ಯನ ಮಹಿಮೆ ಅವನಿಗೆ ತಿಳಿಯುತ್ತದೆ. ಆಗ ಅವನು ರಾಮಯ್ಯನನ್ನು ಬರಮಾಡಿಕೊಂಡು ಅರಮನೆಯಲ್ಲಿ ಸತ್ಕರಿಸಿ, ಅಬಲೂರನ್ನು ಪಾರಮೇಶ್ವರದತ್ತಿ-ಯಾಗಿ ಕೊಡುತ್ತಾನೆ, ಮತ್ತು ಅವನನ್ನು ಭಕ್ತಿಯಿಂದ ಆನೆಯ ಮೇಲೆ ಮೆರಸುತ್ತಾನೆ.

ವ॥ ತ್ರಿಭುವನಮಲ್ಲ ಸೋಮೇಶ್ವರದೇವಂ, ಸಕಳಚಮೂನಾಥಶಿರೋ-ಮಣಿಯುಂ ಚಾಳುಕ್ಯರಾಜ್ಯಪ್ರತಿಷ್ಠಾಪಕನಪ್ಪ ಕುಮಾರ ಬಮ್ಮಯ್ಯನುಂ[4] ತಾನು [ಂ*], ಸೆಲೆಯಕಳ್ಳಿಯಕೊಪ್ಪದೊಳು ಸುಖಸಂಕಥಾವಿನೋದದಿನಿರ್ದ್ದೊಂದು ದೆವಸಂ ಧರ್ಮಗೋಷ್ಠಿಯೊಳಿರ್ದ್ದು, ಪುರಾತನ ನೂತನರಪ್ಪ ಶಿವಭಕ್ತರ ಗುಣಸ್ತವನಂ ಮಾಡುತ್ತಮಿರ್ದ್ದೇಕಾಂತದ ರಾಮಯ್ಯಂಗಳಬ್ಬಲೂರಲಿದ್ದಲ್ಲಿ *** ವೀರಸೋಮ-ನಾಥ ದೇವರಂ ಪ್ರತಿಷ್ಠೆಮಾಡಿ, ಶಿವಾಗಮೋಕ್ತವಾಗೆ ಪರ್ಬ್ಬತಪ್ರ[ಮಾ*]ಣದ ದೇಗುಲವಂ ತ್ರಿಕೂಟವಾಗೆ ಮಾಡಿದರೆಂಬುದಂ ಕೇಳ್ದು ವಿಸ್ಮಯಂಬಟ್ಟು, ನೋಡು-

1. ಶಾ. ಮೂ.: ಯೆಂಸಱುವ
2. ಶಾ. ಮೂ. : ನೋಡುವವೊಂದು
3. ಶಾ. ಮೂ. : ಎನಿಛಾಸಿರದ ಕಂಪಣ
4. ಶಾ. ಮೂ.: ಬಮ್ಮೆಯಂನುಂ

ವರ್ತ್ತಿರ್ಯಿಯಿಂ ಬಿನ್ನವತ್ತಳೆಯಂ ಬರಯಿಸಿ ಬರಿಸಿಯುವರನಿದಿರ್ಗೊ[ೞ*]ಣ್ಡು [1] ತನ್ನರಮನೆಗೊಡಗೊಣ್ಡು ಪೋಗಿ, ಪಿರಿದುಂ ಸತ್ಕಾರದಿಂ ಪೂಜಿಸಿ*** ಅಬ್ಬಲೂರನಾದೇವರ್ಗ್ಗಾಗ್ರಪೂರಾಗಲುವೇಳ್ಕುವೆಂದು ** ಆವೂರ ಮೇಲಾಳಿಕೆ, ಮನ್ನೆಯ ಸುಂಕ, ದಂಡ ದೋಷ, ನಿಧಿ ನಿಕ್ಷೇಪ ಸಹಿತವಾಗಿ ಏಕಾಂತರಾಮಯ್ಯಗಳ ಕಾಲಂ ಕರ್ಚ್ಚಿ, ಪೂರ್ವ್ವಪ್ರಸಿದ್ಧ ಸೀಮಾಸಹಿತಂ ತ್ರಿಭೋಗಸಹಿತಂ ಧಾರಾಪೂರ್ವ್ವಕಂ ಮಾಡಿ,ಪಾರಮೇಶ್ವರದತ್ತಿಯಾಗಿ ತಾಮ್ರಶಾಸನಮಂ ಕೊಟ್ಟಾನೆಯನೇಱಿಸಿ[2] ಮೆಱಯಿಸಿ ಪರಮಭಕ್ತಿಯಿಂ ಪ್ರತಿಪಾಳಿಸಿದಂ.

## ಕದಂಬ ಕಾಮದೇವರಸನಿಂದ ಮರ್ಯಾದೆ

ಕಂ|| ಶ್ರೀಕಂಠಪದಾಂಬುಜಮನ-
ನಾಕುಳಚಿತ್ತದೊಳೆ ಪೂಜಿಪಂ ಶಿವಸಮಯ-
ಪ್ರಾಕಾರನೆನಿಸಿ[3] ಸಲೆ ನೆಗ-
ೞ್ದೀಕಾಂತದ ರಾಮನೀಶಭಕ್ತಿಪ್ರೇಮಂ ||೪೪೯||

ಸ್ರ.|| ಶ್ರೀಯಂ[4] ದೀರ್ಗ್ಘಾಯುವಂ ಕೀರ್ತ್ತಿಯನನುದಿನವುಂ ಮಾಳ್ಕೆ ಗೀರ್ವ್ವಾಣವೃಂದ-
ಜ್ಯಾಯಂ ಶ್ರೀವೀರಸೋಮಂ ವಿಧೃತಹಿಮಕರಂ ಕಾಮದೇವಂಗುದಾರ-
ಶ್ರೀಯುಕ್ತಂಗದ್ರಿಜಾಸಸ್ಮಿತಸಿತತರಳಾಲೋಲ ವಿಸ್ತಾರಲೀಲಾ-
ನೇಯಾ[5]ಳೋಕೋದ್ಧತಶ್ರೀಲಲಿತರತಿಕಲಾಲಾಸ್ಯಶೈಲೂಷವೇಷಂ ||೪೫೦||

ವ|| *** ಶ್ರೀಮನ್ ಮಹಾಮಣ್ಡಳೇಶ್ವರ ಕಾಮದೇವರಸಪ್ಪಾನುಂಗಲ್ಲೈನೂಱುವಂ ದುಷ್ಟನಿಗ್ರಹ ಶಿಷ್ಟಪ್ರತಿಪಾಳನದಿನಾಳುತ್ತಮಿರ್ದ್ದಬ್ಬಲೂರ ವೀರ ಸೋಮನಾಥದೇವರಂ ಬಂದು ಕಣ್ಡು, ರಾಮಯ್ಯಂಗಳು ಶಿವಾಗಮವಿಧಾನದಿಂ[6] ಮಾಡಿಸಿದ ಪರ್ಬ್ಬತೋಪಮಾನಮಪ್ಪ ದೇಗುಲಮಂ ಕಣ್ಡವರು ಮಾಡಿದ ಸಾಹಸಮಂ ಸವಿಸ್ತರಂ ಕೇಳ್ದು ಮೆಚ್ಚಿ, ಪರಮಪ್ರೀತಿಯಿಂದೊಡಗೊಂಡು ಪೋಗಿ, ಪಾನುಂಗಲ್ಲ ನೆಲೆವೀಡಿನೊಳ್ಪ್ರಧಾನರುಂ ತಾನುಂ ಮದುಕೆಯ ಮಂಡಳಿಕಸಹಿತಂ ಸುಖಸಂಕಥಾವಿನೋದದಿಂ ಕುಳ್ಳಿರ್ದ್ದು, ಪರಮಭಕ್ತಿಯಿಂ ವೀರಸೋಮನಾಥದೇವರ್ಗ್ಗೆ ಪಾನುಗಲ್ಲೈನೂಱಱೊಳಗಣ ಕಂಪಣಂ ಹೊಸನಾಡೆಪ್ಪತ್ತಱೊಳಗೆ ಮುಂಡಗೋಡ ಜೋಗೇಸರದಿಂ ಬಡಗಣ ಮಲ್ಲವಳ್ಳಿಯೆಂಬ ಗ್ರಾಮಮಂ***ಧಾರಾಪೂರ್ವ್ವಕಂ ಮಾಡಿಕೊಟ್ಟು ಧರ್ಮ್ಮಮಂ ಪ್ರತಿಪಾಳಿಸಿದಂ.

---

1 ಶಾ. ಮೂ. ತನ್ನಂ ಮನೆ
2. ಶಾ. ಮೂ. : ನೇಱಿಸಿ
3. ಶಾ. ಮೂ. : ಪ್ರಕಾರನೆಳಸಿ
4. ಶಾ. ಮೂ : ಶ್ರೀಯುಂ
5. ಆನೇಯ = ನೇತ್ರ(?)
6. ಶಾ. ಮೂ : ಶಿವಾಗವಾವಿಧಾನದಿಂ

## ಏಕಾಂತದ ರಾಮಯ್ಯನ ವ್ಯಕ್ತಿತ್ವವಿಶೇಷ

ಹರನಿಂದ ತವನಿಧಿಯನ್ನು ಪಡೆದು ರಾಮಯ್ಯನು ಕೈಲಾಸಪ್ರಾಯವಾದ ಈ ದೇವಾಲಯ- ವನ್ನು ಮಾಡಿದನು. ದೇವರಿಗಾಗಿ ಭಕ್ತಿಯಿಂದ ಯಾರೇ ಕೊಟ್ಟ ಒಂದು ಹಾಗವನ್ನೂ (ಈಗಿನ ಮಾತಿನಲ್ಲಿ ಒಂದು ನಯಾ ಪೈಸಾವನ್ನು) ಅವನು ಕಳೆದುಕೊಳ್ಳುತ್ತಿರಲಿಲ್ಲ; ಹಣಕ್ಕಾಗಿ ಯಾವ ರಾಯರಲ್ಲಿಯೂ ಬಾಯಿ ತೆರೆಯುತ್ತಿರಲಿಲ್ಲ.

ಕಂ || ಹರನೊಳ್ತವನಿಧಿಯಂ ತಾಂ
ದರವುರವಿಲ್ಲೆನಿಸಿ ಪಡೆದು ದೇಗುಲವಂ ಪುರ-
ಹರನ ಕೈಲಾಸದಂತಿರೆ
ವಿರಚಿಸಿದಂ ಶಂಭುಭಕ್ತಿಧಾಮಂ ರಾಮಂ ||೪೫೧||

ಉ.ಮಾ|| ದೇಗುಲಕೆಂದು ಭಕ್ತಜನವಾದರದಿಂದಿದಿ[1]ರೆದ್ದು ಕೊಟ್ಟಡಾ
ಹಾಗವನಾದಡಂ ಕಳದುಕೊಳ್ಳದೆ ಬೇಡದೆ ನಾಡೆ ದೈನ್ಯದಿಂ
ಪೋಗಿ ನೃಪಾಲರಂ ಶಿವನನುಗ್ರಹವಕ್ಷಯವಾಗೆ ಮಾಡಿದಂ
ದೇಗುಲವಂ ಹರಾದ್ರಿಗೆಣೆಯಾಗಿರೆ ರಾಮನಿದೇಂ ಕೃತಾರ್ಥನೋ ||೪೫೨||

### ೯೪

**ಸೇಡಂ,** **ಕ್ರಿ. ಶ. ೧೨ನೆಯ ಶತಮಾನ**

**ಸೇಡಂ ತಾಲೂಕು,**

ಕಲಬುರ್ಗಿ ಜಿಲ್ಲೆ (ಜೈ. ಸಾ. ಇಂ. ಪು. ೨೯೫)

## ಉನ್ನತಿ ಪಡೆದ ಅಜಲ್ನಾಡು

ನೂರು ಪುಣ್ಯಕಾರ್ಯಗಳನ್ನು ಮಾಡುತ್ತಿದ್ದ ಇಲ್ಲಿಯ ಜನರು ತಮ್ಮ ನಾಡಿನ ಮಹಿಮೋ- ನ್ನತಿಯನ್ನು ಹೆಚ್ಚಿಸಿದ್ದರು.

ಕಂ|| ಭೋಗೋಪಭೋಗದಿಂದನು-
ರಾಗದಿನನವದ್ಯವೃತ್ತಿಯಿಂ ಸುಕೃತಶತೋ-
ದ್ಯೋಗದಿನಿಪ್ಪ ಜನಂಗಳಿ-
ನಾಗಳುಮಾ ವಿಷಯಮೇಂ ಮನಂಗೊಳಿಸಿದುದೋ ||೪೫೩||

---

1. ಶಾ. ಮೂ. : ರೆದ್ದು ಕೊಟಡಂ. ಇದಕ್ಕೆ ಡಾ. ಫ್ಲೀಟರು ‘ಕೊಟ್ಟದಂ’ ಎಂದು ತಿದ್ದುಪಡಿ ಕೊಟ್ಟಿದ್ದಾರೆ.

ಚಂ|| ಬಿರುದಿನ ಬಿಂಕುವಿಲ್ಲದ ನೆಗಳ್ತೆ ಪೊಗಳ್ತೆಗೆ ಸಲ್ಲದಾಪ್ಪುರ್ಸ ಬಿ-
ತ್ತರಿಸದ ನೇಪ್ಪುರ್ಸ[1] ನಿತ್ಯತೆಯನಾಂತಮದ್ರೋರ್ಸಪ್ಪದ ಪೆಂಪು ಸೊಂಪನಾ-
ವರಿಸದರಿಲ್ಲೆನಿಪ್ಪ ಮಹಿಮೋನ್ನತಿಯಂ ಪಡೆದಿದ್ದುರ್ಸದೆಂದೊಡಂ
ತಿರುಪರಿವರ್ಣ್ನಿರ್ಸಪಂತಳವೆ ತದ್ವಿಷಯಂ ಜಗತೀತಳಾಗ್ರದೊಳ್ ||೪೫೪||

## ಸೇಡಿಂಬದ ಮುನ್ನೂರ್ವರು ಸ್ವಾಮಿಗಳು

ಸ್ವಸ್ತಿ. ಯಮನಿಯಮಸ್ವಾಧ್ಯಾಯಧ್ಯಾನಧಾರಣಮೌನಾನುಷ್ಠಾನ-ಪರಾಯಣ ಜಪತಪಸಮಾಧಿಶೀಳಗುಣಸಂಪನ್ನರುಂ, ನುಡಿದು ಮತ್ತೆನ್ನರುಂ, ಕಾಂಚೀಪುರದ್ವಾರಕವಾಟಪುಟಭೇದನಾಭಿಚಾರ ಹೋಮಸಾಧಕರುಂ, ವಿರೋಧಿ ಕುಳಾರಣ್ಯ ದಾವಪಾವಕರುಂ, ಚತುರ್ವ್ವೇರ್ಸದ ಪಾರಾವಾರಪಾರಗರುಂ, ಬಹುವಿಧ ವಚನರಚನಾ ಪ್ರವೀಣರುಂ, ಚತುಷ್ಷಷ್ಟಿಕಳಾನ್ವಿತವಸುಮತೀಗೀರ್ವ್ವಾರ್ಸಣರುಂ, ಹೇಮಕುಂಡಳ ಜ್ವಾಳಿನೀದೇವ್ಯಾಕರ್ಷರ್ಸಣರುಂ, ಸಮಸ್ತವಿದ್ಯಾವಿಶೇಷಣರುಂ, ಶರಣಾಗತವಜ್ರ-ಪಂಜರರುಂ ಶ್ರೀನಾರಾಯಣದೇವ ಪಾದಪಂಕಜಭ್ರಮರರುಮಪ್ಪ ಶ್ರೀಮದನಾದಿ-ಯಗ್ರಹಾರಂ ಸೇಡಿಂಬದಶೇಷ ಮಹಾಜನಂ ಮುನ್ನೂರ್ವ್ವರ್ ಸ್ವಾಮಿಗಳ್ ಸ್ಥಿರಂ ಜೀಯಾತ್.

೯೫

## ಸಾತೇನಹಳ್ಳಿ, ಕ್ರಿ. ಶ. ೧೨೦೪

## ಹಿರೇಕೆರೂರು ತಾಲೂಕು, ಹೊಯ್ಸಳ ವೀರಬಲ್ಲಾಳ

ಧಾರವಾಡ ಜಿಲ್ಲೆ ( ಕ. ಇ. ೪, ಪು. ೭)

ಸಾತೇನಹಳ್ಳಿಯಲ್ಲಿ ಊರೊಡತಿ ಸೆಟ್ಟಿಕವ್ವೆ ಕಟ್ಟಿಸಿದ ಹರಿಹರೇಶ್ವರ ದೇವಾಲಯಕ್ಕೆ ವೀರಬಲ್ಲಾಳನು ದತ್ತಿಕೊಟ್ಟುದನ್ನು ಉಲ್ಲೇಖಿಸುವ ಶಾಸನವಿದು. ಇದೊಂದು ಒಳ್ಳೆಯ ಚಿಕ್ಕ ಚಂಪೂಕಾವ್ಯದಂತಿದೆ. ಇದರ ಕವಿ ತನ್ನ ಹೆಸರನ್ನು ಹೇಳಿಕೊಂಡಿಲ್ಲ.

## ಬಣಂಜಿಗವಟ್ಟಣ ಸಾತೆಯನಹಳ್ಳಿ

ವ || ** ಆ ನಾಗರಖಂಡವೆಪ್ಪತ್ತಱ ಬಳಿಯ ಬಾಡಂ**

ಚಂ|| ಬಳದೊಱಗಿರ್ದ್ದರ್ಸ ಶಾಳಿವನದಿಂ ಕರವೊಪ್ಪುವ ಹೂಗೊಳಂಗಳಿಂ-
ದಳವಡೆ ಕಂಪನೆಣ್ದೆಸೆಗೆ ಬೀಱುವ ಬಂಧುರ ಪುಷ್ಪವಾಟಿಯಿಂ-
ದಳಿಗಿಳಿಕೋಕಿಳಸ್ವನದಿನೊಪ್ಪುವ ನಂದನದಿಂ ವಿಳಾಸಮಂ
ತಳೆದುದು ನೋಡೆ **ಸಾತೆಯನಹಳ್ಳಿ ಬಣಂಜಿಗವಟ್ಟಣೋ**ತ್ತಮಂ ||

1 ಶಾ. ಮೂ. : ನೀಪ್ಪುರ್ಸ

## ದುಷ್ಟಮರ್ದಿನಿ ವೆಣ್ಣಲೆ ಸೆಟ್ಟಿಕವ್ವೆ

ಈ ವೆಣ್ಣಲೆ ಸೆಟ್ಟಿಕವ್ವೆ, ಮೊರ ಬುಟ್ಟಿ, ಹುಟ್ಟು ಸುಟ್ಟುಗ, ಒರಳು ಅಕ್ಕಿ ಎಂಬೀ ವಿಷಯಗಳ (ಮನೆಗೆಲಸಗಳ) ಯೋಚನೆಯನ್ನೇ ಮಾಡುತ್ತ ಕುಳ್ಳಿರುವ ಸಾಮಾನ್ಯ ಹೆಂಗುಸಾಗಿರಲಿಲ್ಲ. ಒಳ್ಳೇ ದಕ್ಷಳಾದ ಆಡಳಿತಗಾರ್ತಿಯಾಗಿದ್ದಳು. ದುಷ್ಟರನ್ನು ಮರ್ದಿಸಿ ಧರ್ಮವನ್ನು ರಕ್ಷಿಸುವ ವಿಷಯದಲ್ಲಿ ಸೆಟ್ಟಿಕವ್ವೆ ಸಾಕ್ಷಾತ್ ದುರ್ಗೆಯ ಅವತಾರವೆಂದೇ ವರ್ಣಿಸಲ್ಪಟ್ಟಿದ್ದಾಳೆ. ಇವಳು ಆಗಾಗ ಧರ್ಮಪ್ರಸಂಗವನ್ನು ನಡೆಯಿಸಿ ಧರ್ಮಶ್ರವಣ ಮಾಡುತ್ತಿದ್ದಂತೆ ತಿಳಿದುಬರುತ್ತದೆ.

ಚಂ|| ಖಳರಳವಂ ಕಳಲ್ಚಿ[1] ನೆಱೆ ಕಳ್ಳರ ಕೊಳ್ಳಿಯ ಬಾಧೆಯ[ಂ*] ಬೆಗ-
ಳ್ದಳಱೆ ತೆರಳ್ಚಿ ತೂಳ್ದಿ ನೆರೆ ಮನ್ನೆಯರನ್ನೆಯವಂ ನಿರಾಕುಳಂ
ಕಳೆದು ಬಣಂಜು ಧರ್ಮ್ಮಮನೆ ಪಾಳಿಸಿ ಭೀತರನೆಯ್ದೆ ಕಾದು ನಿ-
ರ್ಮ್ಮಳತರಕೀರ್ತ್ತಿಯಂ ಪಡೆದಳಾರ್ಪ್ಪಡಿ ವೆಣ್ಣಲ ಸೆಟ್ಟಿಕವ್ವೆಯೊಳ್ ||೪೫೬||

ಧರೆಗೆಸೆವೀ ಬಣಂಜುಸಮಯ ಪ್ರತಿಪಾಳನವರ್ತ್ತಿಯಿಂದೆ ದು-
ರ್ದ್ಧರತರಮಪ್ಪ ಚಂಡಿಕೆಯೆ ವೆಣ್ಣಲೆನಾರಿಯೆನಿಪ್ಪ ನಾಮಮಂ
ಧರಿಯಿಸಿ ಕೋಣವತ್ತಿ[2] ಗಧಿಪೋತ್ತಮೆಯಾಗಿಯೆ ಪುಟ್ಟಿ ವೈರಿಸಂ-
ಹರಣಮನೆಯ್ದೆ ಮಾಡಿದಳೆನುತ್ತಮೆ ಬಣ್ಣಿಸುಗುಂ ಜಗಜ್ಜನಂ ||೪೫೭||

ಖಳರನೆ ಕೊಂದು ಮೀಱುವರ ಬಲ್ಗಱುಳಂ ಪಿಡಿದುರ್ಚ್ಚಿ ಕೀಱೆ ಮಾ-
ಱ್ಮಲೆವರ ಮೂಳೆಯಂ ಮುಱಿದು ಮೆಚ್ಚದರಂ ಕಡಿದಿಕ್ಕಿ ಕೋಪದಿಂ
ಹಳಿವರನಾವಗಂ ತಱಿದು ದುಷ್ಟರ ನಿಟ್ಟೆಲುವಂ ನಿಮಿರ್ಚ್ಚಿದ-
ಳ್ಬಳಯುತೆ ದುರ್ಗ್ಗಿಯೊಲ್ ಪ್ರಿಥುವಿಸೆಟ್ಟಿಯೆ ವೆಣ್ಣಲನಾರಿ ನಾಮದಿಂ ||

ಮಡದಿಯರಾವಗಂ ಕೆರಸಿ ಕಾವಲಿ ತಂಬುಗೆ ಹುಟ್ಟು ಸಟ್ಟುಗಂ
ಕೊಡನೊರಲಕ್ಕಿಯೆಂಬಿವನೆ ಚಿಂತಿಸಿ ಕೋಟಲೆಗೊಂಬರಲ್ಲದೇಂ
ಪ್ರುಡನನೆ ಸುಪ್ರತಿಷ್ಠೆಯನೆ ಮಾಡಿಸಿ ಕಲ್ವೆಸದಿಂದೆ ಗೇಹಮಂ
ಪೊಡವಿಯೊಳೊಪ್ಪೆ ಮಾಡಿಪರೆ ಸನ್ನುತೆ **ವೆಣ್ಣಲೆ ಸೆಟ್ಟಿಕವ್ವೆ**ವೊಲ್ ||೪೫೯||

## ಸೆಟ್ಟಿಕವ್ವೆಯ ಗುರು ಹರಶಕ್ತಿ

ಕಂ|| ಧರೆಗೆಸೆವ ಕೋಣವತ್ತಿಗೆ
ಪಿರಿದೆನಿಪಧಿನಾಥೆ ಸೆಟ್ಟಿಕವ್ವೆಗೆ ಧರ್ಮ್ಮೋ-
ತ್ಕರಲಾಭಕಾರಿಯೆನಿಪಂ
ಹರಶಕ್ತಿಬ್ರತನೆಂದು ಪೊಗುಳ್ಗುಂ ಲೋಕಂ ||೪೬೦||

---

1. ಶಾ. ಮೂ.: ಕಳಳ್ಚಿ

2. ಕೋಣವತ್ತಿ ಸಾತಯನಹಳ್ಳಿಯ ಉಪಗ್ರಾಮವಿರಬೇಕು. ಸಾತೇನಹಳ್ಳಿಯಿಂದ ಅರ್ಧ ಮೈಲಲ್ಲೇ ಇರುವ ಈಗಿನ ಕೊಣತಿ ಎಂಬ ಹಳ್ಳಿಯೇ ಕೋಣವತ್ತಿ ಎಂದು ತೋರುತ್ತದೆ.

ವ|| ಅಂತೆನಿಸಿದ ನಿಜಧರಾದ್ಯರುಂ ಸದುಬುದ್ಧಿ ಸಹಾಯನಪ್ಪ ಬೊಪ್ಪರಾಜ . ಮತಸಮೇತಂ, ಕೋಣವತ್ತಿಗಧಿಪತಿಯೆನಿಪ್ಪ ತ್ರಿಭುವನಮಲ್ಲ ಪ್ರಿಥಿವಿಸೆಟ್ಟಿಯೆನಿಸಿದ ಕಾಮಿಸೆಟ್ಟಿಯ ಕುಲವಧುವೆನಿಪ ವೆಣ್ಣಲೆ ಸೆಟ್ಟಿಕವ್ವೆಗೆ ಧರ್ಮ್ಮೋಚಿತಪ್ರಸಂಗದಿಂ ಸಧರ್ಮ್ಮರತೆಯಾಗಿ, ಸಾತೆಯನಹಳ್ಳಿಯೊಳು ಹರಿಹರೇಶ್ವರನೆಂಬ ನಾಮದಿಂ ಪ್ರತಿಷ್ಠೆಯಂ ಮಾಡಿ, ಧರ್ಮ್ಮೋನ್ನತಿಯುಂ ಮಾಡಿದಳದೆಂತೆಂದಡೆ —

## ೯೬

**ಬೆಳಗಾವಿ,** **ಕ್ರಿ. ಶ. ೧೨೦೪**

**ಬೆಳಗಾವಿ ತಾಲೂಕು,** **ರಟ್ಟ ೪ನೆಯ ಕಾರ್ತವೀರ್ಯ**

ಬೆಳಗಾವಿ ಜಿಲ್ಲೆ (ಎಪಿ. ಇಂ. ೧೩, ಪು. ೨೮)

ಶಾಸನದ ಕೊನೆಯ ಪದ್ಯದಿಂದ ಇದರ ಕವಿ ಕವಿಕಂದರ್ಪನಾದ ಬಾಳಚಂದ್ರನೆಂದು ತಿಳಿಯುತ್ತದೆ. ಈತನೇ ಇದೇ ಊರ ಇನ್ನೊಂದು ಶಾಸನವನ್ನು ರಚಿಸಿದ್ದಾನೆ. ಎರಡೂ ಶಾಸನಗಳ ಕವಿಪರಿಚಯದ ಪದ್ಯಗಳಲ್ಲಿ ತಾನು ' ಚಾತುರ್ಭಾಷಾಕವಿ ' ಎಂದೂ ಸ್ಫುಟವಾದ ಅರ್ಥ, ಅಲಂಕಾರ, ದೋಷರಾಹಿತ್ಯ, ಅಮೃತದಂತಹ ಮಾತು ಇವು ತನ್ನ ರಚನೆಯ ವಿಶೇಷಗಳೆಂದೂ ಕವಿ ಹೇಳಿಕೊಂಡಿದ್ದಾನೆ. ಅವನ ಸ್ವಪ್ರಶಸ್ತಿಯ ಈ ಮಾತು ಪ್ರಾಮಾಣಿಕಸತ್ಯ ಎಂಬುದು ಶಾಸನಗಳನ್ನೋದಿದಾಗ ಮನವರಿಕೆಯಾಗುವುದು. ಈ ಬಾಳಚಂದ್ರನು ಮಾಧವಚಂದ್ರ ತ್ರೈವಿದ್ಯಚಕ್ರವರ್ತಿಯ ಶಿಷ್ಯನು.

### ಕೂಂಡಿನಾಡು

ಕಂ || ಜಂಬೂದ್ವೀಪದ ಭರತದೊ-
ಳಂಬುಜಭವಸಾರಸೃಷ್ಟಿ ಕೂಂಡಿಮಹೀಚ-
ಕ್ರಂ ಬಗೆಗೊಳಿಪುದು ಸಕಳಜ-
ನಾಂಬಕಘನ ಸುಕೃತಫಳವಿಳಾಸನಿವಾಸಂ ||೪೬೧||

### ಸಚಿವೈಕಶಿರೋಮಣಿ ಬೀಚ

ವಿದ್ಯೆ-ವಿನಯ, ಸಿರಿ-ತ್ಯಾಗ, ಯೌವನ-ನಿರ್ಮಲಾಚರಣ, ಆಯುಸ್ಸು-ಕೀರ್ತಿ, ವಾಗ್ಮಿತ್ವ-ಸತ್ಯ ಇವು ಈ ಬೀಚನಲ್ಲಿ ಜೊತೆಜೊತೆಯಾಗಿದ್ದವು.

ಚಂ|| ಅನುಪಮವಿದ್ಯೆಗುದ್ಧವಿನಯಂ ಸಿರಿಗೊಪ್ಪುವ ಚಾಗದೇಳ್ಗೆ ಜೌ-
ವನಕೆ ವಿನಿರ್ಮ್ಮಳಾಚರಣಮಾಯುಗೆ ವಿಸ್ತೃತಕೀರ್ತ್ತಿ ವಾಕ್ಪ್ರವ-
ರ್ತ್ತನೆಗೆ ಋತೋಕ್ತಿ ತನ್ನೆಸಕದಿಂ ಸಲೆ ಮಂಡನನಾಗೆ ವರ್ತ್ತಿಪಂ
ಜನಪತಿ ಕಾರ್ತ್ತವೀರ್ಯ್ಯಸಚಿವೈಕಶಿರೋಮಣಿ ಬೀಚನುರ್ವ್ವಿಯೊಳ್ ||

## ಕವಿಕಂದರ್ಪ್ಪ ಬಾಳಚಂದ್ರ

ಪ್ರಹತಾರಿಬ್ರಜಕಾರ್ತ್ತವೀರ್ಯ್ಯಸಚಿವಂ ಶ್ರೀಬೀಚಿರಾಜಂ ಯಶೋ-
ಮಹಿತಂ ಪೇಳಿಮೆನಲ್ಕೆ ಶಾಸನಮನೊಳ್ಪಿಂ **ಬಾಳಚಂದ್ರಂ** ಗುಣಾ-
ಗ್ರಹಿ ವಿದ್ವಜ್ಜನಸಂಮತಸ್ಫುಟಪದಾರ್ತ್ಥಾಳಂಕ್ರಿಯಾಸಂಕುಳಾ-
ವಹಮಪ್ಪಂತಿರೆ ಪೇಳ್ದನಿನ್ತು **ಕವಿಕಂದರ್ಪ್ಪಂ** ಬುಧಾಧೀಶ್ವರಂ ॥೪೬೩॥

## ೯೭

( ಬೆಳಗಾವಿ. ಕ್ರಿ. ಶ. ೧೦೨೪. ಎಪಿ. ಇಂ. ೧೩, ಪು. ೧೮ )

ಆ ಕಾಲದ, ಆ ಪ್ರದೇಶದ ಊರು-ಮನೆ-ಜನ-ಹೊಲ-ಕೆರೆ ಮೊದಲಾದವುಗಳ ಹೆಸರುಗಳೂ ಅವುಗಳನ್ನು ನಿರ್ದೇಶಿಸುವ ಅಂದಿನ ಕ್ರಮವೂ ಪರಪ್ರದೇಶಗಳೊಡನೆ ನಡೆಯುತ್ತಿದ್ದ ವ್ಯಾಪಾರದ ವ್ಯಾಪ್ತಿಯೂ ಅಲ್ಲಿ ಮಾರುವ ನಾನಾ ವಸ್ತುಗಳಿಗೆ ಗೊತ್ತುಪಡಿಸಲಾದ ತೆರಿಗೆಯ ಪ್ರಮಾಣವೂ ಅಳತೆತೂಕಗಳೂ ಈ ಶಾಸನದಲ್ಲಿ ಉಕ್ತವಾಗಿವೆ. ಭಾಷೆ ನಿರ್ದುಷ್ಟವಾಗಿದೆ. ಈ ಶಾಸನದ ಕವಿಯೂ ಆ ಬಾಳಚಂದ್ರನೇ.

## ಮಹಾಮಂಡಳೇಶ್ವರ ಕಾರ್ತವೀರ್ಯನ ಸ್ಥಳವೃತ್ತಿ

*** ಧಾರಾಪೂರ್ವ್ವಕಂ ಮಾಡಿ ವೇಣುಗ್ರಾಮೆಯೊಳ್ ಕೊಟ್ಟ ಸ್ಥಳವೃತ್ತಿ. ಅದಱ ತೆಂಕದೆಸೆಯ ಬಜೆಯ ಖಾರಿಗೆಯಿಂ ಪಡುವಲ್ ಕೊಡಗೆಯ್ಯ ಇಪ್ಪತ್ತನಾಲ್ಕನೆಯ ಹತ್ತಿಯಲ್ಲಿ ಇಱಿಸಿಲ್ಗಟ್ಟಿ ಸಹಿತಂ ಮತ್ತರಯ್ದು, ಆ ವೇಣುಗ್ರಾಮೆಯಲ್ಲಿ ಹಿರಿಯ ಮೂಡಗೇರಿಯ ಪಡುವಣ ಹರಿಯೊಳ್ ದುಗ್ಗಿಯರ ಟೇಕಣನ ಮನೆಯಿಂ ಬಡಗಲ್ಮನೆಯೊಂದು, ಪಡುವಗೇರಿಯ ಪಡುವಣ ಹರಿಯೊಳ್ಮನೆಯೊಂದು, ಪಡುವಣ ಗವನಿಯಲ್ಲಿ ಮನೆಯೊಂದು, ಸಾಲ ಬಸದಿಯಿಂ ಮೂಡಣ ಕಪಿಲೇಶ್ವರದೇವರ ಧವಳಾರದ ಕಟ್ಟೆದಿರೊಳ್ಮನೆ ಮೂಱು, ಆನೆಯ ಕೆಱೆಗೆ ಹೋದ ಬಟ್ಟೆಯಿಂ ಬಡಗಲ್ ಹೂದೋಂಟಂ ಆ ವೇಣುಗ್ರಾಮದ ಕೋಲಿಂ ಮತ್ತರೆರಡು ಕಮ್ಮವಿನ್ನೂಱೆಪ್ಪತ್ತಾಱು, ಕಣಂಬುರಿಗೆಯಾಲೂರಿಂ ಪಡುವಣ ಹೆಗ್ಗೆಱೆಯಿಂ ಪಡುವಲ್ ಕೆಯ್ಮತ್ತರ್ ಹನ್ನೆರಡು, ಪಡುವಣ ಹಟ್ಟೆಯಲ್ಲಿಂ ತೆಂಕಗೇರಿಯೊಳಯ್ಗುಯ್ಯಗಲದಿಪ್ಪತ್ತೊಂದು ಕಯ್ನೀಳದ ಮನೆಯೊಂದು.

## ಮುಮ್ಮುರಿದಂಡಗಳು ಮೊದಲಾದವರ ದಾನ

ಮತ್ತಂ ಸ್ವಸ್ತ್ಯನೇಕಗುಣಗಣಾಳಂಕೃತ ಸತ್ಯಶೌಚಾಚಾರನಯವಿನಯಸಂಪನ್ನರುಮಾಶ್ರಿತಜನಪ್ರಸನ್ನರುಂ ಮಘಪಟ್ಟಪುರಪ್ರತಿಷ್ಠಿತಜಿನಮುನಿಜನೋಪದಿಷ್ಟಗುಡ್ಡಶಾಸ್ತ್ರಕ್ರಮಪರಿಪಾಳಿತವೀರಬಣಂಜುಧರ್ಮ್ಮರುಂ ಸಮಾಚರಿತ ಪುಣ್ಯಕರ್ಮ್ಮರುಂ ಪದ್ಮಾವತೀದೇವೀಲಬ್ಧವರಪ್ರಸಾದರುಂ ಭಲ್ಲುಂಕಿದಣ್ಡಹಸ್ತರುಮಪ್ಪ

ಸಮಯಚಕ್ರವರ್ತ್ತಿ ಜಯಪತಿಸೆಟ್ಟಿ ಮುಖ್ಯಮಾಗಿ ವೇಣುಗ್ರಾಮದ ಸ್ಥಳದ ಸಮಸ್ತ ಮುಮ್ಮುರಿದಣ್ಡಂಗಳುಂ, ಕೂಂಡಿ ಮೂಸಾಸಿರದ ಪಟ್ಟಣಿಗ ಮೊದಲಾದುಭಯನಾನಾ ದೇಶಿ ಮುಮ್ಮುರಿದಂಡಂಗಳುಂ, ಪರಶುರಾಮನಾಯಕ ಪೊಮ್ಮಣನಾಯಕ ಅಮ್ಮುಗಿ ನಾಯಕ ಪ್ರಮುಖರಪ್ಪ ಸಮಸ್ತ ಲಾಳವ್ಯವಹಾರಿಗಳುಂ, ಪಡಪನಾಯಕ ಕೊಂಡ ನಂಬಿಸೆಟ್ಟಿ ಪೊಱೆಯಚಸೆಟ್ಟಿ ಮೊದಲಾದೆಲ್ಲಾ ಮಲೆಯಾಳವ್ಯವಹಾರಿಗಳುಂ, ಮತ್ತಮಾ ವೇಣುಗ್ರಾಮದ ಸ್ಥಳದ ಚಿನ್ನಗೆಯಿಕದವರುಂ ದೂಸಿಗರುಂ ಮುಖ್ಯ-ಮಾಗುಳಿದ ಪರದರುಂ, ತೇಲಿಗರುಂ, ದಿಂಕಸಾಲಿಗರುಮಿನ್ತಿವರೆಲ್ಲಂ ನೆರೆದಾ ಶಾನ್ತಿ-ನಾಥ ದೇವರ ಬಸದಿಗೆ ಬಿಟ್ಟಾಯವೆಂತೆಂದೊಡೆ :

ಬಡಗಣಿಂ ಬಂದ ಕುದುರೆಗೆ ನೆಲಮೆಟ್ಟು ಹಾಗವೊಂದು, ತೆಂಕಲ್ ನಡೆವವರ್ಕ್ಕೆ ಸುಂಕ ಹಾಗವೊಂದು, ಮಲೆಯಾಳರ ಕುದುರೆಗೆ ಹಾಗವೊಂದು, ಅಱುವತ್ತಯ್ದೆತ್ತು ಕೋಣಂಗಳೊಳೇನಂ ಪೇಱಿದೊಡಂ [1]ಸರ್ವ್ವಬಾಧಾಪರಿಹಾರಂ, ಚಿನ್ನಗೆಯಿಕದ ಚೀರಕ್ಕೆ ದೂಸಿಗವಸರಕ್ಕೆ ಹತ್ತಿವಸರಕ್ಕೆ ಮಣಿಗಾರವಸರಕ್ಕೆ ಗಂಧವಣವಸರಕ್ಕೆ ಗಂಧವಣಿಗರಂಗಡಿಗೆ ಅಕ್ಕಸಾಲೆಗವುಟಕ್ಕೆ ಬೇಱಿವೇಱಿ ಬರಿಸದೆಱಿ ಹಿರಿಯಹಾಗ ವೊಂದು, ಹೊಱಗಣಿಂ ಬಂದ ಸೀರೆಯ ಕಡಗೆಗೆ ವೀಸವೊಂದು, ಹೊಱಗಣಿಂ ಬಂದ ಗಂಧವಣಕ್ಕೆ ಕಕ್ಷಭಂಡಕ್ಕೆ ಆ ಭಂಡಂ ಗದ್ಯಾಣಂ ತೂಕವಯ್ದು, ಹತ್ತಿಯ ಭಂಡಿಗೆ ತಾರಂ ಮೂಱು, ಆ ಪೇಱಿಂಗೆ ಕಾಣಿಯೊಂದು, ಭತ್ತದ ಭಂಡಿಗೆ ಭತ್ತವೊರ್ವ್ವಳ್ಳಂ ಭತ್ತವಸರದಂಗಡಿಗೆ ಭತ್ತ ನಿಚ್ಚ ಸೊಲ್ಲಗೆ, ಅಕ್ಕಿವಸರಕ್ಕೆ ಅಕ್ಕಿಯದ್ದಂ, ಮೆಳಸಿನ ಹೇಱಿಂಗೆ ಮೆಳಸೊಮಾರ್ನ್ನಂ ಆ ಜವಳಕ್ಕೆ ಅರೆವಾನಂ, ಇಂಗಿನ ಪೆಟ್ಟಿಗೆಗೆ ಇಂಗು ಗದ್ಯಾಣಂ ತೂಕವಾಱು, ಅಲ್ಲ ಅರಿಸಿನದ ಜವಳಕ್ಕೆ ಆ ಭಂಡಂ ಪಲವಯ್ದು, ಆ ಹೇಱಿಂಗೆ ಅಲ್ಲ ಅರಿಸಿನಂ ಪಲಂ ಹತ್ತು, ಗಾಣಕ್ಕೆ ನಿಚ್ಚಟೆಣ್ಣೆಯದ್ದಂ, ಅಡಕೆಯ ಹೇಱಿಂಗೆ ಅಡಕೆಯಿಪ್ಪತ್ತಯ್ದು ಆ ಜವಳಕ್ಕೆ ಅಡಕೆ ಹನ್ನೆರಡು, ಎಲೆಯ ಹೇಱಿಂಗೆಲೆ ನೂಱು ಹೊಱಿಗೆಲೆಯಯ್ವತ್ತು, ತೆಂಗಿನಕಾಯ ಹೇಱಿಂಗಾ-ಕಾಯೊಂದು, ಓಲೆಯ ಹೇಱಿಂಗೆ ಓಲೆಯ ಸೂಡೆರಡು ಆ ಹೊಱಿಗೆ ಸೂಡೊಂದು[2], ಹೊಱಗಣಿಂ ಬಂದ ಬೆಲ್ಲದ ಭಂಡಿಗೆ ಬೆಲ್ಲದಚ್ಚು ಹದಿನೈದು ಆ ಹೊಱಿಗೆ ಅಚ್ಚೊಂದು, ಬಾಳೆಯ ಹೇಱಿಂಗಾ ಕಾಯಾಱು ಆ ಹೊಱಿಗೆ ಕಾಯ್ಮೂಱು, ನೆಲ್ಲಿಯ ಕಾಯ ಹೇಱಿಂಗಾ ಕಾಯ್ಬಳ್ಳವೊಂದು, ಕರ್ಪ್ಪೂರದ ಹಗಱಕ್ಕೆ ಒಂದು ಕರ್ಪ್ಪೂರ, ಬಳಹದ ಹೇಱಿಂಗೆ ಬಳಹವೊರ್ಪ್ಪಲಂ, ಮತ್ತಮಾ ಶಾನ್ತಿನಾಥದೇವರ ಬಸದಿಗೆ ಶ್ರೀಕಾರ್ತ್ತವೀರ್ಯ್ಯದೇವಂ ಕೊಟ್ಟ ಅಂಗಡಿ ಬಡಗ-

1 ಶಾ. ಮು.: ಸರ್ವ್ವಾಬಾಧಪರಿಹಾರಂ

2. ಆಗ ಬರೆಯುವ ಸಾಧನವಾಗಿದ್ದ ಓಲೆಗರಿಗಳನ್ನು ಪೇಟೆಯಲ್ಲಿ ಮಾರುತ್ತಿದ್ದರೆಂದು ತೋರುತ್ತದೆ.

ಗೇರಿಯ ಬಡಗಣ ಹರಿಯ ಪಡುವಣ ಕಡೆಯೊಳ್ ರಾಜವೀಥಿಯಿಂ ಮೂಡಲ್ ನಾಲ್ಕು.

ಕಂ || ದೋಷವ್ಯತೀತಮರ್ತ್ಥವಿ-
ಶೇಷಮಿದೆನೆ ಪೇಳ್ದನೊಲ್ದು ಶಾಸನಮಂ ಪೀ-
ಯೂಷಸಮಸೂಕ್ತಿ ಚಾತು-
ರ್ಬ್ಭಾಷಾಕವಿಚಕ್ರವರ್ತ್ತಿ ಕವಿಕನ್ದರ್ಪ್ಪಂ || ೪೬೪ ||

ಶ್ರೀಮನ್ಮಾಧವಚಂದ್ರತ್ರೈವಿದ್ಯಚಕ್ರವರ್ತ್ತಿ ವಾಕ್ಸುಧಾರಸನಾಭ್ಯುದಿತನಿತ್ಯ-ಸಾಹಿತ್ಯಕಮಳವನಮರಾಳಂ **ಬಾಳಚಂದ್ರದೇವಂ** ಪೇಳ್ದ ಶಾಸನಂ.

## ೯೮

( ಬೆಳಗಾವಿ ಕ್ರಿ.ವ. ೧೨೦೪ರ ಮತ್ತೊಂದು ಶಾಸನ. ಎಪಿ. ಇಂ. ೧೩ )

ರಟ್ಟ ಲಕ್ಷ್ಮೀದೇವ ಮತ್ತು ಕಾರ್ತವೀರ್ಯ ಇವರ ಪ್ರತಾಪದ ವರ್ಣನೆಯಲ್ಲಿ ಮತ್ತು ಲಕ್ಷ್ಮೀದೇವನ ಹೆಂಡತಿ ಚಂದ್ರಿಕಾದೇವಿಯ ಸೌಂದರ್ಯ, ಶೀಲ, ಔದಾರ್ಯಗಳ ವರ್ಣನೆಯಲ್ಲಿ ಕವಿ ಅಪ್ರತಿಮವಾದ ಕಲ್ಪನಾವಿನ್ಯಾಸದಿಂದ ರಸಿಕರ ಮನವನ್ನು ಸೂರೆಗೊಳ್ಳುತ್ತಾನೆ.

### ರಟ್ಟ ಲಕ್ಷ್ಮೀದೇವನ ಆಳಿಕೆ

ಕಂ|| ಅಪರಾಧಿಗಳನೆ ನೋಳ್ಪುದು
ನೃಪಾಳಕರ ದಣ್ಡನೀತಿ ಬಾಪ್ಪು ಘನಾಜ್ಞಾ-
ಧಿಪನಾಗೆ ಲಕ್ಷ್ಮಭೂವಿಭು-
ವಪರಾಧಂ ದಣ್ಡಮೆಂಬಿವಿಲ್ಲೇಂ ಕೃತಿಯೋ ||೪೬೫||

### ಚಂದ್ರಿಕಾದೇವಿಯು ಕೊಟ್ಟು ಕೊಟ್ಟು ಕಪ್ಪಾದ ತುದಿಬೆರಳು

ಚಂ|| ನರಪತಿ ಲಕ್ಷ್ಮಿದೇವಸತಿ **ಚಂದಲದೇವಿ** ನಿಜೋದ್ಧೃಹಸ್ತದಿಂ
ಧರೆಗೆಸೆಯಲ್ಕೆ ಸಂಕ್ರಮಣದೊಳ್ ಕುಡೆ ಕಾಂಚನಮಂ ಬೆರಲ್ಗಳೊ-
ಳ್ಬೆರೆಸಿದ ಹೇಮಕಾಳಿಕೆಯು ಕರ್ಪ್ಪೆಸೆದಿರ್ಪ್ಪುದು ಬಾಹುಕಲ್ಪವ-
ಲ್ಲರಿಯ ತಳಪ್ರವಾಳದ ನಖಪ್ರಸವಕ್ಕೆಳಸಿರ್ದ್ದ ತುಂಬಿವೋಲ್ ||೪೬೬||

### ಕಾರ್ತ್ತವೀರ್ಯನ ಸೆರೆಯಲ್ಲಿ ವೈರಿಭೂಪರು

ಉ.ಮಾ|| ಈ ಕಮನೀಯವಾಜಿಚಯಮೀ ಕರಿಸಂಕುಳಮೀ ವಿಳಾಸಿನೀ-
ಲೋಕಮಿವೆಮ್ಮವಾ ಕವಿಯ ಕಾಳೆಗದೊಳ್ ಬಯಲಾಜಿಯೊಳ್ಪರಾ-
ನೀಕದ ಯುದ್ಧದೊಳ್ಪಿಡಿದನಿನ್ತಿವನೀ ಕಲಿ **ಕಾರ್ತ್ತವೀರ್ಯ್ಯನೆಂ**-
ದಾಕುಳಮಾಗಿ ನೋಡುವುದು ಬಂಧನಶಾಲೆಯೊಳಿರ್ದ್ದರಿಬ್ರಜಂ ||೪೬೭||

## ೯೯

**ಅಬಲೂರು,** **ಕ್ರಿ. ಶ. ೧೨೧೯**

**ಹಿರೆಕೆರೂರು ತಾಲೂಕು,** **ಯಾದವ ಸಿಂಘಣ**

ಧಾರವಾಡ ಜಿಲ್ಲೆ (ಎಪಿ. ಇಂ. ೫, ಪು. ೨೬೩)

ಮಾಚ, ಗೋಮ ಎಂಬ ಅಣ್ಣತಮ್ಮಂದಿರು ಹಗೆಗಳ ಕುದುರೆದಳದೊಡನೆ ಕಾದಿ ಮಡಿದುದನ್ನು ಹೇಳುವ ವೀರಶಾಸನವಿದು.

### ವೀರಭೂಮಿ ಅಬ್ಬಲೂರು

ಚಂ|| ಗಿಳಿಕುಳದಿಂ ಪಿಕಾವಳಿಯಿನೊಪ್ಪುವ ನಂದನದಿಂ ವಿಳಾಸದಿಂ
ಬೆಳಸಿದ ಗಂಧಶಾಳಿಯಿ ಶಿವಾಲಯದೋಳಿಯಿ ಭಾಳನೇತ್ರಪೂ-
ಜಿತಗೃಹದಿಂ ಬಳಾಧಿಕಕಳಾವಿದ ವೀರಸಮೂಹದಿಂದಿಳಾ-
ತಳದೊಳಗಬ್ಬಲೂರತಿವಿಚಿತ್ರತರಂ ನಿಜಮಾಗಲೊಪ್ಪುಗುಂ[1] ||೪೬೮||

### ಬಡಗಿಮಾಚ-ಗೋಮಂಗಳ ವೀರ

ವ|| ಬೀರಗವುಡನ ಬೆಸೆವರಂ ಬಡಗಿ ಕೇತೋಜನ ಮಕ್ಕಳು ಮಾಚಂ ಗೋಮಂಗಳು ಮಾಡಿದ ವೀರಮೆಂತೆಂದಡೆ,

ಕಂ || ಘಟ್ಟಿಸಿ ನೂಂಕಿದ ವಾಜಿಯ
ಥಟ್ಟಂ ಕಟ್ಟಾಳು ಬಡಗಿ ಮಾಚಂ ತಾಗಲ್
ನಿಟ್ಟಿಸಿ ಗೋಮನು ಇಸೆ ಪಡ-
ಲಿಟ್ಟುದು ತತ್ಕ್ಷಣದಿ ವೈರಿಬಳವೆನಿತನಿತುಂ ||೪೬೯||

ಸೋದರರಿಬ್ಬರ[2] ವೀರಂ
ಮೇದಿನಿಗಚ್ಚರಿಯಿದೆನಿಸಿ ಧುರದೊಳು ಪಲರಂ
ಕಾದಿ ತವೆ ಕೊಂದು ಸ್ವರ್ಗ್ಗ-
ಕ್ಕೋದಜ್ಜಸವೆಸೆಯೆ [3]ಮಾಚನುಂ ಆ ಗೋಮಂ[3] ||೪೭೦||

---

1. ಈ ಪದ್ಯದಲ್ಲಿ ಬರೆಹದ ದೋಷಗಳು ವಿಶೇಷವಾಗಿರುವುದರಿಂದ ಶಾಸನಮೂಲದ ಆ ಎಲ್ಲ ಪಾಠಗಳನ್ನು ಕೊಟ್ಟಿಲ್ಲ.
2. ಶಾ. ಮೂ. ಸೋದರರಿಬ್ಬವ
3. ಶಾ. ಮೂ. ಮಾಚನುಂ ಮಾ ಗೋಮನುಂ

## ೧೦೦

**ನಿಡುಗಲ್ಲುಬೆಟ್ಟ,** ಕ್ರಿ.ವ. ೧೨೩೨
**ಪಾವುಗಡ ತಾಲೂಕು,** **ಇರುಂಗೋಳ ಚೋಳ**
ತುಮಕೂರು ಜಿಲ್ಲೆ (ಎಪಿ. ಕ. ೧೨, ಪು. ೩೭೩)

**ಇರುಂಗೊಳನ ಎತ್ತಿದ ಕತ್ತಿ**

ಕಂ॥ ಕುಳಿಕನ ಲವಲವಿಕೆ ಲಯಾ-
ನಳನುರುವಣೆ ಸಿಡಿಲ ಸಡಗರಂ ಮಿಟ್ತುವಿನ-
ಗ್ಗಳಿಕೆ ಜವನುಜ್ಜುಗಂ ಮಾ-
ರ್ಪ್ಪೊಳೆವುದಿರುಂಗೋಳನಾಜಿಗೆತ್ತಿದ ಬಾಳೊಳ್ ॥೪೭೧॥

**ನಿಡುಗಲ್ಲು**

ಕಾಳಾಂಜನವೆಂಬುದಿರುಂ-
ಗೋಳನ ಗಿರಿದುರ್ಗ್ಗವಸ್ತದಭ್ರಂಕಷತಾ-
ಭೀಳತರಚೂಳವದಱು-
ತ್ತಾಳತೆಯನೆ ನೋಡಿ ಧಾತ್ರಿ ನಿಡುಗಲ್ಲೆನ್ಗುಂ[1] ॥೪೭೨॥

## ೧೦೧

**ನಿಡುಗಲ್ಲುಬೆಟ್ಟ,** ಕ್ರಿ. ವ. ೧೨೪೯
**ಪಾವುಗಡ ತಾಲೂಕು,** (ಎಪಿ. ಕ. ೧೨, ಪು. ೩೭೧)
ತುಮಕೂರು ಜಿಲ್ಲೆ

**ನಿಡುಗಲ್ಲು**

ಜಗದೀಶನಿರುಂಗೋಳಂ
ಸೊಗಯಿಸಿ ತಾನಿರ್ಪ್ಪ ದುರ್ಗ್ಗದಂಕಿತವದುವಂ
ನೆಗೆದು ಗಿರಿಶಿಖರದುಚ್ಚಂ
ಮುಗಿಲಂ ಮುಟ್ಟಿದೊಡೆ ಪೊಡವಿ ನಿಡುಗಲ್ಲೆಂಗುಂ ॥೪೭೩॥
ಇಕ್ಷುರಸವೆನಿಪ ಜಲದಿಂ
ಪ್ರಕ್ಷಾಳಿತವಸ್ತ್ರದಿಂ ಸುಪುಷ್ಪೋತ್ಕರದಿಂ

1. ನಿಡುಗಲ್ಲೆನ್ದುಂ

ಲಕ್ಷ್ಮಗುಣಿಯೆನಿಪ ನಿಡುಗ-
ಲ್ಲೀಕ್ಷಿಸಿ ಪೊಗಳ್ವವನ ಮನಕೆ ನಾಲಗೆಗಧಿಕಂ ॥೪೭೪॥

## ೧೦೨

**ಬೆಣ್ಣೆಗುಡ್ಡ, ಕ್ರಿ. ಶ. ೧೨೬೫**
**ಬೇಲೂರು ತಾಲೂಕು, ಹೊಯ್ಸಳ ವೀರನರಸಿಂಹ**
ಹಾಸನ ಜಿಲ್ಲೆ (ಎಪಿ. ಕ. ೧೫, ಪು. ೮೯)

**ಸೋಮೇಶ್ವರನ ಓಲಗದ ಹೊರಬಾಗಿಲಲ್ಲಿ**

ಈ ದೊರೆಯನ್ನು ಕಾಣುವುದಕ್ಕಾಗಿ ನಾನಾದೇಶಗಳ ಅರಸರು ಸರದಿ ಹಚ್ಚಿಕೊಂಡು ನಿಲ್ಲಬೇಕಾಗಿದೆ. ಆ ಸಂದರ್ಭದ ದರ್ಪದ ಕಾವಲಿನ ರೀತಿ ಇಲ್ಲಿ ವರ್ಣಿತವಾಗಿದೆ

ಮ.ಸ್ರ.॥ ಹೊಗು ಬಾ ಹಮ್ಮೀರ, ಹೋ ಗೂರ್ಜ್ಜರ ಹೆಱ ತೆಗೆ, ನಿಂದಲ್ಲೆ ನಿಲ್ಲಂಧ್ರ, ನಿನ್ನೋ-
ಲಗವೇಳಿತ್ತಿತ್ತ ಸಾಮ್ರ್ಯಾಳವ, ಕುಡು ತೆಱಹಂ ಲಾಳ ಗೌಳಂಗೆ, ಮಾಣ್ಮಾ-
ತುಗಳಂ ಬಂಗಾಳ, ದೇವಂ ಬೆಸಸುವ ನುಡಿಯಂ ವಂಗ ಕೇಳೆಂಬರೆತ್ತಂ
ನೆಗಳ್ದೀ **ಸೋಮೇಶ**ನಾಸ್ಥಾನದೊಳರಿಬಿರುದಕ್ಷತ್ರರಂ ವೇತ್ರಹಸ್ತರ್ ॥೪೭೫॥

## ೧೦೩

**ಮಾವನೂರು, ಕ್ರಿ. ಶ. ೧೨೮೩**
**ಹೊಳೆನರಸೀಪುರ ತಾಲೂಕು, ಹೊಯ್ಸಳ ವೀರನರಸಿಂಹ**
ಹಾಸನ ಜಿಲ್ಲೆ (ಎಪಿ. ಕ. ೧೫, ಪು. ೧೪೧)

ಚಿಕ್ಕವೊಡೆಯ ಅಪ್ಪರಸಯ್ಯನೂ ಆತನ ಹೆಂಡತಿಯೂ ಮಾವನೂರಲ್ಲಿ ಕಟ್ಟಿಸಿದ ದೇವಾಲಯಗಳಿಗೆ ವೀರನರಸಿಂಹನು ದತ್ತಿಗಳನ್ನು ಕೊಟ್ಟನೆಂದು ಹೇಳುವ ಈ ಶಾಸನದಲ್ಲಿ, ಶಿವಶರಣರಾದ ಪರ್ವತಯ್ಯ ಮತ್ತು ಆತನ ಮಗ ಅಪ್ಪಯ್ಯದೇವರಸರ ಚಾರಿತ್ರ್ಯದ ವರ್ಣನೆ ವಿಸ್ತಾರವಾಗಿ ಬಂದಿದೆ. ಶಾಸನ ಸಾಹಿತ್ಯದಲ್ಲಿ ಅಪರೂಪವಾಗಿ ದೊರೆಯುವ ಗದ್ಯದ ಮಾದರಿಯೆಂದು ಶ್ರೀಶೈಲ ಮಲ್ಲಿಕಾರ್ಜುನನ ಹಾಗೂ ಭಕ್ತ ಅಪ್ಪಯ್ಯ ದೇವರಸರ ವರ್ಣನಾಭಾಗವನ್ನು ಆಯ್ದು ಕೊಟ್ಟಿದೆ.

**ಶ್ರೀಪರ್ವತ ಮಲ್ಲಿಕಾರ್ಜುನ**

ಸ್ವಸ್ತಿ. ಸಮಸ್ತ ಸಮುದ್ರಮುದ್ರಿತಮಪ್ಪ ಧರಾಕಾಂತೆಯ ಶಿರಃಕಂಜದಂತೆ, ಪುರತ್ರಯವಿಪಿನದಹನದಾವಾನಳನ ಸುಕೃತಸರ್ವ್ವಸ್ವದ ಗವಸಣಿಗೆಯಂತೆ, ಸಕಳ ಭಕ್ತರ ಪುಣ್ಯಸಾಲೆಯಂತೆ, ಮುಕ್ತ್ಯಂಗನೆಯ ತಾಯ್ಮನೆಯಂತೆ, ಧರ್ಮ್ಮಾರ್ತ್ಥಕಾಮ

ಮೋಕ್ಷಂಗಳಪ್ಪ ಚತುರ್ವ್ವಿಧಪುರುಷಾರ್ತ್ಥಂಗಳ ಜನ್ಮಕ್ಷೇತ್ರದಂತೆ ಮೆಱೆವ ಶ್ರೀಪರ್ವ್ವತದ ಮೇಲೆ ಮೂಜಗಕೆ ಸೋಜಿಗಮಪ್ಪೇಜೆಯಿಂ ರಾಜಿಸುವ ರಾಜೇಂದ್ರ ಚೂಡಾಮಣಿಯು, ಮನುಮಥಮತ್ತೇಭ ಮೃಗಾಧಿಪನ, ಕೀನಾಶಬಳಬಳಾಹಕ ಮಹಾಬಳನ, ಶಾರ್ದ್ದೂಲದೈತ್ಯಧ್ವಾಂತ ಪ್ರದ್ಯೋತನನ, ದರ್ಪ್ಪಿಷ್ಟ ಕುಂಜರಾಸುರ-ಮರಾಳ ಹರುಷ ವಿಳಯಜಳದ ಗರ್ದ್ದನನ, ಸುರಸರಿತ್ಸಮುದ್ಭೂತ ಲೋಲತರ ಕಲ್ಲೋಲ ಮಾಲಾಸಂಘಟ್ಟಿತ ಜಟಾಜಾಳನ, ಲೋಕಾಲೋಕ ಚೇತನತರ ವಾತ-ಪಿತ್ಥಬ್ರಾತನೂತನಾಭರಣನ, ಶ್ರೀಪರ್ವ್ವತಾಧೀಶ್ವರನಪ್ಪ ಮಲ್ಲಿಕಾರ್ಜ್ಜುನನ ಕಾರುಣ್ಯಕಾಂತಿ ಕಾಯಮಂ ತಳೆವಂತೆ ದಕ್ಷಿಣ ದಿಶಾಭಾಗದೊಳು ಮೆಱೆವ **ಶೀವರ**ವೆಂಬ ಮಹಾಗ್ರಾಮದೊಳು[1] ***

## ಅಪ್ಪಯ್ಯದೇವರಸರಿಗೆ ಉಪದೇಶ

ಶಿವನ ಉಭಯನೇತ್ರದಿಂ ಚಂದ್ರಸೂರ್ಯ್ಯರೊಗೆದಂತೆ, ಪರ್ವ್ವತಯ್ಯನು-ಭಯವಹ ಕಾರುಣ್ಯಕಟಾಕ್ಷದಿಂದುದಯಿಸಿದ **ಅಪ್ಪಯ್ಯದೇವರಸರಂ** ಕಂಡು ಕಾರುಣ್ಯಂ ಮಾಡಲುವೇಡಿ, ಚಂದ್ರಂಗೆ ಬೆಳುದಿಂಗಳಂ, ಬೆಳುದಿಂಗಳಿಂಗೆ ಪರಿಮಳಮಂ, ಪರಿಮಳಕ್ಕೆ ಸವಿಯಂ, ಸವಿಗೆ ರೂಪಂ, ರೂಪಿಂಗೆ ಸೌಂದರ್ಯ್ಯಮಂ ಕೊಡುವಂತೆ ಉಪದೇಶಂ ಮಾಡೆ, ಕೈಕೊಂಡ ಅಪ್ಪಯ್ಯದೇವರಸರು ಪುಟವಿಟ್ಟ ಪುಣ್ಯಂ ಪುರು-ಷಾಕಾರಃಾದಂತೆ, ಶಾಂತಿ ಸಾಕಾರವೆತ್ತಂತೆ, ಪರಮಾರ್ತ್ಥಂ ಶರೀರವಡದಂತೆ, ಭಕ್ತಿ-ಜ್ಞಾನಂ ಸಂಸಾರವಂ ಸವಿವಂತೆ ಮೆಱವುತ್ತೆ, ಲೋಭವಡಿಯಿಡದ ಕರಪಲ್ಲವಂಗಳ, [2]ಅಮೃತವಂಕುರಿಸದ ರಸನಾಪ್ರದೇಶದ, ಸಂಸೃತಿ ಸರಸವಾಡದ ಚರಿತಶುದ್ಧಿಯ, ಕಾಮನ ಡಾಮರಕೊಳಸೋರದ ಮನದ ಬಿನದದ, ಮಾಯೆಯಾಜ್ಞೆಯನುಲ್ಲಂಘಿಸಿದ ಚಿತ್ತವೃತ್ತಿಯ, ಶಬ್ದಸ್ಪರುಶರೂಪುರಸಗಂಧಾದಿ ಭೋಗಕ್ಕೆಳಸದ ಕರಣಾವಳಿಯ ಮಹಾಮಹಿಮರೆನಿಸುವ ಅಪ್ಪಯ್ಯದೇವರಸರು, ತಿಲಮಧ್ಯದೊಳಿರ್ಪ್ಪ ತೈಲದಂತೆ, ಕಾಷ್ಠಮಧ್ಯದೊಳಿಪ್ಪ ಅಗ್ನಿಯಂತೆ, ಜಲಮಧ್ಯದೊಳಿರ್ಪ್ಪ ಕಮಳದಂತೆ, ತಾವು ಮಾನುಷಚರಿತರಪ್ಪುದಱಿಂ ಸಂಸಾರವಂ ಸೋಂಕದೆ, ಅಣೋರಣೀಯಾಂ ಮಹತೋ ಮಹೀಯಾಂ ಎಂಬ ಶ್ರುತಿಯುಂಟಾಗಿ ಇಱುಹೆ ಮೊದಲಾದ ಪರಮಾಣು-ವಿನ ನೋವಂ ಸೈರಿಸದೆ, ಇಚ್ಛಾಶಕ್ತಿಜ್ಞಾನಶಕ್ತಿಕ್ರಿಯಾಶಕ್ತಿ ಉಳ್ಳ ಶಿವನ ಭಕ್ತ-ರಪ್ಪುದಱಿಂ ಉಭಯತನುವಿಂದನಂತವಾದ್ಯದಿಂ ಶಿವನಂ ಕೇಳಿಸುತಂ, ಅನವರತಂ ಶಿವನೊಳವಿರಳ ಪೂಜೆಯಂ ಮಾಡುತಂ, ಮೂಲೋಕಮಂ ತೀವಿದ ಶೈವಕೀರ್ತ್ತಿಯಂ ತಳೆದಪ್ಪಯ್ಯದೇವರಸರು ಸುಖದೊಳಿರೆಯಿರೆ. ಶಿವ ಶರಣು.[3] ***

---

1 ಮುಂದೆ ಪರ್ವತಯ್ಯನೆಂಬ ಭಕ್ತನ ಪರಿಚಯ ಬರುತ್ತದೆ.

2. ಅನೃತ ಎಂದಿರಬಹುದು

3. ಮುಂದೆ ಶಕವರ್ಷ, ಮಿತಿ, ದತ್ತಿ ಇತ್ಯಾದಿ ವಿಷಯಗಳನ್ನು ಹೇಳಿದೆ.

## ೧೦೪

**ಶ್ರವಣಬೆಳುಗೊಳ, ಚೆನ್ನರಾಯಪಟ್ಟಣ ತಾಲೂಕು, ಹಾಸನ ಜಿಲ್ಲೆ**

**ಕ್ರಿ. ಶ. ೧೩೬೮ ವಿಜಯನಗರದ ವೀರಬುಕ್ಕರಾಯ**

(ಎಪಿ. ಕ. ೨, ಪು. ೧೪೫)

### ವೀರ ಬುಕ್ಕರಾಯನ ಧರ್ಮಸಮದೃಷ್ಟಿ

ಒಮ್ಮೆ ಶ್ರೀವೈಷ್ಣವರಿಗೂ ಜೈನರಿಗೂ ವ್ಯಾಜ್ಯವಾಗಿ ಜೈನರಿಗೆ ಹಾನಿ-ತೊಂದರೆಗಳೊದಗಿದವು. ಜೈನರು ವೀರ ಬುಕ್ಕರಾಯನಲ್ಲಿಗೆ ದೂರನ್ನೊಯ್ಯಲು ಆತನು 'ಎರಡು ಧರ್ಮಗಳವರೂ ಒಂದು, ಭೇದವೆಣಿಸಲಾಗದು' ಎಂಬುದಾಗಿ ಹೇಳಿ, ಎರಡೂ ಪಂಗಡಗಳ ಧುರೀಣರನ್ನು ಕೈಕೈ ಹಿಡಿಸಿ ಸ್ನೇಹವನ್ನುಂಟುಮಾಡಿದನು. ಆ ಒಡಂಬಡಿಕೆಯನ್ನು ಶಿಲಾಶಾಸನಮಾಡಿ ನಿಲ್ಲಿಸಲಾಗಿದೆ. ವಿಜಯನಗರದ ರಾಯರ ಸಕಲಧರ್ಮ ಸಮದೃಷ್ಟಿಗೆ ಸಾಕ್ಷಿ ಶಾಸನ ಇದೆನ್ನಬಹುದು. ಇದರಲ್ಲಿ ಉಭಯ ಸಮಯವೂ ಕೂಡಿ ಕಲ್ಲೆಹದ ಬುಸುವಿಸೆಟ್ಟಿಗೆ ಸಂಘನಾಯಕಪಟ್ಟವನ್ನು ಕಟ್ಟಿದರೆಂಬ ಮಾತೂ ಗಮನಾರ್ಹವಾಗಿದೆ.

ಸ್ವಸ್ತಿ. ಶ್ರೀಮನ್ಮಹಾಮಂಡಳೇಶ್ವರಂ ಅರಿರಾಯವಿಭಾಡ ಭಾಷೆಗೆ ತಪ್ಪುವ ರಾಯರ ಗಂಡ **ಶ್ರೀವೀರಬುಕ್ಕರಾಯನು** ಪೃಥ್ವೀರಾಜ್ಯವ ಮಾಡುವ ಕಾಲದಲ್ಲಿ ಜೈನರಿಗೂ [1]ಭಕ್ತರಿಗೂ [2]ಸಂವಾಜವಾದಲ್ಲಿ, ಆನೆಯಗೊಂದಿ ಹೊಸಪಟ್ಟಣ ಪೆನುಗುಂಡೆ ಕಲ್ಲೆಹದಪಟ್ಟಣವೊಳಗಾದ ಸಮಸ್ತ ನಾಡ ಭವ್ಯಜನಂಗಳು ಆ ಬುಕ್ಕರಾಯಂಗೆ, ಭಕ್ತರು ಮಾಡುವ ಅನ್ಯಾಯಂಗಳನು ಬಿನ್ನಹಂ ಮಾಡಲಾಗಿ, ಕೋವಿಲ್ ತಿರುಮಲೆ ಪೆರುಮಾಳ್ ಕೋವಿಲ್ ತಿರುನಾರಾಯಣಪುರ ಮುಖ್ಯವಾದ ಸಕಳಾಚಾರ್ಯ್ಯರು, ಸಕಳಸಮಯಿಗಳು, ಸಕಳಸಾತ್ತ್ವಿಕರು, ಮೋಷ್ಟಿಕರು, ತಿರುಪಣಿ-ತಿರುವಿಡಿ-ತಣ್ಣೀರವರು, ನಾಲ್ವತ್ತೆಂಟು ಜನಂಗಳು, ಸಾವಂತಬೋವಕ್ಕಳು, ತಿರಿಕುಲ ಜಾಂಬುವಕುಲವೊಳಗಾದ ಹದಿನೆಂಟು ನಾಡ ಶ್ರೀವೈಷ್ಣವರ ಕೈಯಲು ಮಹಾರಾಯನು ವೈಷ್ಣವ ದರ್ಶನಕ್ಕೆಯೂ ಜೈನದರ್ಶನಕ್ಕೆಯೂ ಭೇದವಿಲ್ಲವೆಂದು, [3-3] ಜೈನರ ಕೈವಿಡಿದು ಕೊಟ್ಟು, ಈ ಜೈನದರ್ಶನಕ್ಕೆ ಪೂರ್ವ್ವ ಮರಿಯಾದೆಯಲು ಪಂಚಮಹಾವಾದ್ಯಂಗಳೂ ಕಳಶವೂ ಸಲುವುದು. (ಜೈನದರ್ಶನಕ್ಕೆ ಭಕ್ತರ ದೆಸೆಯಿಂದ ಹಾನಿವೃದ್ಧಿಯಾದರೂ ವೈಷ್ಣವ ಹಾನಿವೃದ್ಧಿಯಾಗಿ ಪಾಲಿಸುವರು.) ಈ ಮರ್ಯ್ಯಾದೆಯಲು ಎಲ್ಲಾ ರಾಜ್ಯದೊಳಗುಳ್ಳಂತಹ ಬಸ್ತಿಗಳಿಗೆ ಶ್ರೀವೈಷ್ಣವರು ಶಾಸನವ ನಟ್ಟು ಪಾಲಿಸುವರು. ಚಂದ್ರಾರ್ಕ್ಕಸ್ಥಾಯಿಯಾಗಿ ವೈಷ್ಣವ ಸಮಯವು ಜೈನದರ್ಶನವ ರಕ್ಷಿಸಿಕೊಂಡು ಬಹೆವು. ವೈಷ್ಣವರೂ ಜೈನರೂ ಒಂದು, ಭೇದವಾಗಿ ಕಾಣಲಾಗದು. ಶ್ರೀತಿರುಮಲೆಯ

1. ಭಕ್ತರು : ಶ್ರೀವೈಷ್ಣವರು
2. ಸಂವಾಜ : ಸಂವ್ಯಾಜ್ಯ (?)

3-3. ಇಲ್ಲಿ 'ರಾಯನು ವೈಷ್ಣವರ ಕೈಯಲು' ಎಂಬ ಮಾತು ಮತ್ತೆ ಬಂದಿದೆ.

ತಾತಯ್ಯಂಗಳು ಸಮಸ್ತ ರಾಜ್ಯದ ಭವ್ಯಜನಂಗಳ ಅನುಮತದಿಂದ ಬೆಳುಗುಳದ ತೀರ್ತ್ಥದಲ್ಲಿ ವೈಷ್ಣವ ಅಂಗರಕ್ಷೆಗೋಸುಕ ಸಮಸ್ತ ರಾಜ್ಯದೊಳಗುಳ್ಳಂತಹ ಜೈನರ ಬಾಗಿಲುಗಟ್ಟಳೆಯಾಗಿ ಮನೆಮನೆಗೆ ವರ್ಷಕ್ಕೆ ೧ ಹಣ ಕೊಟ್ಟು, ಆಯೆತ್ತಿದ ಹೊನ್ನಿಂಗೆ ದೇವರ ಅಂಗರಕ್ಷೆಗೆಯಿಪ್ಪತ್ತಾಳನು ಸಂತವಿಟ್ಟು ಮಿಕ್ಕ ಹೊನ್ನಿಂಗೆ ಜೀರ್ಣ್ನಜಿನಾಲಯಂಗಳಿಗೆ ಸೊಧೆಯನಿಕ್ಕುವುದು.[1] ಈ ಮರಿಯಾದೆಯಲು ಚಂದ್ರಾರ್ಕ್ಕರುಳ್ಳನ್ನಂ ತಪ್ಪಲೀಯದೆ ವರ್ಷವರ್ಷಕ್ಕೆ ಕೊಟ್ಟು ಕೀರ್ತಿಯನೂ ಪುಣ್ಯವನೂ ಉಪಾರ್ಜಿಸಿ ಕೊಂಬುದು. ಈ ಮಾಡಿದ ಕಟ್ಟಳೆಯನು ಆವನೊಬ್ಬನು ಮೀಱಿದವನು ರಾಜದ್ರೋಹಿ, ಸಂಘಸಮುದಾಯಕ್ಕೆ ದ್ರೋಹಿ***

[2]ಕಲ್ಲೆಹದ ಹರ್ವ್ವಿಸೆಟ್ಟಿಯ ಸುಪುತ್ರ ಬುಸುವಿಸೆಟ್ಟಿ ಬುಕ್ಕರಾಯರಿಗೆ ಬಿನ್ನಹಂ ಮಾಡಿ ತಿರುಮಲೆಯ ತಾತಯ್ಯಂಗಳ ಬಿಜಯಂಗೈಸಿ ತಂದು ಜೀರ್ಣ್ನೋದ್ಧಾರವ ಮಾಡಿಸಿದರು. ಉಭಯ ಸಮಯವೂ ಕೂಡಿ ಬುಸುವಿಸೆಟ್ಟಿಯರಿಗೆ ಸಂಘನಾಯಕಪಟ್ಟವ ಕಟ್ಟಿದರು.[2]

## ೧೦೫

**ಕೈಕಿಣಿ,**
**ಭಟಕಳ ಪೇಟಾ,**
ಕಾರವಾರ ಜಿಲ್ಲೆ

**ಕ್ರಿ. ಶ. ೧೩೯೮**
**ವಿಜಯನಗರದ ವೀರಹರಿಹರ**
( ಕ. ಇ. ೧, ಪು. ೮೪ )

### ಜಕ್ಕಣ್ಣನಾಯಕನ ವೀರಗಲ್ಲು[3]

ವ|| ಶ್ರೀಮದ್ರಾಯರಾಯ ರಾಜಗುರುರಾಯ ವಾದಿಪಿತಾಮಹನುಂ ಶ್ರೀ **ವೀರಹರಿಹರರಾಯ** ರಾಜ್ಯವ ಪ್ರತಿಪಾಲಿಸುವ ಬಹುಧಾನ್ಯ ಸಂವತ್ಸರದ ಪುಷ್ಯಶುದ್ಧ ಪಾಡ್ಯ ಗುರುವಾರದಲು, ಮಹಾಪ್ರಧಾನಿ ಮಂಗಪ ದಣ್ಣಾಯಕರು ತುಳು ರಾಜ್ಯದ ಮೇಲೆ ದಂಡೆತ್ತಿ ಬಂದು ಬಿದಿರೆಯಲು [4]ಪಾಳೆಯ ಬಿಟ್ಟು, ಚವಟರ ಕೆಡಹಿ ತಾವು

1. ಶಾ. ಮೂ: ನಿಕೂದು

2–2. ಶಾಸನಕ್ಕೆ ಪೂರಕವಾದ ಈ ವಿಷಯ ಕಲ್ಲಿನ ಮೇಲ್ಗಡೆಯಲ್ಲಿ ಕೊರೆದಿದೆ.

3. ಅಲ್ಪಸ್ವಲ್ಪ ವ್ಯತ್ಯಾಸದೊಡನೆ ಇದೇ ವಿಷಯವನ್ನು ನಿರೂಪಿಸುವ ಇನ್ನೊಂದು ವೀರ ಶಾಸನ ಇದೇ ಊರಲ್ಲಿದೆ. ಈ ಆಯ್ದ ಶಾಸನವು ಹೆಚ್ಚು ವಿವರಗಳನ್ನೂ ಕೊನೆಯಲ್ಲೆರಡು ಪದ್ಯಗಳನ್ನೂ ಒಳಗೊಂಡಿದೆ. ಇದರಲ್ಲಿ ಅರ್ಥ ಸಂದಿಗ್ಧವಾಗಿರುವೆಡೆಯಲ್ಲಿ ವಾಚಕರಿಗೆ ನೆರವಾಗುವ ದೃಷ್ಟಿಯಿಂದ ಇನ್ನೊಂದರ ಪಾಠಾಂತರಗಳನ್ನು ಅಡಿಟಿಪ್ಪಣಿಯಲ್ಲಿ ಕೊಟ್ಟಿದೆ.

4. ಪಾಳೆಯ ಎಂಬುದು ಇನ್ನೊಂದು ಶಾಸನದಿಂದ ತೆಗೆದುಕೊಂಡದು

ತಿರಿಗಿ ಪಾಳೆಯವೆತ್ತಿ ಬಹಲ್ಲಿ, ಶ್ರೀಮನುಮಹಾಮಂಡಳೇಶ್ವರಂ ನಗಿರೆಯ ಹಯಿವರಸ ಒಡೆಯರ ಮಂದಿಯನು, ಹಿಂದಕ್ಕೆ ನೀವು ಆತು ಬನ್ನಿಯೆಂದು ಮಂಗಪ್ಪ ದಣ್ನಾಯ-ಕರು ನಿರೂಪವ ಕೊಟ್ಟು ತೆಗೆದು ಬಾಹಲ್ಲಿ, [1] ನಗಿರ ರಾಜಗುರು ಬೊಮ್ಮಣ್ಣನಾಯಕನ ಮಗ ಗಾವಣಿಗರ ಬಳಿಯ ಕಟೆದ [ಹಿಱಿ]ಮುಖದ ತೋರಣ ಅನ್ಯಾಯತದ ಬಿರಿದು ಮೂಱು ಕಂ[ಡ] ಗೂಳಿಯ ಹರಿಗೆಯ ಹಿಡಿದು ಜಕ್ಕಣ್ಣನಾಯಕ ನಿಂದಲ್ಲಿ, ಚವಟರ ಅಳಿಯ ಕೂಡಿಕೊಂಡು ಬಂದು ತನ್ನ ಮೇಲೆ ಬಿದ್ದಲ್ಲಿ, ಆತನ ಹೊಯಿದು ಕೆಡಹಿ ಆತನ ಮೆಟ್ಟಿಕೊಂಡು ಒಂಬತ್ತು ಮಂದಿಯ ಹಾಯ್ದು, ಮಂಗಪ ದಣ್ನಾಯಕರ ದಳವನು ಕಾಯ್ದು ತಾನು ಸ್ವರ್ಗಸ್ಥನಾದಲ್ಲಿ, ಆತನ ತಮ್ಮ ತಮ್ಮನಾಯ್ಕನು ತಂದೆಮಕ್ಕಳಿಬ್ಬರಶೇಷ[2] ಕೀರ್ತಿಯನು ಮಾಡಿ ಅವರ ವೀರಗಲ್ಲನು ಸ್ಥಾಪಿಸಿದರು.[3]

ಚಂ|| ತುಳುಕಟಕಂ ವಿರೋಧಮನೊಡಚ್ಚ್ರಲು ಮಂಗಪ ದಂಡನಾಥನುಂ
ಹಳಚಲು ಹೈವ ಭೂಭುಜನು ಪೇಳಲು ಪೋಗಿಯೆ ಕಾದಿ ಗೆಲ್ದನುಂ
ಬಳೆಯುತನಸ್ತ್ರ[4] ಶಸ್ತ್ರನಿಪುಣಂ ಕಲಿಯೆಂದು ಸುರಾಂಗನಾಜನಂ
ತಳದರನಂತಭೋಗಿಯನು ಜಕ್ಕಣನಂ ಪರಮೋತ್ಸವಂಗಳಿಂ ||೪೭೬||

ಕಂ|| ಕಕ್ಕಡೆಯ ಮೊನೆಯೊಳಾಂತರ-
ನಿಕ್ಕಿದ ಜವನುಂಡು ತೇಗುವಂತಿರೆ ಬೇಗಂ
ರಕ್ಕಸ ಕಾಳೆಗದೆಡೆಯಲು
ಜಕ್ಕಣನೆನುತಿಕ್ಕು ಸಕಳಲೋಕಾಲೋಕಂ ||೪೭೭||

---

1. ನಗಿರರಾಜಗುರು ಎಂಬಲ್ಲಿಂದ ಮುಂದಿನ ವಿಷಯ ಇನ್ನೊಂದು ವೀರಗಲ್ಲಿನಲ್ಲಿ ಹೀಗಿದೆ:
ಗಾವಣಿಗರ ಬಳಿಯ ರಾಜಗುರು ಜಕ್ಕಣ್ಣನಾಯಕನ ಮಗ ಹೊಲೆಯ ಬಿಳಿಯ ಬಿ[ರಿ]ದು ತಿಂಗಬಕಕಡೆಯ ಮೂಱುಕಂ ನಾಗೂಜಿಯ ಹರಿಗೆಯ ಹಿಡಿದು ತಮ್ಮನಾಯಕ ತಂದೆಯ ಸಂಘಾತ ತಿರಿಗಿ ನಿಂದು, ಚವಟರ ಅಳಿಯ ಕೂಡಿಕೊಂಡು ಬಂದು ಹಾಯಿದಲಿ, ತಂದೆಯ ಸಂಘಾತ ಹಾಯಿದು ಹಾಯಿಸಿಕೊಂಡು ತಾನು ತಂದೆಯ ಸಂಘಾತ ಸ್ವರ್ಗಸ್ಥನಾದಲ್ಲಿ, ಆತನ ಕಿಱಿಯ ತಂದೆ ತಮ್ಮನಾಯಕನು ಆತನ ತಮ್ಮ ಬೊಮ್ಮಣ್ಣನಾಯಕನ ಕೂಡಿಕೊಂಡು ಆತನಱಿದ ಕಿತ್ತಿ(ಕೀರ್ತಿ?) ಯನ್ನು ಮಾಡಿ, ಆತನ ವೀರಗಲ್ಲನು ಸ್ಥಾಪಿಸಿದನು.

2. ಶಾ. ಮೂ.: ಸೇ[ಸ]

3. ಎರಡೂ ಶಾಸನಗಳನ್ನು ಅಳವಡಿಸಿಕೊಂಡು ಅರ್ಥಮಾಡಿದಾಗ, ಜಕ್ಕಣನ ತಮ್ಮ ಮತ್ತು ಮಗ ಇಬ್ಬರ ಹೆಸರೂ ತಮ್ಮನಾಯಕ ಎಂದಿದ್ದಿತೆಂದೂ ಮಗ ತಮ್ಮನಾಯಕನು ಚವಟರ ಅಳಿಯ ಕೂಡಿಕೊಂಡು ತಂದೆ ಜಕ್ಕಣನ ಮೇಲೆ ತಿರಿಗಿಬಿದ್ದನೆಂದೂ, ತಂದೆ ಮಕ್ಕಳಿಬ್ಬರೂ ಕಾಳೆಗದಲ್ಲಿ ಮಡಿದರೆಂದೂ ತೋರುತ್ತದೆ.

4. ಶಾ. ಮೂ. : ನಸ್ತ್ರ ಎಂಬುದಿಲ್ಲ.

## ೧೦೬

**ಕುಪ್ಪಟೂರು,** **ಕ್ರಿ. ವ. ೧೪೦೮**

**ಸೊರಬ ತಾಲೂಕು,** **ವಿಜಯನಗರದ ದೇವರಾಯ**

ಶಿವಮೊಗ್ಗ ಜಿಲ್ಲೆ (ಎಪಿ. ಕ. ೮, ಭಾ. ೨, ಪು. ೧೫೭)

### ವಿದ್ಯಾಧನ ಜನ್ಮಸ್ಥಾನ ಚಾರು ಕರ್ಣಾಟದೇಶ

ಮ. ಸ್ರ॥ ಜಿನಧರ್ಮ್ಮಾವಾಸವಾದತ್ತಮಳವಿನಯದಾಗಾರವಾದತ್ತು ಪದ್ಮಾ-
ಸನನಿರ್ಪ್ಪಾ ಸದ್ಮವಾದತ್ತತಿವಿಶದಯಶೋಧಾಮವಾದತ್ತು ವಿದ್ಯಾ-
ಧನ ಜನ್ಮಸ್ಥಾನವಾದತ್ತಮತರದ ಗಂಭೀರಸದ್ಗೇಹವಾದ-
ತ್ತೆನಿಸಲ್ಕಿಂತುಳ್ಳ ನಾನಾಮಹಿಮೆಯೊಳೆಸೆಗುಂ **ಚಾರುಕರ್ಣ್ಣಾಟದೇಶಂ**॥

## ೧೦೭

**ಹಂಪಿ,** **ಕ್ರಿ. ವ. ೧೪೧೧**

**ಹೊಸಪೇಟೆ ತಾಲೂಕು,** **ವಿಜಯನಗರದ ದೇವರಾಯ**

ಬಳ್ಳಾರಿ ಜಿಲ್ಲೆ (ಸೌ. ಇಂ. ಇ. ೪, ಶಾ. ನಂ. ೨೬೭)

### ಕನ್ನಡಿಗ ಕುಲಕ್ಕೆ ರನ್ನಗನ್ನಡಿ ಲಕ್ಷ್ಮೀಧರಾಮಾತ್ಯ

ಮಾದರಸ–ಸಾಯಣರ ತಂಗಿ ಸಿಂಗಲೆಯ ಅಯ್ವರು ಮಕ್ಕಳಲ್ಲಿ ಲಕ್ಷ್ಮೀಧರನು ಹಿರಿಯ. ಇವನು ವಿಜಯನಗರದ ಪ್ರೌಢಪ್ರತಾಪ ದೇವರಾಯನ ಮಂತ್ರಿ. ಈ ಲಕ್ಷ್ಮೀಧರನು ಮಾಲ್ಯವಂತ ಪರ್ವತದ ತೆಂಕಣ ಪಕ್ಕದಲ್ಲಿದ್ದ ಅಕೃತ್ರಿಮವಾದ ಮಹಾಗುಹೆಯಲ್ಲಿ ಮಹಾಗಣಪತಿಯನ್ನು ಸ್ಥಾಪಿಸಿ, ಅದಕ್ಕೆ ದತ್ತಿಗಳನ್ನು ಬಿಟ್ಟ ಸಂಗತಿ ಈ ಶಾಸನದಲ್ಲಿ ಬಂದಿದೆ ಕವಿರಾಜನೆಂದು ಹೊಗಳಲ್ಪಟ್ಟ ಇವನು 'ನೀತಿವಾಕ್ಯಾಮೃತ', 'ರಾಮಾಯಣ', 'ಕೃಷ್ಣಲೀಲೆ' ಎಂಬ ಕಾವ್ಯಗಳನ್ನು ರಚಿಸಿರುವನೆಂದು ತೋರುತ್ತದೆ (ಪ. ೪೮೨). ಲಕ್ಷ್ಮೀಧರನು ಕೂಸಿದ್ದಾಗ ಅವನ ತಾಯಿ ಹಾಡಿ ಪಾಲೆರೆಯುತ್ತಾ, 'ಕೆಜ್ರೆಯಿಂ ಕಟ್ಟಿದ ...' ಎಂಬಿತ್ಯಾದಿಯಾದ ಮಾತುಗಳನ್ನು ಅವನ ಕಿವಿಯಲ್ಲಿ ಎರೆದಳೆಂಬ ಕವಿಕಲ್ಪನೆ (ಪ. ೪೮೧) ತುಂಬ ಮನೋಹರವಾಗಿದೆ. ತಾಯಿಯ ಆ ಹಾರಯಿಕೆಯಲ್ಲಿ ಆಗಿನವರ ಧಾರ್ಮಿಕ ಸಾಂಸ್ಕೃತಿಕ ಭಾವನೆ ಒಡಮೂಡಿದೆ.

ಮಧುರ ಎಂಬ ಕವಿ **ಈ ಶಾಸನವನ್ನು** ಬರೆದನೆಂದು ಕೊನೆಯ ಮೂರು ಪದ್ಯಗಳಿಂದ ತಿಳಿಯುತ್ತದೆ. ಅವುಗಳಲ್ಲಿ ಒಂದು ಕಂದಪದ್ಯವನ್ನು ಮಾತ್ರ ಇಲ್ಲಿ ಕೊಟ್ಟಿದೆ.

### ಮಹಾಗಣಪತಿ ಸ್ತುತಿ

ಚಂ॥ ತಣಿಯೆ ಸದಾಳಿಯಿಂ ಪೊರವ ದಾನಗುಣಂ ಪರಿಪೂ[ರ್ಣ] ಭದ್ರಲ-
ಕ್ಷಣಮುಳವಟ್ಟ ಶಕ್ತಿ ಸುಮನಃಸ್ತುತಮಾದನವದ್ಯ ವಿದ್ಯೆ ಸಂ-

ದಣಿಯುರಮಾವನೊಳ್ಕಿಗಳ್ದುದೆನ್ನವೊಲೆಂದು ಮುದಂ ಮಿಗಲ್ಮಹಾ-
ಗಣಪತಿ ಕೂ[ರ್ಮ್ಮೆ]ಯಿಂ ಕುಡುಗೆ ಲಕ್ಷ್ಮಣಮಂತ್ರಿಗಭೀಷ್ಟಸಿದ್ಧಿಯಂ ॥

## ಲಕ್ಷ್ಮೀಧರಾಮಾತ್ಯ

ಕಂ ॥ ಕನ್ನಡಿಗಕುಲಕೆ ರನ್ನದ
ಕನ್ನಡಿಯೆನೆ ವಿಶ್ವವಿದಿತವೃತ್ತಶ್ರೀಸಂ-
ಪನ್ನಂ **ಲಕ್ಷ್ಮೀಧರ**ದೇ-
ವಂ ನಿರ್ಮ್ಮಲನಾಗಿ ನೆಗಳ್ದನೊಳಗಂ **ಪೊಱಗಂ** ॥೪೮೦॥

ಮ. ವಿ॥ ಕೆಱೆಯಂ ಕಟ್ಟಿಸು ಬಾವಿಯಂ ಸವಸು ದೇವಾಗಾರಮಂ ಮಾಡಿಸ-
ಜ್ಜೆಱೆಯೊಳ್ಸಿಲ್ಕಿದನಾಥರಂ ಬಿಡಿಸು ಮಿತ್ರರ್ಗ್ಗಿಂಬುಕೆಯ್ ನಂಬಿದ-
ರ್ಗ್ಗೆಱೆವೆಟ್ಟಾಗಿರು ಶಿಷ್ಟರಂ ಪೊರೆಯೆನುತ್ತಿಂತೆಲ್ಲವಂ ಪಿಂದೆ [1]ತಾ-
ಯೆಱೆದಳ್ಪಾಲೆಱೆವಂದು ತೊಟ್ಟು ಕಿವಿಯೊಳ್ ಲಕ್ಷ್ಮೀಧರಾಮಾತ್ಯನಾ ॥

ಸ್ರ॥ ಸಾರಶ್ರೀ**ನೀತಿವಾಕ್ಯಾಮೃ**ತಪರಿಸರದೊಳ್ಪುಟ್ಟಿ ಮೆಯ್ಯ್ಗುಂದದಾನಂ-
ದಾರಾಮಾಸಂನ **ರಾಮಾಯಣ**ದೊಳಮುರ್ದ್ದ ತಳ್ತಾವಗಂ**[ಕೃ]ಷ್ಣಲೀಲಾ**-
ಧಾರಂ ತಾನಾಗಿ ನಾನಾ ಫಲಮನಿಳೆಗೆ ಬೀಱಿತ್ತು ಸಂಸಾರಸೌಖ್ಯಾ-
ಕಾರಂ ಸನ್ಮಂತ್ರಿ ಲಕ್ಷ್ಮೀಧರನುರುಕವಿತಾಕಲ್ಪವಲ್ಲೀವಿತಾನಂ ॥೪೮೨॥

ಮ. ವಿ॥ ಪದಪಿಂದಂ **ಕವಿರಾಜ ಲಕ್ಷ್ಮಣ**ನ ಕಾವ್ಯಾಲಾಪಮಂ[2] ಕೂರ್ತ್ತು ಕೇ-
ಳದೆ ಮುಂಪೋದರೆ ಪಾದ[ವೊಂ]ಮೆ ಕಿವಿಗೊಟ್ಟಿತ್ತಾನುಮಾರ್ಕೈದು ಸಂ-
ಮುದದಿಂ ಸೈತಿರದೋರು ದೂತಿಯುರ ಮಾತಂ ಮೀಱಿ ಕಣ್ಗೊಂಡು ನೋ-
ಡಿದ ಪೆಣ್ಗಳ್ಪದಿದಿದ್ದ ಪೂಗಣೆಯ ಪುಣ್ಣಿಂದಣ್ಣಿ ಪುಯ್ಯಲ್ಚರೇ ॥೪೮೩॥

ಗಣನಾಮಾತ್ರಮೆ ದೇವರಾಯನರನಾಥಾಸ್ಥಾನದೊಳ್ಮಾನವಾ-
ಗ್ರಣಿಗಳ್ಸೈತೆ ವಿಚಾರಿಪಾಗಳುಪಧಾಸಂಶುದ್ಧಿಯಿಂ ಬುದ್ಧಿಯಿಂ
ಗುಣದಿಂ ಗೌರವದಿಂ ಪೊದಳ್ದೆಸವ ಮುದ್ರಾಮಾತ್ಯ ಯೋಗಂಧರಾ-
ಯಣ ಚಾಣಕ್ಯ ಸುಮಂತ್ರರೊಳ್ದೊರೆಗೆವಂದಂ ಮಂತ್ರಿ ಲಕ್ಷ್ಮೀಧರಂ ॥

---

1 ಶಾ. ಮೂ: ತಾಂ ಯೆಱ್ರದಳ್

2. ಲಕ್ಷ್ಮೀಧರನು ಕಾವ್ಯವನ್ನು ಸೊಗಸಾಗಿ ಓದುವ ಗಮಕಿಯೂ ಆಗಿದ್ದನೆಂದು ತೋರುತ್ತದೆ.

# ೧೦೮

## ಮಲಪನಗುಡಿ, ಕ್ರಿ. ಶ. ೧೪೧೨

## ಹೊಸಪೇಟೆ ತಾಲೂಕು, ವಿಜಯನಗರದ ದೇವರಾಯ

ಬಳ್ಳಾರಿ ಜಿಲ್ಲೆ (ಸೌ. ಇಂ. ಇ. ೯, ಭಾ. ೨, ಪು. ೪೪೫)

## ಹೆಗ್ಗಡೆ ಸೋವಣ್ಣನ ಅರವಟ್ಟಿಗೆ

ಬುಳ್ಳೈನಾಯಕನ ಮಗ ಹೆಗ್ಗಡೆ ಸೋಮಣ್ಣನು ಅರವಟ್ಟಿಗೆ ಕಟ್ಟಿಸಿ, ಅದಕ್ಕಾಗಿ ಬಿಟ್ಟ ಮೂರು ವೃತ್ತಿಗಳ ವಿನಿಯೋಗದ ವಿವರ-ನಿಬಂಧನೆಗಳು ಇಲ್ಲಿ ಬಂದಿವೆ.

ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರ ಶ್ರೀವೀರಪ್ರತಾಪದೇವರಾಯ ಮಹಾರಾಯರು ರಾಜ್ಯಂ ಪಾಲಿಸುವಲ್ಲಿ, ಶ್ರೀಮದ್ಭಾಸ್ಕರಕ್ಷೇತ್ರದ[1] ಶ್ರೀವಿರೂಪಾಕ್ಷ ದೇವರ ಪಂಚಕೋಶದೊಳಗೆ ಬಿಸಿಲಹಳ್ಳಿಯ ಕಣಿವೆಯ ಬಡವಲಿಯ ಕಣಿವೆಯ ಹಾದಿ ಕೂಡಿದ ಮಹಾಪಥದಲ್ಲಿ, ಬುಳ್ಳೈನಾಯಿಕರ ಮಕ್ಕಳು ಹೆಗ್ಗಡೆ ಸೋವಣ್ಣ ಅಣ್ಣ-ಗಳು ಅಱವಟಗೆಯನಿಕ್ಕಿಸಿ, ಮಾಳಿಗೆ ಕೂಪಾರಾಮವನು ಮಾಡಿಸಿ, ಈ ಅಱವಟ-ಗೆಯ ಧರ್ಮ್ಮ ಆಚಂದ್ರಾರ್ಕ್ಕಸ್ಥಾಯಿಯಾಗಿ ನಡೆಯಬೇಕೆಂದು [ ಕೊಟ್ಟ ವೃತ್ತಿಗಳ ವಿವರ]

ಅಂತು ಈ ಮೂಱು ವೃತ್ತಿಯ ಬೆಳೆಯ ಆದಾಯವನು ಮೂಱು ಭಾಗವ ಮಾಡಿ, ಆ ಅಱವಟಗೆಯ ನಡಸುವ ವಿರುಪಣ್ಣಗಳಿಗೆ ಒಂದು ಭಾಗೆ; ಅಱವಟಗೆಗೆ ನೀರ ಹೊಯ್ವದಕ್ಕೆ. ಮರಗಳಿಗೆ ನೀರನೆಱವದಕ್ಕೆ, ಮಾಳಿಗೆ ಗಿಳಿಲಾದರೆ ಕಟ್ಟುವದಕ್ಕೆ, ಅಱವಟಗೆಗೆ ಗುಡಾಣ ಬಿಂದಿಗೆ ಕರಗ ಮೊಘೆಗಳ ಕ್ರಯಕ್ಕೆ, ಸುತ್ತಣ ಮನೆ ಅಣಿಮಾಡಿಕೊಂಡು ಇಹದಕ್ಕೆ, ಬಾವಿ ಹೂಳಿದರೆ ತೋಡುವದಕ್ಕೆ ಇಷ್ಟರ ಉಪಕ್ಷ-ಯಕ್ಕೆ ಮಿಕ್ಕ ೨ ಭಾಗೆ ಸಲುವುದು. ಈ ಮರಿಯಾದೆಯಲು ಆ ವಿರುಪಣ್ಣಗಳು ತನ್ನ ಮಕ್ಕಳು ಮಕ್ಕಳು[2] ತಪ್ಪದೆ ಅಱವಟಗೆಯ ಧರ್ಮ್ಮವನು ನಡಸುವರು. ನಡಸದೆ ಉಳಿದರೆಯು ಧರ್ಮಿಷ್ಟರಾಗಿಯಿದ್ದವರು ಈ ಶಾಸನವನು ಓದಿಸಿ ನೋಡಿ, ಆ ವೃತ್ತಿ-ಗಳನು ವಿಚಾರವಮಾಡಿ ಮುಂದೆ ಆ ಅಱವಟಗೆಯ ಧರ್ಮ್ಮವ ನಡಸುವಾತಗೆ ಒಂದು ಭಾಗೆ ಸಲುವುದು (ಸಲಿಸುವುದು), ಅಱ[ವಟ*]ಗೆಗೆ ನೀರನೆಱವರ ಜೀವಿತ ಮೊದ-ಲಾದ ಎಲ್ಲಾ ಉಪಕ್ಷಯಕ್ಕೆ ಆ ಉಳಿದ ಎರಡು ಭಾಗೆ ಸಲುವುದು (ಸಲಿಸುವುದು).

---

1. ಹಂಪಿಯು ಭಾಸ್ಕರಕ್ಷೇತ್ರವೆಂದು ಹೆಸರುಗೊಂಡಿದೆ.
2. ಮಕ್ಕಳು ಮಕ್ಕಳು : ಸಂತತಿಪರಂಪರೆಯಾಗಿ ಎಂದರ್ಥ

## ೧೧೯

**ಕೈಕಿಣಿ,** **ಕ್ರಿ. ಶ. ೧೪೧೯**

**ಭಟಕಳ ಪೇಠಾ,** **ವಿಜಯನಗರದ ದೇವರಾಯ**

ಕಾರವಾರ ಜಿಲ್ಲೆ (ಕ. ಇ. ೧, ಪು. ೯೩)

ಪಾಯಣಾರ್ಯನ ಜಿನಧರ್ಮಕಾರ್ಯಗಳನ್ನು ಈ ಶಾಸನ ವರ್ಣಿಸುತ್ತದೆ. ಕಾಯಿಕ್ಕಣೀ ವಿಷಯದ ಜನತಾವರ್ಣನೆಯ ಕಂದಪದ್ಯ ಗಮನಾರ್ಹವಾಗಿದೆ.

### ಪಾರ್ಶ್ವನಾಥಸ್ತುತಿ

ಸ್ರ.॥ ಶ್ರೀಮದ್ಘೋರೋಪಸರ್ಗ್ಗಂಗಳ ಕಮಠನತಿಕ್ರೋಧದಿಂ ಮಾಡೆ ಶೇಷಂ
ತಾಮೇಳ್ತಂದಾ ಫಣಾಸಾಸಿರದಿ ಮುಸುಕಲಿ ದ್ರಾಕ್ಷಸಂಗಳ್ದಿ ಸಿದ್ಧಾ
ಭೀಮಾಕಾರಕ್ಕಶೇಷಂ ಸುಗಿದು ಜಿನನಾಥಂ[1] ಭೋಗದೊಳ್ನಿಂದನೆಂದಂ-
ದೇಮಾತೋ ಪಾರ್ಶ್ವನಾಥಂ ತ್ರಿಜಗವಿಜಯನುಂ ರಕ್ಷಿಸುತ್ತಿಕ್ಕೆಯೆಮ್ಮ ॥೪೮೫॥

### ಕಾಯಿಕ್ಕಣೀ ವಿಷಯ

ಶಾ.ವಿ॥ ವಾರಾಸೀಬಳಸಿಂದ ಶೋಭಿಸುವುದೀ ಜಂಬೂಮಹಾದ್ವೀಪಮುಂ
ಮೇರುಕ್ಷ್ಮಾಧರ ಮಧ್ಯಮಂತದಱ ತೆಂಕಲ್ಭಾರತಕ್ಷೇತ್ರಮಂ-
ತಾರಾಮಾವಳಿಯಿಂ ನದೀನದಗಳಿಂ ಕಾಸಾರಸುಕ್ಷೇತ್ರದಿಂ-
ದಾರ್ಯ್ಯಾಖಂಡ[2]ಮದೊಪ್ಪಿ ತೋಪ್ಪದದಱೊಳ್ಸ**ತ್ತೌಳವಾದೇಶ**ಮುಂ ॥

ಮ.ವಿ.॥ ಅದಱೊಳ್ನಂದನ ಚೂತಚಂಪಕಮಶೋಕಂ ಕೌಂಗು ಚೆಂದೆಂಗು ಕುಂ-
ದದವಲ್ಲೀ ಬಕುಳಾಭಪಾಟಲಗಳಿಂ ನೀರೇಜಷಂಡಂಗಳಿಂ
ಮದವದ್ಭೃಂಗ ಶುಕಾಳಿಯಿಂ ಕಳಮಸುಕ್ಷೇತ್ರಂಗಳಿಂದಿಕ್ಷುದೋ-
ಟದ ಚೆಲ್ವಿಂ ಕರ ರಯ್ಯಮಪ್ಪ ವಿಷಯಂ **ಕಾಯಿಕ್ಕಣೀ**ನಾಮಮುಂ॥

ಕಂ॥ ಆ ವಿಷಯಂ ಸದ್ಬುಧಜನ-
ತಾವಿಷಯಂ ಜೀವಹಿತದಯಾರಸವಿಷಯಂ
ಪಾವನಸುಚರಿತವಿಷಯಂ
ದೇವ ಜಿನೇಶ್ವರನ ಪಾದಪಂಕಜವಿಷಯಂ ॥೪೮೮॥

1. ಇಲ್ಲೊಂದು ಲಘ್ವಕ್ಷರದ ಕೊರತೆಯಿದ್ದು, ಒಂದು ಗುರು ಅಕ್ಷರ ಹೆಚ್ಚಿದೆ.

2 ಆರ್ಯಾಖಂಡ ಎಂಬ ಪ್ರದೇಶದ ನಿರ್ದೇಶ ನಮಗೆ ತಿಳಿದಮಟ್ಟಿಗೆ ಇಲ್ಲಿ ಮತ್ತು ಹಾಡುವಳ್ಳಿ ಮೂಡಬಿದಿರೆ ಶಾಸನಗಳಲ್ಲಿ ಬಂದಿದೆ.

## ಕಾಯಿಕ್ಕಣೀ ಭವ್ಯರು

ಮ ವಿ.॥ ಜಿನಮಾರ್ಗೋನ್ನತಸಚ್ಚರಿತ್ರಯುತರುಂ ಶ್ರೀಜೈನಯೋಗೀಂದ್ರ ಸ-
ದ್ಬುಧ [1] ಸೇವಾರತಚಿತ್ತರುಂ ಚತುರ್ವಿಧಪ್ರಖ್ಯಾತಸದ್ದಾನದೊ-
ಳ್ಜಿನ ವಾಕ್ಕಾಯ ವಿಶುದ್ಧರುಂ ಜಿನಕಥಾಶ್ರೋತ್ರೇಂದ್ರಿಯಪ್ರೀತರೆಂ-
ದೆನುತಂ ಸಜ್ಜನರೆಯ್ದೆ ಬಣ್ಣಿಸುವರೀ ಕಾಯಿಕ್ಕಣೀಭವ್ಯರಂ ||೪೮೯||

## ಪಾಯಣ್ಣಾರ್ಯ

ಇವನು ಕೈಕಿಣಿಯಲ್ಲಿ ಜಿನಮಂದಿರವನ್ನು ಕಟ್ಟಿಸಿದ್ದಾನೆ. ಇವನು ಸಚ್ಛೀಲನೂ ಪರೋಪಕಾರಿಯೂ ದಯಾಪರನೂ ಆಗಿದ್ದನೆಂದು ವಿಶೇಷವಾಗಿ ವರ್ಣಿಸಲ್ಪಟ್ಟಿದ್ದಾನೆ.

ವ॥ ಅದನಾಳ್ವ ಸ್ವಸ್ತಿ ಶ್ರೀಮದ್ರಾಜಾಧಿರಾಜ ರಾಜಪರಮೇಶ್ವರಂ ಪೂರ್ವ ದಕ್ಷಿಣಪಶ್ಚಿಮ ಸಮುದ್ರಾಧೀಶ್ವರಂ ಶ್ರೀವೀರಪ್ರತಾಪದೇವರಾಯ ಮಹಾರಾಯನ ಮಂತ್ರಿ ಶಂಕರಕ್ಷಿತಿಪಾಲಕಂ ತುಳುದೇಶಾಧೀಶ್ವರನಾಗಿ ಪಾಲಿಸುತ್ತಿರ್ದ್ದ ಶಕವರುಷ ೧೩೪೦ನೆಯ ಹೇವಳಂಬಿ ಸಂವತ್ಸರದ ಫಾಲ್ಗುಣ ಶುದ್ಧ ೫ ಆದಿವಾರ ಉದಯವಾದ ಅಯ್ದು ಘಳಿಗೆಯಲ್ಲಿ ಕಾಯಿಕಣಿಯೊಳು ಚೈತ್ಯಾಲಯಕ್ಕೆ **ಕೆಸಟುಗಲ್ಲನಿಕ್ಕಿ**

ಕಂ॥ ಅದರೊಳ್ಜಿನಮಂದಿರಮಂ
ವಿದಿತಂ ಮಾಡಿಸಿ ಪ್ರಶಸ್ತ ಕೀರ್ತಿಯನಾದಂ
ಸದಮಳ ಗುಣ[2] ನಿಳಯಂ
ಮದನಮದದ್ವಿರದ ಸಿಂಹ **ಪಾಯಣ್ಣಾರ್ಯಂ** ||೪೯೦||

ಉ ಮಾ॥ ಶೀಲಮನೋವಿಕಾರು[3] ಸುಚರಿತ್ರಗುಣಂಗಳಸತ್ಕ್ರಿಯಿಂದ ತಾಂ
ಪಾಲಿಸಿ ಸುಬ್ರತಂ[4] ಗಳನೆ ರಕ್ಷಿಸಿ ಜೈನಮತಾಗಮಾಬ್ಧಿಯಂ
ತಾಳಿ ಭವಾಂಬುರಾಶಿಯನೆ ದಾಟುವೆನೆಂಬಭಿವಾಂಛೆಯಿಂದ ಮ-
ತ್ತೇಳಿಸಿಯಂಗಜೋದ್ಭವನನಿಕ್ಕಿದ ದರ್ಪ್ಪದಿ[5] ಪಾಯಣಾರ್ಯನುಂ ||೪೯೧||

ಕಂ॥ ಅಕಳಂಕಬ್ರತನಿರತಂ
ಸಕಳಪ್ರಾಣಿಗಳನೋವಿ ಕಾವ ಚರಿತ್ರಂ
ಮಕರಾಂಕವಿಜಯ ಸದ್ಭಾ-
ವಕಜನ ಹೃತ್ಕುಮುದಚಂದ್ರನೀ ಪಾಯಣ್ಣಂ ||೪೯೨||

---

1. ಪ್ರಾಸಕ್ಕಾಗಿ 'ಜ್ಜನ' ಎನ್ನಬಹುದು.
2. ಗುಣಗಣ ಎಂದಿರಬಹುದು.
3. ವಿಕಾರು–ವಿಕಾರ ಎಂಬುದು ತಪ್ಪು ಕಂಡರಣೆ ಎಂದು ತೋರುವುದು.
4. ಶಾ. ಮೂ.: ಸಬ್ರತಂ
5. ಶಾ. ಮೂ.: ದರ್ಪ್ಪದಿ

ಉ.ಮಾ॥ ಗೋಪುರ ಮಂಟಪಪ್ರಕರ ಉನ್ನತ ಜೈನನಿವಾಸ ಸುತ್ತಲುಂ
ವ್ಯಾಪಿಸಿ ತೋರ್ಪ್ಪ ವಪ್ರವದಱಿಂ ಬಳಸಿದ್ದುದು ಪುಷ್ಪ[1] ವಾಟಿ ಸ-
ತ್ಕೂಪ ಸರೋಜಷಂಡವನೆ ಮಾಡಿಸಿ ಕೀರ್ತಿದಿಗಂತಮಂಡಲ-
ವ್ಯಾಪಿತ ಪಾಯಣಾರ್ಯ ಜಿನಮಾರ್ಗ್ಗಪಯೋನಿಧಿಚಾರುಚಂದ್ರಮಂ॥

## ೧೧೦

**ಹಾಡುವಳ್ಳಿ, ಕ್ರಿ. ಶ. ೧೪೭೯**

**ವಿಜಯನಗರದ ದೇವರಾಯ**

ಕಾರವಾರ ಜಿಲ್ಲೆ (ಕ. ಇ. ೧, ಪು. ೧೧೩)

### ಮಾಣಿಕಸೇನನ ಸಲ್ಲೇಖನವಿಧಿ

ಜಯಸೇನನೆಂಬವನ ಮಗನಾದ ಈತನು, ಎಲ್ಲ ಮುನಿಗಳನ್ನೂ ಜೈನಪ್ರಮುಖರನ್ನೂ ಸಂಗಭೂಪಾಲನನ್ನೂ ಹೈವರಸನನ್ನೂ ಕರಸಿಕೊಂಡು ತಾನು ಸಲ್ಲೇಖನೆಯನ್ನು ಕೈಕೊಳ್ಳುವ ನಿಶ್ಚಯವನ್ನು ಅವರಿಗೆ ತಿಳಿಸುತ್ತಾನೆ; ಆ ಕಾರ್ಯದಲ್ಲಿ ಅವರ ನೆರವನ್ನು ಕೋರುತ್ತಾನೆ. ಅದಕ್ಕೆ ಆ ಜನ ಆಕ್ಷೇಪಿಸಲು ಅವನು ಧರ್ಮೋಪದೇಶದಿಂದ ಆ ಆಕ್ಷೇಪಗಳನ್ನು ನಿವಾರಿಸುತ್ತಾನೆ. ಕೊನೆಗೆ ಸಂಗರಾಜನು ಮುನಿಯ ಸಲ್ಲೇಖನವ್ರತಕ್ಕೆ ತಕ್ಕ ಏರ್ಪಾಟನ್ನು ಮಾಡುವುದಲ್ಲದೆ, ಆತನ ಅಂಗಪೂಜೆಯನ್ನು ವಿರಚಿಸುತ್ತಾನೆ. ಆ ವ್ರತದ ವಿಧಾನ ಇಲ್ಲಿ ವಿವರವಾಗಿ ಬಂದಿದೆ.

### ಸಂಗೀತಪುರ (ಹಾಡುವಳ್ಳಿ) ವರ್ಣನೆ

ಮ. ವಿ.॥ [2]ಅದಱೊಳ್ಮಧ್ಯದೊಳೊಪ್ಪೆ ಗೋಪುರಲಸತ್ಪ್ರಾಕಾರಸೌಧಾಳಿಸಂ-
ಪದದಿಂ[ದಂ][3] ಜಿನಗೇಹದಿಂ ನೃಪನಿವಾಸೋತ್ತುಂಗಹರ್ಮ್ಯಂಗಳಿಂ
ಮದನಂಗಾಸ್ಪದ[4] ವೇಶ್ಯಗೇಹತತಿಯಿಂ ವಾಣಿಜ್ಯರಾವಾಸದಿಂ
ಪದಪಂ ಬೀರುವವೆಂದಿವೇ[5]ವೊಗಳ್ವೆನಾಂ **ಸಂಗಿತನಾಮಾಪುರಂ** ॥

### ಮಾಣಿಕಸೇನಮುನಿ

ಕಂ ॥ ಜಯಸೇನ ಮುನೀಶ್ವರ[ಗಂ]
ಪ್ರಿಯಸುತ ಮಾಣಿಕ್ಯಸೇನಮುನಿ ಕುಲತಿಲಕಂ

---

1. ಶಾ. ಮೂ. : ಪುಷ್ಪ
2. ಅದಱೊಳ್ : ತೌಳವ ದೇಶದಲ್ಲಿ
3. ಶಾ. ಮೂ. : [ದೀ]
4. ಶಾ. ಮೂ. ಸ್ಪ ನಷ್ಟವಾಗಿದೆ.
5. ಬೀರುವವೆಂದಡೇ ಎಂದಿರಬಹುದಾಗಿದೆ.

ಬಯಸಿಯುಪವರ್ಗ್ಗಲಕ್ಷ್ಮಿಯು
ಭಯರಹಿತಂ ಬಗೆದನಿಂತು ಸಲ್ಲೇಖನೆಯಂ ||೪೯೫||

ವ|| ಅಂತು ಮನದೊಳ್ನಿಶ್ಚಯಿಸಿ,

ಚಂ|| ಮುನಿಜನಮಂ ಸಮಸ್ತ....ರತ್ನವಿಭೂಷಣ ಸಂಗಭೂಪನಂ
ಮನಸಿಜರೂಪ ಹೈವನೃಪಮಂಗಮಹೀಪತಿ....ದಿಂದರಂ
ವಿನೆಯ ಜನಂಗಳಂ ಮುನಿಪ ತಾಂ ಕರೆದೆಂದನು ದೇಶಕಾಲಭೂ-
ಪರು ಗುಣವಂತರಾದೆಡೆಯ ಮಾಳ್ಪುದು ನಿರ್ಮ್ಮಲ ಧರ್ಮ್ಮಚರ್ಯ್ಯವ ||

ವ|| ಅದು ಕಾರಣದಿಂ ನಿಮ್ಮ ಸಹಾಯದಿಂ ಸೌಖ್ಯಕಾರಣಮಪ್ಪ ಸಲ್ಲೇಖನೆಯ ಕೈಕೊಂಡೆನೆಂಬುದವರಿಂತೆಂದರು :

ಕಂ || ಪಲಕಾಲಮುಗ್ರತಪದಿಂ
ದಲೆದು ಮನೋಭವನ ವಿಷಮವಿಷಯಾದಿಗಳಂ
ತೊಲಗಿಸಿ ತತ್ತ್ವಜ್ಞಾನದಿ
ಮಲರಹಿತಚರಿತ್ರನಾಗಿ ನೆಗಳ್ವುದು ಮುನಿಪಂ ||೪೯೭||

ವ|| ಅದಲ್ಲದೆಯುಂ, "ಉಪಸರ್ಗ್ಗೇ ದು[ಷ್ಟ]ಜರಾಸು ರುಜಾಯಾಂ ಚ ಪ್ರತೀಕಾರೇ ಧರ್ಮ್ಮಾಯ ತನುವಿಮೋಚನಮಾಹುಃ ಸಲ್ಲೇಖನಾಮಾರ್ಯ್ಯಾ||" ಎಂಬೀ ಆಗಮೋಕ್ತಕ್ರಮಮುಂಟಪ್ಪುದಱಿಂದೆ ನಾನು ಚಿಹ್ನನಿಮಿತ್ತಾದಿಗಳೆಲ್ಲ ಮಾಳ್ಪುದನುಚಿತಮೆಂದು ಸಂಗನೃಪಾಲಂ ಬಿನ್ನವಿಸೆ ಆ ಮುನಿಪನಿಂತೆಂದಂ:

ಮ.ವಿ || ಮಿದುಳುಂ ಮೂಳೆಯು ರಕ್ತಮೂತ್ರಮಲಮುಂ ಶ್ಲೇಷ್ಮಂಗಳುಂ ಕೀವುಮೆಂ-
ಬಿದನೆಲ್ಲಂ ನೆಱೆ[3] ತೀವಿ ಚರ್ಮ್ಮದಿನಿದಂ ಮುಚ್ಚಿಱ್ದ ದುರ್ಮ್ಮೋಹದಿಂ-
ದದು ತಾಂ ರೂಪು ಸುಜಾತಿಪೂತವೆನಿ[ಸಿತ್ತಾನಪ್ಪ]ವಯ್ಯಯ್ಯೊ ನಂ-
ಬಿದೆನಾಂ ಪೇಸು ಪದಂ ಶ....ನಕಟಾ ಆ ಕೆಟ್ಟುದುಂ[1] ಸಾಲದೆ ||೪೯೭||

ಕಂ|| ಕೇಳಿಲೆ ಸಂಗಮ ಭೂವರ
ಘಾಳಿಯ ಸೊಡರ ಚಿರರುಚಿ ಸುರೇಶ್ವರಚಾಪಂ
ಪೇಳಲಿವಱಿಂದ ಮಾನವ
ಬಾಳುವೆಯಂ ನಂಬಿ[2] ಕೆಡಿಸುವೆನೆ ಸದ್ಗತಿಯಂ ||೪೯೮||

ವ|| ಎಂದು ಮುನಿನಾಥಂ ಪರಿಚ್ಛೇದಿಸಿ ಪೇಳ್ದ[3] ವಚನಮಂ ಕೇಳ್ದು

---

1. ಶಾ. ಮೂ.: ಕಟ್ಟುದಂ
2 ಶಾ. ಮೂ.: ಂಬಿ ನಷ್ಟವಾಗಿವೆ
3. ಶಾ. ಮೂ.: ಪೇಳ್ದ ಎಂಬುದಿಲ್ಲ.

ಸಂಗಭೂಪಾಲಕಂ ತತ್ಸಮಯೋಚಿತ ಜಿನಾಭಿಷೇಕಪೂಜೆಗಳಂ ಪ್ರತಿದಿನಂ ಮಾಳ್ಪಂತು ನಿಯೋಜಿಸಿ ಗುರುಗಳಂ ಬೀಳ್ಕೊಂಡು ಮನೆಗಭಿಮುಖನಾದನಿತ್ತಲು,

**ಮಾಣಿಕಸೇನನ ಸಲ್ಲೇಖನೆ**

ಮ. ವಿ|| ವರ ಸೌಮ್ಯಾ[ಗ್ರಿಮ] ಜ್ಯೇಷ್ಠಮಾಸ ಸಿತಪಕ್ಷಾರಭ್ಯದೊಳ್ ಶ್ರೀಜಿನೇ-
ಶ್ವರಪೂಜೋತ್ಸವಮಾಗಲಾ ಮುನಿವರಂ ತಾಳ್ದಿರ್ದ್ದ ದಾವಾಸಮಂ
ಗುರುಮೂಲಂಗಳೊಳೆಂದೊಡಾ ಮಱುದಿನಂ ಆಹಾರ ನಾಲ್ಕಾಗಲಂ-
ತಿರುತಂ ಮೂಱು ತಿಂಗಳಂ ಬಿಸುಟು ಪಾನದ್ರವ್ಯದಿಂದಿರ್ದ್ದಪಂ ||೫೦೦||

ಉ.ಮಾ|| ಅನ್ನರಸಂಗಳಿಕ್ಷುರಸಮಂಬರವಾನವಶಾದ್ದ ವಾರಿಯುಂ
ಸನ್ನುತರಂಧ್ರಪಂಚದಶಪನ್ನೆರಡಾಱುದಿನಂಗಳಂತರಂ
ಮನ್ನಿಸಿ ಪಾನ್ಯನಾಲ್ಕೆರಡೆ ನಾಲ್ಕೆರಡೊಂದನೆ ಸೇವಿಸುತ್ತಮು-
ತ್ಪನ್ನ ಸತತ್ವಸಪ್ರಮುದ ಮಾಣಿಕಸೇನ ಮುನೀಂದ್ರನಿರ್ದ್ದಪಂ ||೫೦೧||

ವ|| ಅಂತಿರ್ದ್ದು ಸಕಲಸಂನ್ಯಸನಮಂ ಕೊಂಡಾಗಳು,

ಮ.ಸ್ರ|| ನಿಡುಸುಯ್ಯಂ ಸುಯ್ಯದುಃಪೆಂದೊಡಲನೆ[1] ಹೊಸಿಯುಂ ಯೇ[ಱಿ]
ನೆಂದತ್ತಲಿತ್ತ-
ಲ್ಮಿಡುಕಂ ಮತ್ತಾರ್ತ್ತ . ಜಂಗಳೊಳೆ ಜಿದಬಿದಂ ಬೇಯ ಬೇಸತ್ತು ಚಿತ್ತಂ-
ಗಿಡದೀ ಮಾಣಿಕ್ಯಸೇನಂ [ವನಹ]ಸಮ[ಗೋ]ಭಾವನುಂ ಮೇರುಧೈರ್ಯಂ
ಪೊಡವೀವಾ · ೦ · ಬಂದಸಶನ ದಿನ ಮೂವತ್ತು ಮೂಱಾಗಲಿರ್ದ್ದ||

ಉ.ಮಾ|| ಅಕ್ಷಿ ಶರಂ ಶಿಖೀಂದು ಶಕ[2] ಸೌಮ್ಯ ಸುವತ್ಸರ ಶ್ರಾವಣಂ ಸಿತಾ-
ಪಕ್ಷದ ಪಾಡ್ಯ ಮಂದ ನಿ · ಯೊಳ್ಘಟಿಕಾತ್ರಯಂ[3] ಗಳಾಗಲುಂ
ರುಕ್ಷಮು ಪುಷ್ಯಮಾಕುಲಿಷಯೋಗದ ಮಾಣಿಕಸೇನಯೋಗಿಯುಂ
ಮೋಕ್ಷಸುಖಾಬ್ಧಿ ಸಂನ್ಯಸನದಿಂದಿರದೆಯ್ದಿದನಿಂದ್ರಲೋಕಮಂ ||೫೦೩||

ವ|| ಆಗಳು

ಕಂ|| ಪುರಜನ ಪರಿಜನ[4] ಸಹಿತಂ
ವರಸಂಗನೃಪಾಲ ಬಂದನೇಕಾರ್ಚ್ಚನೆಯುಂ
ಬೆರಸಿ ಮುನಿಯಂಗಪೂಜೆಯ
ವಿರಚಿಸಿದಂ.... ನೆಂದೆನ ತತಿಯಿಂ ||೫೦೪||

---

1 ಶಾ.ಮೂ.: ದಃಬ್ಬೆಂದೊಡಲನೆ

2. (ಎಕ್ಕಂ ಸ್ಥಾನದಿಂದ ಅಕ್ಷಿ : ೨, ಶರ : ೫, ಶಿಖಿ = ೩, ಇಂದು ೧ = )೧೩೫೨ನೆಯ ಶಕ

3 ಘಟಿಕಾತ್ರಿತಯಂ

4. ಶಾ. ಮೂ.: ಪರಿಜನ ಎಂಬುದು ನಷ್ಟವಾಗಿದೆ.

ವ|| ತದನಂತರಮಾ ಸಂಗಭೂವರಂ ಗುರುಭಕ್ತಿಯಿಂದಾ ಮುನಿವರಂಗೆ ಪರೋಕ್ಷಾರ್ಥವಾಗಿ ಮಹಾಭಿಷೇಕಪೂಜೆ ಪಟ್ಟಣಸಮುದಾಯಮಂ ಮಾಡಿಸಿದ ನಿಷಿಧಿಗೆ. ಮಂಗಳಮಹಾ ಶ್ರೀಶ್ರೀಶ್ರೀ.

## ೧೧೧

**ಮೂಡುಬಿದಿರೆ,** **ಕ್ರಿ. ವ. ೧೪೩೦**

**ಕಾರ್ಕಳ ತಾಲೂಕು,** **ವಿಜಯನಗರದ ದೇವರಾಯ**

ಮಂಗಳೂರು ಜಿಲ್ಲೆ (ಸೌ. ಇಂ. ಇ. ೭, ಪು. ೮೯)

ಈಗಿನ ಮೂಡಬಿದಿರೆಗೆ ಆಗ ಬಿದಿರೆ ಎಂದು ಮಾತ್ರ ಕರೆಯುತ್ತಿದ್ದರೆಂದು ತೋರುತ್ತದೆ. ವಂಶ (ಬಿದಿರು) ಪುರ, ವೇಣು (ಬಿದಿರು) ಪುರ ಎಂಬುವು ಬಿದಿರೆಯ ಸಂಸ್ಕೃತ ರೂಪಗಳು. ಈ ಊರಿನ ಮತ್ತು ನಾಡಿನ ಧನಧಾನ್ಯಸಮೃದ್ಧಿಯೂ ನಿಸರ್ಗಸೌಂದರ್ಯವೂ ವಿಶೇಷವಾಗಿ ಜೈನ ಧರ್ಮ ಮತ್ತು ಚೈತ್ಯಾಲಯಗಳ ವೈಭವವೂ ವಿವರವಾಗಿ, ಸೊಗಸಾಗಿ ವರ್ಣಿತವಾಗಿವೆ.

### ಚಂದ್ರಪ್ರಭ ತೀರ್ಥಂಕರ ಸ್ತುತಿ

ಶಾ. ವಿ || ಶ್ರೀಚಕ್ರೇಶಸುರೇಶಭಾಸುರಸಭಾಶ್ರೀಕಾಂತನೇಕಾಂತಮಿ-
ಥ್ಯಾಚಕ್ರೋದ್ಭವಕರ್ಮ್ಮಘರ್ಮ್ಮನವಚಂದ್ರಂ ದಿವ್ಯಭಾಷಾಸರಿ-
ದ್ವೀಚಿವ್ರಾತವಿನಿರ್ಮ್ಮಲೀಕೃತಜನಂ ಮುಕ್ತ್ಯಂಗನಾವಲ್ಲಭಂ
ಶ್ರೀಚಂದ್ರಪ್ರಭನೀಗೆ **ವಂಶಪುರ**ದೀ ಭವ್ಯಾಳಿಗಾನಂದಮಂ ||೫೦೫||

### ಮೇರುಶೈಲ

[1] ಸ್ರ|| ಶ್ರೀಜೈನಜ್ಞಾನಮೀನಾಕರಗತ ತರಿ ಪ್ರಾಯದಂತಿರ್ದ್ದ ಲೋಕ-
ಕ್ಕೀ ಜಂಬೂದ್ವೀಪಭೂಪಂ ಪರಿವೃತಲಸದ್ವಾಹಿನೀನಾಥನಿಂದಂ
ರಾಜಿಕ್ಕುಂತಲ್ಲಿ ನಾನಾಮಣಿನಿಕರಹಟತ್ಕೋಟಿಕೂಟಾರ್ಚ್ಚಿಯಿಂ ಸ್ವ-
ರ್ಬ್ಭೂಜವ್ರಾತಂಗಳಿಂ ಕ್ರೀಡಿಪ ಸುರತತಿಯಿಂದೊಪ್ಪುಗುಂ ಮೇರುಶೈಲಂ||

### ಆರ್ಯಾಖಂಡ

ಕಂ|| ಆ ಗಿರಿವರನಿಂ ದಕ್ಷಿಣ-
ಭಾಗದ ಸಿರಿಯಂತಿರಿರ್ದ್ದ ಭರತಕ್ಷೇತ್ರ-
ಕ್ಕಾಗಿಪುದಾರ್ಯ್ಯಾಖಂಡಂ
ಭೋಗಿಜನಾವಾಸಮೆಂಬ ವಿಖ್ಯಾತತೆಯಂ ||೫೦೭||

1. ಮೊದಲ ಎರಡು ಚರಣಗಳಲ್ಲಿ ಒಂದೊಂದಕ್ಷರದ ಕೊರತೆಯಿದೆ.

**ತುಳುದೇಶ**

ವ|| ಆ ಆರ್ಯ್ಯಾಖಂಡದಲ್ಲಿ

ಉ.ವ|| ಸಾರತರದ್ರುಮಪ್ರತತಿಯಿಂ ಪರಿಶೋಭಿಪ ಗೋಪ್ರತಾನದಿಂ
ಕೀರಮರಾಳಸಾರಸದಿನೊಪ್ಪುವ ನಂದನವೃಂದದಿಂ ಪಯಃ-
ಪೂರಸರಃಸರೋಜವನದಿಂ ಬಿನದಕ್ಕೆಡೆಯಾದ ತಾಣದಿಂ-
ದಾರ ಮನಕ್ಕೆ ಮಾಡದೊಲವಂ **ತುಳುದೇಶ**ಮನೇಕದೇಶದೊಳ್ ||೫೦೮||

**ಮಂಗಲೂರು**

ಮ.ಸ್ರ|| ಚಲದೂರ್ಮ್ಮಿವ್ರಾತಜಾತಪ್ರಹರಣರಣಕೃದ್ವಾರ್ಧಿಯಿಂ ಮುಂದೆ ಸಾಲಂ-
ಬಳಸಲ್ನಾನಾಮಣಿಪ್ರಸ್ಫುರಿತಪರಿವೃಢಾಗಾರದಿಂ ವಾರನಾರೀ-
ಕುಲದಿಂ ಸ್ವರ್ಣ್ನಾದಿಪೂರ್ಣ್ನಾಪಣಗಣದಿನಣಂ ಶೋಭಿಕುಂ **ಮಂಗಲೂರಾ**-
**ಸ್ಥ**ಲದೊಳ್ ವ್ರೀಹ್ಯಾದಿಸಸ್ಯೋತ್ಕರುಷಹರುಷಿತಾತ್ಮೀಯ ಪೌರಪ್ರತಾನಂ ||

**ಚೆಲ್ವಾದ ವಂಶಪುರ**

ಆಗ ಇಲ್ಲಿ ಜೈನಧರ್ಮವು ವಿಶೇಷ ಪ್ರಚುರವಾಗಿತ್ತು. ಸಾಹಿತ್ಯರಸಾಸ್ವಾದನೆಯ ಅಭಿರುಚಿ-ಯುಳ್ಳ ರಸಿಕರ ಬೀಡಾಗಿ, ಮುತ್ತು, ರತ್ನ, ಬಂಗಾರ, ಚೀನವಸ್ತ್ರಗಳ ವ್ಯಾಪಾರದನೆಲೆಯಾಗಿ ಮೆರೆ-ಯುತ್ತಿತ್ತು ಈ ಊರು.

ಮ.ವಿ|| ಪುರಮೊಪ್ಪಿಪ್ಪುದು **ವಂಶ**ವೆಂಬ ಪೆಸರಿಂ ಬಾಹ್ಯಪ್ರದೇಶಂಗಳೊಳ್
ವರಶಾಲೇಯದಿನಿಕ್ಷುಶಾಕ[ಟ]ದಿನಾರಾಮಂಗಳಿಂ ಸುತ್ತಿದಾ
ಪರಿಖಾಂತಃಪರಿಧಿಪ್ರತೋಳಿಗಳಿನುದ್ಯತ್ಕೇತನವ್ರಾತದಿಂ-
ದುರುಜೈನಾಲಯರಮ್ಯಹರ್ಮ್ಯಚಯದಿಂ ಪುಣ್ಯಾಂಗನಾಸಂಗದಿಂ ||೫೧೦||

ಘನವಕ್ಷೋರುಹಹಾರಭಾರವಿಚಲನ್ಮಧ್ಯಂ ಮನಃಪ್ರೀತರೊಂ-
ದನುರಾಗಕ್ಕೆಡೆಯಾಗೆ ಸಂಚರಿಪ ನಾರೀವೃಂದದಿಂ ಸಾರಕಾ-
ವ್ಯನವಾರ್ತ್ಥಾಮೃತಸೇವೆಯಿಂ ತಣಿವ ಕಾವ್ಯಪ್ರೌಢರಿಂ ರತ್ನ ಕಾಂ-
ಚನ ಚೀನಾಂಬರ ವಿಕ್ರಯಕ್ರಯಿಕರಿಂ ಚೆಲ್ವಾದುದೆತ್ತಂ ಪುರಂ ||೫೧೧||

ಉ.ಮಾ|| [1] ಬಾಲಕರೆಲ್ಲರು[ದ್ಧ]ಜಿನಧರ್ಮ್ಮರತರ್ವ್ವರದಾನಪೂಜೆಯೊ-
ಳ್ಲೀಲೆಯಿನಿಪ್ಪುಪಾಸಕರನಿಂದ್ಯಜಿನೋದಿತ ಶಾಸ್ತ್ರಶಾಲಿಗಳ್
ಬಾಲೆಯರಾತ್ಮನಾಥಗನುಕೂಲೆಯರಾಗಿರುತಿರ್ಪ್ಪರೆಂದೊಡಂ
ನಾಲಗೆಯಾವಗುಂಟು ಪೊಗಳಲ್ಕೆಣೆ **ವೇಣುಪುರ**ಪ್ರಭಾವಮಂ ||೫೧೨||

1. ಬಾಲಕ: ಪುರುಷ ಎಂಬರ್ಥದಲ್ಲಿ

## ವೇಣುಪುರದ ಎಂಟುಪ್ರಜೆ ಸೆಟ್ಟಿಕಾರರು

ವ॥ [1]ಶ್ರೀಮದ್ರಾಯ ರಾಜಗುರು ಮಂಡಲಾಚಾರ್ಯ್ಯ ಮಹಾವಾದಿ-ವಾದೀಶ್ವರ ರಾಯವಾದಿಪಿತಾಮಹ ಸಕಲವಿದ್ವಜ್ಜನ ಚಕ್ರವರ್ತ್ತಿಗಳುಮಪ್ಪ ಶ್ರೀ-ಮದಭಿನವ ಚಾರುಕೀರ್ತ್ತಿಪಂಡಿತದೇವರುಗಳ ಪ್ರಿಯಶಿಷ್ಯರುಂ ಆಹಾರಾಭಯ-ಭೈಷಜ್ಯಶಾಸ್ತ್ರದಾನದತ್ತಾವಧಾನರುಂ *ಸ್ವರ್ಗಾಪವರ್ಗ್ಗನಿಶ್ಶ್ರೇಣೀಭೂತ* ನೂತನ ಪುರಾತನ ಚೈತ್ಯಾಲಯ ನಿರ್ಮ್ಮಾಪಣೋದ್ಧರಣಪರಿಣತಾಂತಃಕರಣರುಂ ಸಮ್ಯಕ್ತ್ವಾ-ದ್ಯನೇಕಗುಣಗಣಾಲಂಕೃತರುಮಪ್ಪ ವೇಣುಪುರದ ಎಂಟು ಪ್ರಜೆ ಸೆಟ್ಟಿಕಾಱರು ನಾಲ್ವರು ಎಳಮೆಗೊಳಗಾದ ಸಮಸ್ತಹಲರುಃ[2] ದೇವರಾಯ ಮಹಾರಾಯರ ನಿರೂ-ಪದಿಂ ದೇವರಾಜೊಡೆಯರು ಅಭಿನವ ಚಾರುಪಂಡಿತದೇವರುಗಳಿಗೆ ಚೈತ್ಯಾಲಯ ನಿರ್ಮ್ಮಾಪಣಾರ್ಥವಾಗಿ ಕೊಟ್ಟ ಕ್ಷೇತ್ರದಲ್ಲಿ ಪಾಲಿಕೆನಾಡು ಚವುಟರು ಮುಖ್ಯ-ವಾದಱವರು ಬಲ್ಲಾಳುಗಳ ಸಹಾಯದಿಂ ತ್ರಿಭುವನಚೂಡಾಮಣಿಯೆಂಬ ಮಹಾ-ಚೈತ್ಯಾಲಯಮಂ ಜಗದಾಶ್ಚರ್ಯ್ಯಕರಮಪ್ಪಂತು ಮಾಡಿಸಿದರಾ ಮಹಾಚೈತ್ಯಾಲಯ-ಮೆಂತಿರ್ದ್ದುದೆಂದೊಡೆ,

## ತ್ರಿಭುವನ ಚೂಡಾಮಣಿ ಚೈತ್ಯಾಲಯ

ಚಂ॥ ಕುಲಕುಧರಕ್ಕಿದೇಕೆ ಗಱಿ ಪುಟ್ಟಿದುದೆಂಬತಿಸಂಶಯಕ್ಕೆರ-
ಳ್ಕೆಲರಣಲೋವೆಯಿಂಬುಗುಡೆ ಮೂಜಗದಂದಮನಬ್ಜಜಂ ನಿರಾ-
ಕುಳತೆಯಿನೀ ಜಗಕ್ಕಱಿವಲೆಂದಿರಿಸಿರ್ದ್ದ ತ್ರಿಲೋಕದಂತೆ ಮೂ-
ರ್ನ್ನೆಲೆಯ ಜಿನಾಲಯಂ ಜಿತಸುರಾಲಯಮೊಪ್ಪುವುದೇನ ಬಣ್ಣಿಪೆಂ ||೫೧೩||

ವ.ವಿ॥ ಲಲಿತಸ್ತಂಭಕದಂಬಮಂ ಮದನಕಯ್ಯಂ ಲೋವೆಯಂ ದ್ವಾರಚಿ-
ತ್ರಲತಾಬಂಧಮನುದ್ಧಭಿತ್ತಿಯನಧಿಷ್ಠಾನಾದಿಯಂ ಬೇಱೆ ಬೇ-
ಱೆಲವಿಂ ಬಣ್ಣಿಸಿ ಪೇಳಲಾನಱಿಯೆನೊಂದಂ ಬಲ್ಲೆನಾ ಚೈತ್ಯಕೌ-
ಶಲಮಂ ಭಾವಿಸಿ ವಿಶ್ವಕರ್ಮ್ಮನಣುಗಿಂದಂ ಶೀರ್ಷಮಂ ತೂಗುವಂ ||೫೧೪||

## ಚಂದ್ರಪ್ರಭ ತೀರ್ಥೇಶ್ವರ ಮೂರ್ತಿ

ವ॥ ಮತ್ತಮಾ ಬಿದಿರೆಯ ಹಲರಾ ತ್ರಿಭುವನ ಚೂಡಾಮಣಿ ಚೈತ್ಯಾಲ-ಯಕ್ಕೆ ಶ್ರೀಚಂದ್ರಪ್ರಭತೀರ್ಥೇಶ್ವರರ ಪರಮೌದಾರಿಕ ದಿವ್ಯಮೂರ್ತ್ತಿಯಂ ಕಂಚಿ-

1 ಇದೇ ವರುಷದ (ಕ್ರಿ. ಪ. ೧೪೩೦) ಈವೂರ ಇನ್ನೊಂದು ಶಾಸನದಲ್ಲಿಯೂ ಈ ಗದ್ಯ ಬಂದಿದೆ. ಇಲ್ಲಿಗಿಂತ ಅದರಲ್ಲಿ ಹೆಚ್ಚಿಗೆ ಬಂದಿರುವ ಮಾತಗಳನ್ನು ಈ ಗದ್ಯದಲ್ಲಿಯೇ ಸೇರಿಸಿ ಕೊಂಡಿದೆ. ಹೀಗೆ ಸೇರಿಸಿಕೊಂಡುದನ್ನು ಎರಡು ಚುಕ್ಕೆಗಳ ನಡುವೆ *—* ತೋರಿಸಿದೆ.

2. ಆ ಇನ್ನೊಂದು ಶಾಸನದಲ್ಲಿಯ ಈ ಗದ್ಯ ಇಲ್ಲಿಗೇ ಮುಗಿದಿದೆ.

ನಿಂದಷ್ಟ ಮಹಾಪ್ರಾತಿಹಾರ್ಯ್ಯಸಮೇತಮಾಗಿ ಕರ ಚೆಲ್ವಮಪ್ಪಂತು ನಿರ್ಮಾಪಿಸಿದ-
ರದೆಂತೆನೆ,

ಕಂ|| ದಶತಾಳಲಕ್ಷಣಂ ಕ-
ಣ್ಗೆಸೆದಿರೆ ಸತ್ಕಾಂಸ್ಯದಿಂದ ಚಂದ್ರಪ್ರಭರಂ
ಪೊಸತಾಗಿ ಮಾಡಿಸಿದರೇ-
ನು ಸಮರ್ತ್ಥರೊ ವಂಶಪುರದ ಭವ್ಯಜನಂಗಳ್ ||೫೧೫||

ಮ.ವಿ|| ಪರಮೌದಾರಿಕ ದಿವ್ಯದೇಹವಿದು ತಾನೆಂಬಂತೆ ದೇಹಾಂಶುವಾ-
ವರಿಸಲ್ಕಾಲ್ದೆಸೆಯುಂ ಸ್ಫುರತ್ತರಳತಾರಾನೀಕಮಂ ಬೇಱೆ ಚಿ-
ತ್ತರಿಸಲ್ಪೂಮಳೆ ಚಾಮರಾಳಿ ಸುರಸಿಂಧೂತ್ಫೇನಸಂತಾನದಂ-
ತಿರೆ ಜೈನಪ್ರತಿಬಿಂಬದೊಂದು ವಿಭವಂ ಕಣ್ಗೇಂ ಬೆಡಂಗಾದುದೊ ||೫೧೬||

## ೧೧೨

## ಮೂಡುಬಿದಿರೆ, ಕ್ರಿ. ವ. ೧೪೩೦

**ಕಾರ್ಕಳ ತಾಲೂಕು, ವಿಜಯನಗರದ ದೇವರಾಯ**

ಮಂಗಳೂರು ಜಿಲ್ಲೆ (ಸೌ. ಇಂ. ಇ. ೭, ಪು. ೯೮)

ಈ ಶಾಸನದಲ್ಲಿ ದೇವರಾಯನ ವಿಜಯಗಳ ಮತ್ತು ನಗಿರರಾಜ್ಯವನ್ನಾಳುತ್ತಿದ್ದ ಭೈರವನ ಪ್ರತಾಪ, ಔದಾರ್ಯಗಳ ವರ್ಣನೆ ಬಂದಿದೆ. ಭೈರವನು ತ್ರಿಭುವನ ಚೂಡಾಮಣಿ ಜಿನಾಲಯದ ಮೂರನೆಯ ನೆಲೆಗೆ ತಾಮ್ರದ ಹೊದಿಕೆ ಮಾಡಿಸಿದ್ದನ್ನು ಇದು ಉಲ್ಲೇಖಿಸುತ್ತದೆ.

### ವೇಣುಪುರದ ಮಹಾಜನಗಳು

ಚಂ|| ಪರಪುರುಷಾರ್ತ್ಥಕಾರಿಗಳುದಾರವಿನೋದರು ದಾನಶೀಲರುಂ
ಗುರುಜನಭಕ್ತರುಂ ಕವಿಜನಸ್ತುತರೂರ್ಜ್ಜಿತಕೀರ್ತ್ತಿಕಾಂತರುಂ
ಪರಮದಯಾಪರರ್ಪ್ಪರಹಿತಾಚರಣರ್ಜ್ಜಿನಮಾರ್ಗ್ಗದೀಪಕ-
ರ್ದ್ಧರೆಯೊಳದೇನ ಬಣ್ಣಿಪೆನು **ವೇಣುಪುರಸ್ಥ**ಮಹಾಜನಂಗಳಂ ||೫೧೭||

### ಮೂವರು ರಾಯರ ಗಂಡ ದೇವರಾಯ

ಚಂ|| ಶರನಿಧಿ ವೇಷ್ಟಿಸಿರ್ದ್ದ ಸಕಳೋರ್ವ್ವಿಯನಾಳ್ವನತಿಪ್ರತಾಪದಿಂ
ತುರುಕಮಹಾಹಯ ಪ್ರಬಲಸೈನ್ಯವಿದಾರಿ ಮತಂಗರಾಜಸಿಂ-
ಧುರವರಕೋಟಿಮರ್ದ್ದನಮೃಗೇಶ್ವರನಂಧ್ರನರೇಂದ್ರಸೈನ್ಯಸಾ-
ಗರಕಳಶೋದ್ಭವಂ ವಿಜಯರಾಯತನೂಭವ **ದೇವಭೂವರಂ** ||೫೧೮||

## ತ್ರಿಭುವನಚೂಡಾಮಣಿ ಚೈತ್ಯಾಲಯ

ಚಂ|| ಸುರಪತಿಗಂಜಿ ರೋಹಣನಗಂ ಮಱೆವೊಕ್ಕುದೊ ಮೇಣ್ದಿಶಾಸ್ಯಗ-
ಳ್ಕಿರದೆ ಹರಾದ್ರಿ ಬಂದು ನೆಲಸಿತ್ತೊ ಕುಬೇರನು ದೈತ್ಯಭೀತಿಯಿಂ-
ದಿರಿಸಿದ ತನ್ನ ಪುಷ್ಪಕಮದಲ್ಲದೊಡಿಂತು ವಿಚಿತ್ರಕೂಟದಿಂ
ಕರ ಚೆಲುವಾದ ಚಂದ್ರಜಿನಮಂದಿರಮಂ ಪೊಗಳಲ್ಕೆ ಬರ್ಕ್ಕುಮೆ ||೫೯||

ವ|| ಮತ್ತಮಾ ಬಿದಿರೆಯ ಹಲರಾ ತ್ರಿಭುವನಚೂಡಾಮಣಿ ಚೈತ್ಯಾಲಯಕ್ಕೆ ಶ್ರೀಚಂದ್ರಪ್ರಭತೀರ್ತ್ಥಂಕರರ ಪರಮೌದಾರಿಕಾಂಗ ಪ್ರತಿಬಿಂಬಮಂ ಕಂಚಿನಿಂ ಕರ-ಚೆಲುವಾಗಿ ಮಾಡಿಸಿ[1–1] ಪರಮೋತ್ಸವದಿಂ ಪ್ರತಿಷ್ಠೆಯಂ ಮಾಡಿಸಿ ಮೂಱು ನೆಲೆ-ಗಳಲ್ಲಿ ಪೂಜಾಮಹೋತ್ಸವಮಂ ಮಾಡಿಸುತ್ತ ಸಾಗಾರ ಧರ್ಮ್ಮನಿರತರಾ-ಗಿರ್ದ್ದರಿತ್ತಲು,

## ತುಳುದೇಶದ ಮುಖತಿಲಕ ನಗಿರರಾಜ್ಯ

ಕಂ || ತುಳುದೇಶಮೆಂಬ ಕಾಂತೆಯ
ವಿಲಸನ್ಮುಖಕಮಲಕೆಸೆವ ತಿಲಕಮೆನಿಪ್ಪಾ
ಚೆಲುವಂ ತಳೆದುದು ನೋಡ-
ಲ್ಕಿಳೆಯೊಳಗೀ **ನಗಿರರಾಜ್ಯ**ಮತನುನಿವಾಸಂ ||೬೦||

ಮ. ವಿ.|| ಸರದಿಂ ಪುಷ್ಕರದಿಂ ಸರಿತ್ಪ್ರತತಿಯಿಂ ಮಾಕಂದಚೆಂದೆಂಗಿನಿಂ
ಪರಪುಷ್ಟಭ್ರಮರಂಗಳಿಂ ಕಳಮಸತ್ಕೇದಾರಸಂಘಾತದಿಂ
ಗಿರಿಯಿಂ ನಿರ್ಝ್ಝರದಿಂ ಮಡಂಬಕುಲದಿಂ ಖೇಡಂಗಳಿಂ ಖರ್ವ್ವಡೋ-
ತ್ಕರದಿಂ ಗ್ರಾಮದಿ ದೇಶಮೊಪ್ಪುಗು ನಗಿತ್ರಾನೆಂಬ ಸನ್ನಾಮದಿಂ ||೬೧||

## ಗೇರಸೊಪ್ಪೆ

ವ|| ಅಂತೆಸವ ನಗಿರರಾಜ್ಯದ ಮಧ್ಯಪ್ರದೇಶದೊಳು,

ಮ. ವಿ.|| ಬಳಸಿರ್ದ್ದೊಪ್ಪುವ ನಂದನಾವಳಿಗಳಿಂ ಕಾಸಾರನೀರೇಜದಿಂ
ಕಳಧೌತೋಜ್ಜ್ವಲ ಸಾಲ ಕೊತ್ತಲಗಳಿಂದಟ್ಟಾಲಜಾಲಂಗಳಿಂ
ವಿಲಸದ್ಗೋಪುರದಿಂ ಸುಹರ್ಮ್ಯಚಯದಿಂ ಶ್ರೀಜೈನಗೇಹಂಗಳಿಂ
ಚೆಲುವಂ ತಾಳ್ದಿದ **ಗೇರುಸೊಪ್ಪೆ**ಯನಣಂ ಕೊಂಡಾಡಲಾರ್ಬ್ಬಲ್ಲರೇ ||

## ಭೈರವೇಂದ್ರನ ಕೀರ್ತಿಡಂಗುರ

ಚಂ|| ಕಡಲುಱೆ ತುಳ್ಕೆ ದಿಕ್ಪತಿಗಳಳ್ಕೆ ದಿಶಾಗಜಮುಳ್ಕೆ ಭೂತಳಂ
ಜಡಿಯೆ ಕುಲಾಚಲಂ ಕೆಡೆಯೆ ವೈರಿನೃಪಾಲರ ಹೃದ್ಘಟಂಗಳಂ-

1–1. ಈ ಮಧ್ಯದಲ್ಲಿ 'ಶಕವರುಷ' ಎಂದಿದ್ದು ಅದರ ಮುಂದೆ ಸು. ೨೦ ಅಕ್ಷರಗಳನ್ನು ಕಂಡರಿಸುವಷ್ಟು ಹುಸಿ ಇಂಬಿದೆ.

ತೊಡೆಯೆ ಧಡಂ ಧಡಂ ದಢದಢೆಂದುದು ಭೂರಿಗಭೀರಭೇರಿ ಧೀಂ-
ಕಿಡೆ ವಿಜಯಪ್ರಯಾಣದೊಳು **ಭೈರವಭೂವರ**ನೇಂ ಪ್ರತಾಪಿಯೊ ||೫೩||

ಮ. ವಿ.|| ಅರಿಭೂಪಾಲರ ದೇಶಮಂ ನಗರಮಂ ಭಂಡಾರಮಂ ಕೊಂಡು ಸಂ-
ಗರದೊಳ್ಜೀವವನಿತ್ತಡಾ[1] ರಿಪುನೃಪರ್ದ್ದೇಶಾಂತರಂ ಪೋಗಿ ಸಂ-
ಚರಿಪರ್ದ್ದಂಡಕಮುಂಡಲಾಜಿನಜಟಾಭಸ್ಮಾಂಗದಿಂದಾವಗಂ
ತಿರಿವರ್ಬ್ಭೈರವ ಭೈರವೆಂದು ಭಯದಿಂ ಶ್ರೀಭೈರವಕ್ಷೋಣಿಪಾ ||೫೪||

ಚಂ|| ಮಱೆವುಗೆ ಕಾವರೆಂಬರದು ಗಣ್ಯವೆ ನೀರ್ಮ್ಮರ ಪುತ್ತು ಪುಲ್ಗಳುಂ
ಮಱೆವುಗೆ ಕಾಯುವೇ ದಿಟ ದರಿದ್ರದ ಕೋಟಲೆಗಳ್ಕಿ ಬಳ್ಕಿ ಬಂ-
ದರನುಱೆ ಕಾಯ್ದು ತನ್ನ ಸಮನಾಗಿಯೆ ಮಾಳ್ಪ ಮಹಾತ್ಮೆಗೀತ ತಾ-
ನೆಱೆಯನೆನುತ್ತ ಸಾಱುವುದು ಭೈರವರಾಜನ ಕೀರ್ತ್ತಿಡಂಗುರಂ ||೫೫||

ಉ.ಮಾ|| ಕಲ್ಪಿಸಿದಂತುಟಂ ಕೊಡುಗು ಕಲ್ಪಕುಜಂ ತ್ರಿದಶರ್ಗ್ಗೆ ನಾಕದ-
ಲ್ಲಿಪ್ಪುದು ಚೋದ್ಯಮಲ್ಲ ದಿಟ ನಿನ್ನಯ ಹಸ್ತಸುರೇಂದ್ರಭೂಜ ತಾ-
ನಿರ್ಪುದು ಧಾತ್ರಿಯಲ್ಲಿ ಬುಧಯಾಚಕರಿಂಗೆಯನೇಕವಸ್ತುವಂ
ಕಲ್ಪಿಸದೀವುತಿಪ್ಪುದದು ಚೋದ್ಯವು ಭೈರವಮಂಡಲೇಶ್ವರಾ ||೫೬||

## ಭೈರವನ ಜಿನಧರ್ಮಕಾರ್ಯಗಳು

ವ|| * * ಭೈರವಕ್ಷ್ಮಾಪಾಲಂ ನಿಜರಾಜಧಾನಿಯಪ್ಪ ಗೇರಸೊಪ್ಪೆಯ ಚೈತ್ಯಾಲಯಂಗಳಲ್ಲಿ ಸಂಹಿತಶಾಸ್ತ್ರೋಕ್ತಕ್ರಮದಿಂ ನಿತ್ಯಪೂಜಾಮಹೋತ್ಸವಮಂ ಶ್ರೀಬಲಿವಿಧಾನಮಂ ಆಹಾರಾದಿ ಚತುರ್ವಿಧದಾನಮಂ ಪ್ರತಿದಿನಂ ನಡವಂತು ನಿಯಮಿಸಿದನಂತುಮಲ್ಲದೆಯುಂ

ಕಂ || ಧರೆಯೊಳಗತಿಶಯ ಬೆಳುಗುಳ-
ಪುರದೊಳಗಂ ಚಂದ್ರಗುತ್ತಿ ಹೊನ್ನಾವುರದೊಳ್
ವರಜಿನಪೂಜೋತ್ಸವಮಂ
ವಿರಚಿಸಿ ಶ್ರೀಬಲಿವಿಧಾನಮಂ ಮಾಡಿಸಿದಂ ||೫೭||

ವ|| ಅದಲ್ಲದೆಯುಂ * * * ವರಗುರು ವೀರಸೇನಮುನಿನಾಥಂ ಭೈರವಂಗೆ ಪೇಳೆ ಕೇಳ್ದು ಹರ್ಷೋತ್ಕರ್ಷಚಿತ್ತದಿಂದಿಂತಪ್ಪ[2] ಸ್ಥಾನದೊಳ್ಧರ್ಮ್ಮಮಂ ಮಾಳ್ಪುದುತ್ತಮಮೆಂದು ತನ್ನ ಮನದೊಳ್ಬಗೆದಾ ವೇಣುಪುರದ ಭವ್ಯಜನಂಗಳಂ ಕರಸಿಯೊಡಂಬಡಿಸಿಯಾ ಚಂದ್ರಜಿನಮಂದಿರದೊಳ್ಮಾಡಿದ ಧರ್ಮ್ಮಮೆಂತೆಂದೊಡೆ,

---

1. ಕಾಳೆಗದಲ್ಲಿ [ಈ ಭೈರವನು] ಜೀವವನ್ನು ಕೊಟ್ಟಡೆ (ಉಳಿಸಲಾಗಿ)
2. ಇಂತಪ್ಪ : ಇಂತಹ = ವೀರಸೇನನು ವಿವರಿಸಿ ಹೇಳಿದ ವೇಣುಪುರದಂತಹ

## ತೃತೀಯ ನಿಲಯಕ್ಕೆ ತಾಮ್ರದ ಹೊದಿಕೆ ಮತ್ತು ಪೂಜಾಸಾಮಗ್ರಿ

ಮ. ವಿ.॥ ಪುರುಹೂತೋರುಪುರಾಭ ವೇಣುಪುರದೊಳ್ಭವ್ಯಪ್ರ್ಲಮರ್ಮ್ಮಾಡಿಸ-
ಲ್ವರಚಂದ್ರಪ್ರಭಗೇಹಮಂ ತ್ರಿಭುವನೀಚೂಡಾಮಣಿಖ್ಯಾತಮಂ
ಭರದಿಂ ಮಾಡಿಸಿದಂ ತೃತೀಯ ನಿಲಯಕ್ಕಾ ಚೈತ್ಯಗೇಹಾಗ್ರದೋ
ಳ್ಕರ ಚೆಲ್ವಾಗಿರೆ ತಾಮ್ರದಿಂ ಪೊದಕೆಯಂ ಶ್ರೀಭೈರವಕ್ಷ್ಮಾವರಂ ॥

ಚಂ॥ ವಿಲಸದನಲ್ಪಧಾತುಪರಿರಂಜಿತಕೂಟನಗೇಂದ್ರದಂತೆ ಮೇ-
ಣಲಘುತರಾರುಣೋದಯವಶಾರುಣಿತಾಗ್ರತಟೋದಯಾದ್ರಿವೋ-
ಲ್ಕಲಿಯುಗ ಕರ್ಣ್ನ ಭೈರವಮಹೀಪತಿಕಾರಿತಕಮ್ರತಾಮ್ರನಿ-
ರ್ಮಲಪಟಲಾಳಿಯಿಂದೆಸೆವುತಿಪ್ಪ್ರದು ಕಣ್ಗೆ ಕರಂ ಜಿನಾಲಯಂ ॥೫೨೯॥

ಚಂ॥ ನಿಜಶುಚಿ ಚಂದ್ರನಾಥಯಜನಕ್ಕನುರೂಪತೆವೆತ್ತು ರಾಜಿಪಾ-
ರಜತಮಯಂಗಳಪ್ಪ ವಿಪುಲೋಜ್ಜ್ವಲಕುಂಭಘಟೀಗಣಂಗಳಂ
ರಜತದೆ ಮಾಡಿದಡ್ಡಣಿಗೆಯಂ ಪರಿಯಾಣಮನರ್ತ್ಥಿಭಕ್ತಿಯಿಂ
ರಜತದ ಠಾಣದೀವಿಗೆಗಳಂ ಪದೆದಿತ್ತನು ಭೈರವಾಧಿಪಂ ॥೫೩೦॥

ಕಂ ॥ ರಜತದ ಪೃಥುಪೀಠಮುಮಂ
ರಜತದ ಪರಿಪರಿಯ ಬಟ್ಟಲಂ ಗಿಂಡಿಯುಮಂ
ಯಜನಕ್ಕುಚಿತಂಗಳನಾ
ನಿಜಭುಜ ಬಲಶಾಲಿ ಭೈರವೇಶ್ವರನಿತ್ತಂ ॥೫೩೧॥

### ೧೧೩

**ಕೈಕಿಣಿ,** **ಕ್ರಿ. ಶ. ೧೪೮೮**

**ಭಟಕಳ ಪೇಠಾ,** **ಸಾಳುವೇಂದ್ರ**

ಕಾರವಾರ ಜಿಲ್ಲೆ (ಕ. ಇ. ೧, ಪು. ೧೫೬)

ಸಾಳುವೇಂದ್ರನು ಚಂದ್ರನಾಥ ಜಿನಾಲಯವನ್ನು ಕಟ್ಟಿಸಿ, ಅದಕ್ಕೆ ಅನೇಕ ದಾನಗಳನ್ನು ಕೊಟ್ಟಿದ್ದಾನೆ. ಜಿನಾಲಯ–ಮಾನಸ್ತಂಭಗಳ ಭವ್ಯತೆಯ ವರ್ಣನೆ, ಆತ ಕೊಟ್ಟ ನಾನಾ ಪೂಜಾ ಸಾಮಗ್ರಿಗಳ ವಿವರಣೆ ಚೆನ್ನಾಗಿದೆ.

## ಸಾಳುವೇಂದ್ರನ ದಾನಗಳು

ಕಂ॥ ಘನತರರತ್ನದ್ಯುತಿ ಕಾಂ-
ಚನರುಚಿಗಳ್ಮಿಱುಗೆ **ಸತ್ಪ್ರಭಾವಳಯ**ಮನೊ-

ಲ್ದನುಗೆಯ್ಸಿ ಭಕ್ತಿ ಕೈಮಿಗೆ
ಜಿನಪತಿಗರ್ಪ್ಪಿಸಿದನಾ ನರಾಧಿಪತಿಲಕಂ ||೫೩೨||

ಅಪರಿಮಿತ ಕನಕ ರಜತದಿ-
ನಪೂರ್ವ್ವತರಚಿತ್ರರಚನೆ ಮಿಗೆ ರಚಿಯಿಸಿದೀ
**ಉಪಕರಣಂಗಳ್ಗು**ರಿತಮ-
ನಪಹರಣಂ ಗೆಯ್ಯದಿರವೆನಲ್ಕರ್ಪ್ಪಿಸಿದಂ ||೫೩೩||

ಎಂಟುಂ ದೆಸೆಗಳ ನಾದಂ
ವೆಂಟಣಿಸೆ ನಿನಾದವೊಳ್ಪನೆಸಗುವ **ಮೂಲಾ-**
**ಘಂಟೆ**ಯುಮಂ ಸೊಗಯಿಸು**ವೈ-**
**ಗಂಟೆ**ಯುಮಂ ಚಂದ್ರನಾಥಗೃಹಕರ್ಪ್ಪಿಸಿದಂ ||೫೩೪||

ವಿತತಶ್ರೀಬಲಿ ತೂರ್ಯ್ಯ-
ತ್ರಿತಯದ ವೈಭವದನೂನ ನಿತ್ಯೋತ್ಸವ ಸಂ-
ತತಿ ಎಡವಱಿಯದವೋಲ್ಸು-
ಸ್ಥಿತಿಗೆಯ್ದರ್ಪ್ಪಿಸಿದನಮಿತ **ಪರಿಚಾರಕ**ರಂ ||೫೩೫||

ದರ್ಪ್ಪಕನ ವಿಪುಳತರ ಭುಜ-
ದರ್ಪ್ಪವನುಱೆ ಮುಱಿದು ಭವ್ಯಜನಹೃದಯದೊಳೊ-
ಲ್ದಿರ್ಪ್ಪ ಜಿನಕೋಶಗೃಹಕೆಂ-
ದರ್ಪ್ಪಿಸಿದನನೂನಭಕ್ತಿಯಿಂ **ಬಹುಧನಮಂ** ||೫೩೬||

ಧಾರಾಪೂರ್ವ್ವಕಮನುಷ್ಟಮಿ–
ತಾರಾಮಂ ಬೆರಸು ದುಷ್ಟಜನಕಂಟಮಂ
ಬಾರಿಸಿ ಚಂದ್ರಜಿನಾಂಘ್ರಿಸ–
ರೋರುಹಕಪರಿಮಿತ **ಭೂಮಿ**ಯುಂ ಪಡೆದಿತ್ತಂ ||೫೩೭||

ಚತುರ್ವ್ವಿಧದ ದಾನಮಂ ಕುಡ–
ಲತಿಹರ್ಷದೆ ದರ್ಶನಾದ್ಯ ಚಾತುರ್ವ್ವರ್ಣ್ಣ–
ಕ್ಕತುಳಮನಂ ಸಾಳ್ವೇಂದ್ರ–
ಕ್ಷಿತಿಪಂ **ಸದ್ವಿತ್ತವೃತ್ತಿ**ಗಳನರ್ಪ್ಪಿಸಿದಂ ||೫೩೮||

ವ|| ಅಂತು ಭುವನನುತಚರಿತಂ ಜಿನೇಂದ್ರಭಕ್ತಿಭರಿತಂ ಪರಮಗುರು ಪಂಡಿತಾರ್ಯ್ಯಚರಣಾರವಿಂದ ಮತ್ತಮಧುಕರಂ ಸಾಳುವೀಂದ್ರ ನೃಪಚಂದ್ರ ಚಂದ್ರಪ್ರಭತೀರ್ತ್ಥೇಶ್ವರನಂ ಪ್ರತಿಷ್ಠಾಪಿಸಿ, ತದ್ಬಿಂಬಮಂ ನೆನೆದ ನೋಡಿದ ಪೂಜಿಸಿದ

ಭವ್ಯಕ್ಕೃತಾರ್ತ್ಥರಪ್ಪಂತೆ ಗೆಯ್ದು ಪುಣ್ಯಮನುಪಾರ್ಜ್ಜಿಸಿ ಕೀರ್ತ್ತಿಯಂ ಪೆರ್ಚ್ಚಿಸಿ ದುಷ್ಟರಂ ಸಂತರ್ಜ್ಜಿಸಿ ಶಿಷ್ಟರಂ ಪರಿಪಾಳಿಸಿ ಸಾಮ್ರಾಜ್ಯಸಂಪತ್ತಿಯಿಂ ಭೂತಳಮ-ನಾಳುತ್ತಿರ್ದ್ದಂ.

## ಸಾಳುವೇಂದ್ರ ಪ್ರಶಂಸೆ

ಮ. ಸ್ರ|| ಅತಿಶೋಭಾರಮ್ಯವಾಯ್ತೀ ಜಿನಗೃಹವಿದನಾಂ ನೋಳ್ಪೆವೆಂದಳ್ತಿಯಿಂ ಪೊ-
ಕ್ಕು ತದಂತಃಸ್ಥಾಯಿ ಚಂದ್ರಪ್ರಭಜಿನಪತಿಪಾದಾಬ್ಜಮಂ ನಾಡೆ ಕಂಡು-
ನ್ನತಹರ್ಷಂಗೆಯ್ದುಮರ್ತ್ಯಪ್ರತತಿಯುನಿಳೆಯೊಳ್ಪಾವನಂ ಗೆಯ್ವ[1] ಲೋಕ-
ಸ್ತುತನಂ ನಾಳ್ವೇಂದ್ರನಂ ಪೋಲ್ತಪುದೆ ಚರಿತದೊಳ್ಮಿಕ್ಕಿನುರ್ವ್ವೀಶವರ್ಗ್ಗಂ ||
ಜಿನಪಾದಾಂಭೋಜಮಂ ಪೂಜಿಸದೆ ಜಿನಮುನೀಂದ್ರಪ್ರತಾನಕ್ಕಲಂಪಿಂ
ವಿನುತಾಹಾರಾದಿದಾನಂಗೊಡದೆ ಜಿನಮತಾಶ್ಲಿಷ್ಟಶಿಷ್ಟರ್ಗ್ಗೆ ಸೈತೊ-
ಳ್ಪಿನ ವಾತ್ಸಲ್ಯಮಂ ತಳ್ತೆಸಗದುಳಿದ ಕೃತ್ಯಂಗಳಂ ಮಾಡೆನೆಂಬೊಂ-
ದನುವೃತ್ತಂ[2] ಸಾಳುವೇಂದ್ರಕ್ಷಿತಿಪತಿತಿಲಕಂಗಲ್ಲದನ್ಯರ್ಗ್ಗಿದುಂಟೆ ||೫೪೦||

## ಚೈತ್ಯಾಲಯುದ ಸಿರಿಗೆ ಸರಿಯಿಲ್ಲಹೋ !

ಮ. ಸ್ರ.|| ತ್ರಿದಶೋರ್ವ್ವೀಶಕೂಟದೊಳ್ಮೈ ನಿವಿಡರ್ ನಿಲೆ ಹಟದ್ದೇವಕೂಟಂ ನಭೋರಂ-
ಗದೊಳೆತ್ತಂ ಪಂಚರತ್ನಪ್ರಭೆ ನಿಲೆ ನಿಖಿಲಾಶಾಂತದೊಳ್ಚಂದ್ರ ಗಂಗಾ-
ನದಿವತ್ಕೀರ್ತ್ತಿಧ್ವಜಂಗಳ್ನಿಲೆ ನಿಲಿಸಲೊಡಂ ಸಾಳುವೇಂದ್ರೇಂದ್ರನೇಂ ನಿಂ-
ದುದೊ ಮಾನಸ್ತಂಭಮುಕ್ಷಿದ್ಯುತಿವಿತತಲತಾಸ್ತಂಭಮುದ್ಭಾಸಿಕುಂಭಂ ||

ಸರಿಯಿಲ್ಲೀ ಸಾಳುವೇಂದ್ರಂಗಹಹ ಜಿನಮಹಾಧರ್ಮ್ಮದೊಳ್ನೋಳ್ಪಡೆತ್ತ-
ಲ್ಸರಿ ಇಲ್ಲಿಂ[3] ತುಂಗ ಚೈತ್ಯಾಲಯುದ ಸಿರಿಗಹೋ ಚಂದ್ರನಾಥಂಗದಾರುಂ
ಸರಿಯಿಲ್ಲೆಂದಷ್ಟದಿಙ್ಮಂಡಲವೞವಿನೆಗಂ ಸಾರುವಂತಾಯ್ತು ಬಾನೊ-
ಳ್ಪಿರಿದುಂ ತದ್ದೇವಕೂಟಸ್ಫುಟಘಟಿತಹಟದ್ರತ್ನಘಂಟಾನಿನಾದಂ ||೫೪೬||

---

1. ದೇವತೆಗಳು ಸ್ವರ್ಗದಿಂದ ಭೂಲೋಕಕ್ಕೆ ಬಂದು ಈ ಜಿನಬಿಂಬದ ಪಾದದರ್ಶನ ಪಡೆದು ಪಾವನರಾಗುತ್ತಾರೆ ಎಂಬುದು ಭಾವಾರ್ಥ.

2 ಶಾ. ಮೂ.: ದನವೃತಂ

3. ಇಲ್ಲ + ಇಂ (ಇನ್ನು)

## ೧೧೪

**ಹೊಗೇಕೆರೆ,** **ಕ್ರಿ. ಶ. ೧೪೪೭**

**ಸಾಗರ ತಾಲೂಕು,** **ಸಾಳುವೇಂದ್ರ**

ಶಿವಮೊಗ್ಗೆ ಜಿಲ್ಲೆ (ಎಪಿ. ಕ. ೮, ಭಾ. ೨, ಪು. ೩೩೫)

### ಉದಾರಚರಿತ ಪದ್ಮಣಾಂಕ ಮಂತ್ರಿ

ಹಿತನೂ ನಿಪುಣನೂ ಅನ್ವಯಾಗತ ಮಂತ್ರಿಯೂ ಆದ ಈತನಿಗೆ ಸಾಳುವೇಂದ್ರನು ಒಗೆಯಕೆರೆ(ಈಗಿನ ಹೊಗೇಕೆರೆ)ಯನ್ನು ಮೆಚ್ಚುಗೊಟ್ಟನು. ಆಗವನು 'ನನಗೀಗ ಏತರ ಕೊರತೆಯೂ ಇಲ್ಲ. ಅರಸು ಈಗ ಕೊಟ್ಟುದೆಲ್ಲವನ್ನು ನನಗೆ ಧರ್ಮವು ಚಿರವಾಗಿ ನಿಲ್ಲುವಂತೆ ವಿನಿಯೋಗಿಸುವೆ' ಎಂದು ಬಗೆದು ಜಿನಮಂದಿರವನ್ನು ಕಟ್ಟಿಸಿ, ಅದರ ಆಚಂದ್ರಾರ್ಕ ಪೂಜಾ-ವ್ಯವಸ್ಥೆಗೆ ವೃತ್ತಿಗಳನ್ನು ಹಾಕಿಕೊಟ್ಟನು.

ಮ. ವಿ.॥ ಹಿತನೀತಂ ಪ್ರಿಯಸತ್ಯವಾದಿ ನಿಪುಣಂ ಧರ್ಮ್ಮಾರ್ತ್ಥಸಂಪಾದಕಂ
ಚತುರಂ ಸಚ್ಚರಿತಂ ದಯಾದ್ರ್ರಹೃದಯಂ ಶಾಸ್ತ್ರಜ್ಞನೆಮ್ಮನ್ವಯಾ-
ಗತನೀ **ಪದ್ಮಣಮಂತ್ರಿ**ಯೆಂದೆಡೆ ಕುಳಿರ್ಕ್ಕೊದಲ್ಕೆ ಸಾಳ್ವೇಂದ್ರಭೂ-
ಪತಿಯಾಚಂದ್ರಧರಾರ್ಕ್ಕವಿತ್ತನುೞಿ ಮಾನ್ಯಗ್ರಾಮಸಂಪತ್ತಿಯಂ ॥

ಕಂ॥ ಪ್ರಭುಗಳ್ಪ್ರರಜನ ಪರಿಜನ-
ಸಭಾಸದರ್ಮ್ಮೆಚ್ಚೆ ಸಾಳುವೇಂದ್ರನೃಪಾಲಂ
ವಿಭವದಿ ಪದ್ಮಣಮಂತ್ರಿಗೆ
ಶುಭಮಸ್ತ್ವೆಂ**ದೊಗೆಯಕೆಱೆ**ಯನವನೊಲ್ದಿತ್ತಂ ॥೫೪೪॥

### ಪದ್ಮಣನ ಉದಾರವಿಚಾರ

ಮ.ವಿ.॥ಎನಗೀ ಭೂಪಕೃಪಾವಲೋಕನದಿನೆನ್ನೀ **ಪೋಷ್ಯವರ್ಗ್ಗ**ಕ್ಕೆ ತ-
ಕ್ಕನಿತುಂಟೇ ಧನಧಾನ್ಯ ಸಂಪದಮದೀ ಸಾಳ್ವೇಂದ್ರನೊಲ್ದಿಂತು ಕೊ-
ಟ್ಟನಿತುಂ ಗ್ರಾಮಮನೆಂತು ಧರ್ಮ್ಮಮೆನಗಾಚಂದ್ರಾರ್ಕ್ಕಮಪ್ಪಂತು ಮಾ-
ಳ್ಪೆನಿದೊಂದೇ ಕಡೆಗಂಡ ಕಜ್ಜಮೆನುತುಂ ನಿಶ್ಚಯಿಸಿದಂ ಚಿತ್ತದೊಳ್ ॥

ಮ.ಸ್ರ ॥ಜಿನಚೈತ್ಯಾವಾಸಮಂ ಮಾಡಿಸಿ ಸಮುಚಿತಸಾಲಾದಿಯಿಂ ಕೂಡಿ ಪಾರ್ಶ್ವೇ-
ಶನ ಬಿಂಬಸ್ಥಾಪನಂಗೆಯ್ದನುದಿನಮೆಸೆಯಲ್ನಿತ್ಯಪೂಜಾಬಿಧಾನಂ
ಮುನಿದಾನಂ[1] ತಪ್ಪದೊಳ್ಪಿಂದೊಗೆಯಕೆಱೆಯೊಳಪ್ಪಂತೆ ತಾಂಕೊಟ್ಟನೀ ಶಾ-
ಸನಮಂ ತಚ್ಛಾಸನಪ್ರಾಂತದೊಳೆ ಬರಸಿದಂ ಪದ್ಮಣಾಂಕಪ್ರಧಾನಂ ॥

---

1. ಮುನಿದಾನ : ಮುನಿಗಳಿಗೆ ದಾನ.

## ಸಂಗೀತಪುರ

ಈ ಹೆಸರು ಕಾರವಾರ ಜಿಲ್ಲೆಯಲ್ಲಿರುವ ಈಗಿನ ಹಾಡುವಳ್ಳಿಯ ಸಂಸ್ಕೃತ ರೂಪ. ಭರತಾರ್ಯಾಖಂಡದ ನೈಋತ್ಯ ಮೇರೆಯ ಉಪಸಾಗರದ ಉಪಕಂಠದಲ್ಲಿ ವರ್ಣಾಶ್ರಮ ಧರ್ಮ-ಯುಕ್ತವಾಗಿಯೂ ಏಳು ಬಗೆಯ ಸಂಪತ್ತುಳ್ಳುದಾಗಿಯೂ ತುಳುದೇಶ ಶೋಭಿಸುತ್ತಿತ್ತು. ಸಂಗೀತಪುರ ಎಂಬ ಹೆಸರು ಕವಿ ಗಮಕಿ ಗಾಯಕ ಕಲಾವಿದರಿಂದ ಯಥಾರ್ಥವಾಗಿತ್ತು.

ಶಾ.ವಿ.॥ ಶ್ರೀಮದ್ಭೂಭುವನಪ್ರಸಿದ್ಧತರ ಜಂಬೂದ್ವೀಪಮಧ್ಯಸ್ಥ ತುಂ-
ಗಾಮರ್ತ್ಯಾಚಲ[1] ದಕ್ಷಿಣಾಂತ್ಯ ಭರತಾರ್ಯ್ಯಾಖಂಡ ನೈರುತ್ಯದಿ-
ಕ್ಸೀಮೋಪಾಬ್ಧಿ ತಟೋಪಕಂಠ ವಿಲಸದ್ವರ್ಣ್ಣಾಶ್ರಮಾಕೀರ್ಣ್ಣ ಭೂ-
ಧಾಮಂ ತೌಳವ ದೇಶಮಿಪ್ಪುದಿಳೆಯೊಳ್ಸಪ್ತಾಂಗ ಸಂಪತ್ತಿಯಿಂ ॥೫೪೭॥

ಮ.ಸ್ರ.॥ ಅದಱೊಳ್ಮಾಂಗಲ್ಯಗೇಹಂ ಬಹುವಿಧವಿಭವ ಪ್ರೋಲ್ಲಸಚ್ಚೈತ್ಯಗೇಹಂ
ಸುದತೀಸಂತಾನ ಜನ್ಮಾಲಯಮಖಿಲ ಸುಖಿ ತ್ಯಾಗಿ ಭೋಗಿ ಪ್ರವಾಹಂ
ಮದವದ್ದಂತ್ಯಶ್ವಯೂಥ ಪ್ರಬಲಪಟುಭಟಾಕೀರ್ಣ್ಣಮುತ್ತುಂಗ ಸೌಧೋ-
ದಯ ರಾಜದ್ರಾಜ **ಸಂಗೀತಪುರ**ಮೆಸೆಯುಲ್ ಪ್ರೌಢಸಂಗೀಯಮಾನಂ॥

ಕಂ॥ ಕವಿ ಗಮಕಿ ವಾದಿ ವಾಗ್ಮಿ
ಪ್ರವೇಕ ಸಂಗೀತವಿಷಯ ಸಾಹಿತ್ಯರಸೋ-
ದ್ಭವ ಚತುರ2-2ಸಂಸ್ತುತ
ವಿವಿಧ ಕಲಾಭಂಗಿ ಸಂಗಿ ಸಂಗೀತಪುರಂ ॥೫೪೯॥

---

1. ತುಂಗ (ಎತ್ತರವಾದ) + ಅಮರ್ತ್ಯ (ಸುರ) + ಅಚಲ (ಪರ್ವತ) : ಮೇರು

2-2. ಇಲ್ಲಿ ಮೂರು ಮಾತ್ರೆಗಳ ಅಕ್ಷರ ಹೋಗಿವೆ. ವಿಬುಧ ಇಲ್ಲವೆ ಮಹೀ ಎಂದು ಸೇರಿಸಿಕೊಳ್ಳಬಹುದು.

# ಶಬ್ದಕೋಶ

[ಕಂಸದೊಳಗಿನ ಸಂಖ್ಯೆಗಳು ಶಾಸನಗಳ ಕ್ರಮಾಂಕಗಳು]

[೧] ಎಱಿದು=ಇರಿದು; ಬಾಳ್ಗಟ್ಟಿ=ವೀರರಿಗೆ ಕೊಡುವ ಪುರಸ್ಕಾರ. [೩] ಮುದುತಾಯ್=ಅಜ್ಜಿ; ಇಟ್ಟು=ಇದ್ದು; ಕಿಸು=ಬಂಗಾರ. [೪]ಕಟ್ಟಿ= ಕಚ್ಚಿ, ತೊಳೆದು; ಬ್ರಹ್ಮಾತಿ=ಬ್ರಹ್ಮಹತ್ಯೆ; ಗೋಷ್ಠಿ=ಸಾಕ್ಷಿ. [೫] ಬೇಳ್ವ= ಹೋಮಮಾಡುವ; ಗೊರವ=(ಶೈವ)ಗುರು. [೬] ದಣ್ಡವೇಳ್=ದಂಡು(ತರಲು) ಹೇಳು; ಇವ್ವುಳಿ=ಅಸಾಧ್ಯವಾಗು. [೭] ಓವದೆ=ರಕ್ಷಿಸದೆ; ತೂನ್ತು=ತುರುಕು; ಅಳವು=ಅಗ್ಗಳಿಕೆ; ಎರೆ=ಕೊಡು; ಎಯ್ದುವ=ತಲಪುವ, ನಿಲುಕುವ; ಪೊದಳ್ದ= ಪ್ರಸಿದ್ಧವಾದ; ಆಳ್ದ=ತಳೆದ; ಗಾವರಿಸು=ದನಿಮಾಡು; ದಾಂಗುಡಿ=ನೀಳವಾದ ಕುಡಿ; ಅಳುಂಬ=ಅಧಿಕ(ಮಿಕ್ಕ), ಅದ್ಭುತ; ಅಳುರ್ಕೆ=ಹೆಚ್ಚಳ(?); ಅಪ್ಪುಗಾಯ್ (ಗಯ್)=ಹೆಸರಾಗು; ಬಿಣ್ಪು=ಘನತೆ; ಪೆಂಪು=ಶ್ರೇಷ್ಠತೆ; ಮಿಳಿರ್=ಸಂಚ ಲಿಸು; ನಡೆ=ಚೆನ್ನಾಗಿ; ಎಸಕ=ಪ್ರಭಾವ; ಓಜೆ= ಯೋಗ್ಯತೆ, ಕ್ರಮ; ತಳ್ಪೊಯ್=ಧೀಂಕಿಡು. [೮] ಗುಣ್ಡು(ಡ್ಡು?)=ಶಿಷ್ಯ(?); ಕುತ್ತು=ತಿವಿ, ಚುಚ್ಚು; [೯] ಈಡಿತ = ಪ್ರಸಿದ್ಧ; ಗೊಂದಳ = ಸಮೂಹ. [೧೦] ಅಂಕಕಾಱ=ಕಾದಾಳು; ಉಱದೆ=ಧೈರ್ಯದಿಂದ; ತಳ್ತು=ಇದಿರಾಗಿ; ಪೊಟ್ಟಳಿಸು = ಗರ್ವಿಸು; ಸೆರಗುವಾಱ್ = ಅಂಜುಕುಳಿಯಾಗಿ ಬಾಳು; ಸುರಿಗಿಱಿ=ಚೂರಿಯಿಂದ ಇರಿ; ಬಾಳ್=ಖಡ್ಗ. [೧೧] ಓಳಿಯೆ=ಸಾಲಾಗಿ; ಪಂದಲೆ=ಹಸಿತಲೆ (ಆಗತಾನೆ ಕತ್ತರಿಸಿದುದು); ಕೋ=ಪೋಣಿಸು; ಊಱ= ಗಟ್ಟಿಯಾಗಿ; ಒಟ್ಟಜೆ=ಪರಾಕ್ರಮ. [೧೩] ಕೊಸಗು=ಬೆಟ್ಟದಾವರೆ, ಕರ್ಣಿ ಕಾರ; ಅಂಕ=ಪ್ರಸಿದ್ಧ; ತಳ್ವು=ವಿಲಂಬ; ಚಳವಾದ=ತಪ್ಪಿದ; ಆವೊತ್ತುಂ= ಯಾವಾಗಲೂ; ಬಾವಳಿಸು=ದನಿಮಾಡು; ಪುರುಳಿ=ಹೆಣ್ಣುಗಿಳಿ; ಶಿಳೀಮುಖ= ಭ್ರಮರ; ಕೆಪ್ಪುರ್=ಕೆರವು. [೧೪] ದೊರೆ=ಸಮಾನ; ಸಮನ್ತು=ಚೆನ್ನಾಗಿ; (ಪ್ರೀತಿಪೂರ್ವಕ); ಒವಟ=ಸವಳು(?) ಜವಳು (?); ಚಾವುಗಾಮಿಗಳು= ಚೌಗ್ರಾಮಿಗಳು, ನಾಲ್ಕೂರವರು; ಆಟಿಸು=ಬಯಸು; ಕಯ್ಯಾನ್ತು=ಕೈಯೊಡ್ಡಿ. [೧೫] ನಡಪು=ಸಲಹು. [೧೬] ಬೆಸ=ಅಪ್ಪಣೆ; ಬಲ್ಲಣಿ=ಕಾಲಾಳು; ಅಟ್ಟುಂ- ಬರಿಗೊಳ್=ಅಟ್ಟಿಕೊಂಡುಹೋಗು. [೧೮] ನೋನ್=ವ್ರತಮಾಡು; ಮುಡಿಪು=ಮೊಸಲಿಡು, ಕೊನೆಗೊಳಿಸು. [೧೯] ನನ್ನಿ=ಸತ್ಯ; ಆರಮೆ= ಆರಾಮ, ಉಪವನ. [೨೦] ಕುಱುವ=ದ್ವೀಪ. [೨೧] ಕೂರ್ಪ=ಪ್ರಿಯ [೨೨] ಸುರಿಗೆ=ಕಿರುಗತ್ತಿ; ಎಳೆ=ಭೂಮಿ. [೨೪] ಮಾಂತನ = ಮಾನತನ, ಗೌರವ;

ಅಗುಂತಿ = ಹೆಚ್ಚುಳ, (ನಿಧಿ?); ಎಱಿವಟ್ಟು = ಆಶ್ರಯ. [೨೬] ಪರಿಯಿಡು = ಏರಿಬರು; ಅಗಿ = ಅಂಜು; ಮುಗ್ಗುರ = ಕಳೆಗುಂದು; ಬಾದು = ವಾದ; ತಿಂತಿಣಿ = ಸಂದಣಿ. [೨೭] ಅಗುಂದಲೆ= ಹೆಚ್ಚಳ; ಅಡಪ್ಪುರ= ಆಶ್ರಯ. [೨೯] ಉಂತೆ= ಸುಮ್ಮನೆ (ಅಂತು, ಇಂತು, ಉಂತು). [೩೨] ಪುದಿ= ತುಂಬು, ತೀವು; ಓಜೆ= ಕ್ರಮ, ರೀತಿ; ಅಮುಬ್ದಿ = ಅಮೃತ; ಮಯೂಖ= ಕಿರಣ; ಆಸ್ಪದ= ಸ್ಥಳ (ಸ್ವರ್ಗ); ಪೊದಳ್ಪು= ವ್ಯಾಪ್ತಿ; ರೋಷಿಸು= ಹೀಯಾಳಿಸು; ಕೊಂಟು= ಕಚ್ಚು; ತಿನ್= (ಚೇಳು) ಕಡಿ; ಸಮನಿಕ್ಕೆ= ದೊರೆಯಲಿ, ಉಂಟಾಗಲಿ, [೩೩] ಎಣೆ= ಸಮಾನ; ಲವನ= ಮುಖ; ನೈಷ್ಠಿಕ= ಬ್ರಹ್ಮಚರ್ಯನಿಷ್ಠ. [೩೪] ಗಾಡಿ= ಸೊಬಗು. [೩೫] ಅವಯುವ= ದೋರ್ಬಲ; ಪುದುವಾಳ್= ಕೂಡಿಕೊಂಡು ಬಾಳು; ಪುರುಡಿಸು = ಹೊಟ್ಟೆಕಿಚ್ಚುಪಡು. [೩೭] ದೇಹಾರಿ= ಪೂಜಾರಿ; ಕಂಡರಿಸು= ಕಲ್ಲಲ್ಲಿ ಕೊರೆ. [೩೯] ತಱಿಸಲ= ನಿಶ್ಚಯ; ಕಾಲು= ಕಾಲುವೆ. [೪೦] ಪಳಯಿಗೆ= ಪತಾಕೆ; ಬಾರಿಸು= ತಡೆ; ಕಳವೆ= ಬತ್ತ. [೪೨] ಭುಂಭುಕ= ಅದ್ಭುತ; ಎಯ್ದಿಸು= ಪೂರ್ತಿಗೊಳಿಸು; ಆಳಾಪದಿಂ= ಲೀಲಾಜಾಲವಾಗಿ. [೪೩] ಅಗುರ್ವ್ವು(ಬ್ಬು)= ಭಯಂಕರತೆ; ಪೆಱಿಗಿಡು= ಬೆನ್ನಿಗಿಡು. [೪೪] ಎಕ್ಕಲಾವಣ= ಮಿಸಲು(?); ಪಡಿಚೆಂದ= ಪ್ರತಿ(ಮಾದರಿ)ಸೌಂದರ್ಯ; ನಾಡಾಡಿ= ಜಗಜ್ಜನ; ಸಮಕಟ್ಟು= ವ್ಯವಸ್ಥೆಮಾಡು; ಕಾಗಿಣಿ (ಸಂ. ಕಾಕಿಣೀ)= ಕವಡೆ. [೪೫] ಉಡೆಯುಚ್ಚು= ಕಣ್ಣಿಬಿಚ್ಚು (?); ಕಡಂದುಱು= ಕಡಿಜೀರಿಗೆಹುಳ; ನೆಱಿ= ಪೂರೈಸು; ಮೊಬ್ಬುರ= ಸಮೂಹ; ಕೊಂತ= ಈಟಿ; ಊಡಾಗಿ= ಆಹಾರವಾಗಿ. [೪೭] ಕಗ್ಗ= ಕಪ್ಪು, ಕಿಲುಬು; ಕತ್ತಳ= ಜಂಗು. [೫೫] ಪಚ್ಚುಕೊಡು=ಹಂಚಿಕೊಡು; ಆಳ್ವೆಸ=ಆಳಿನ ಕೆಲಸ; ರಸೆ=ಭೂಮಿ; ಮುನ್ನೀರ್= ಸಮುದ್ರ; ಎಱಿವಟ್ಟು=ಬೀಡು. [೫೬] ಸೆಡೆ=ಅಂಜು; ಅಱ=ಧರ್ಮ. [೫೮] ಪದುಳಿಕೆ=ಭಾಗ್ಯ; ಅಗುರ್ವ್ವಿನ=ಅದ್ಭುತವಾದ; ಬಬಾಪ್ಪು=ಭಾಪು; ಪದೆ= ಪ್ರೀತಿಸು; ತೊನೆ=ತೊಣೆ, ಸರಿ. [೫೯] ಅಳ್ಕುಱದೆ=ಅಂಜದೆ. [೬೦] ಪಡಿಕಟ್ಟಳೆ = ಪ್ರತಿಕೃತಿ. [೬೨] ಹೇರಱಿಕೆ=ಮಹಾಪ್ರಸಿದ್ಧಿ. [೬೫] ಪಸಾಯಿತ=ಮೆಚ್ಚಿಗೆಯವ (ಪ್ರಸಾದಿತ); ಗೆಂಟಱು=ಗೆಂಟು, ಅಂತರ. [೬೬] ಮಾನಸಿಕ್ಕೆ=ಚಿತ್ತವೃತ್ತಿ; ರೂಡಿ=ಪ್ರಸಿದ್ಧಿ. [೬೯] ಸೋ=ಹೊಡೆದೋಡಿಸು; ಮಂತಣ=ಮಂತ್ರಾಲೋಚನೆ; ತವಿಸು=ವ್ಯಯಿಸು. [೭೫] ದೀರ್ಘಿಕಾ=ಹೊಂಡ, ಕೆರೆ; ಕಡೆ=ಕಟ; ಕಂಡರಿಸು=ಕಲ್ಲಲ್ಲಿ ಕೊರೆ; ಕಮ್ಮಯಿಸು=(ಕರ್ಮಯಿಸು?)ಮಾಡು; ರೂವಾರ=ಶಿಲಾಶಿಲ್ಪ. [೭೬] ಎತ್ತಿಸು=ಕಟ್ಟಿಸು; ಪಾಂಗು=ರೀತಿ. [೭೭] ಕವದ್ದುಕೊಳ್= ಕಸಿದುಕೊಳ್ಳು. [೭೮] ಬಂಟು=ಶೌರ್ಯ; ತೆಂಟಣಿಸು (ಟೆಂಟಣಿಸು)=ಏರಾಟವಾಡು; ಬಿಱು=ಭಯಪಡು; ಕುನುಂಗು=ಮುದುಡಿಕೊಳ್ಳು; ಜವ್ವು(ಜಬ್ಬು)= ದರ್ಪ; ಪುದು=ಹುದುವು, (ಸರಿ) ಪಾಲು; ಕೊಂಡೆಯ=ಕೇಡಿ. [೮೦] ಪಡಿ=

ಬಾಗಿಲು (ಕಾಯುವವ?); ತೌಮೊನೆ=ಹರಿತವಾದ ಧಾರೆ; ಬಾರು=ಚರ್ಮ; ಪೌವನೆ-ವೋಗು=ಹೌಹಾರು; ಒಂದೆಮೆಯ್ = ಏಕಾಂಗ; ಉಂಡಿಗೆ = ಅಧಿಕಾರಮುದ್ರೆ; ಬಿಚ್ಚಳಿಸು=ಹಿಗ್ಗು. [೮೧] ಆಳಿಮಾಡು=ಭಂಗಿಸು; ಆಳಿದಿಕ್ಕೆ=ಹಾಸ್ಯಾಸ್ಪದ; ಆಟಂದ=ಏರಾಟದ; ಭಂಡ=ವ್ಯಾಪಾರದ ಸೊತ್ತು; ಮೊದಲ್=ಬಂಡವಾಳ. [೮೨] ಮೂವಳಿಸಿದ=ಮೂರುಸುತ್ತು ಸುತ್ತಿದ; ಸೊಮ್ಮು=ಸಂಪತ್ತು; ಪರದ=ವ್ಯಾಪಾರಿ. [೮೩] ತೂಂತಿಡು=ತುರುಕು; ನೆರಂ=ಸುಮ್ಮನೆ; [೮೪] ಅಣಂ=ಸ್ವಲ್ಪ; ಗಂಡಪೆಂಡರ(ಪೆಂಡೆಯ?)=ವೀರ ಬಿರುದಿನ ಬಳೆ. [೮೮] ಎರೆ=ಬೇಡು; ಬಿದಿಚ್ಚು=ಬಿಚ್ಚು; ಸೆಲ್ಲ=ಶಲ್ಯ, ಬರ್ಚಿ; ಕಲ್ವೆಸ=ಶಿಲಾಕರ್ಮ. [೯೩] ಕವಿಳಾಸ=ಕೈಲಾಸ; ಕೈವಾರಿಸು=ಸ್ತುತಿಸು; ಒಡರ್=ತೊಡಗು; ಕೈಕೊಳಿಸು=ಸ್ಥಾಪಿಸು; ಉಕ್ಕೆವ=ಆರ್ಭಟೆ; ಒಡ್ಡ=ಪಣ. [೯೫] ಬೆಗಳ್ದಳಱಿ=ಹೆದರಿ ದಿಕ್ಕೆಡುವಂತೆ; ತೂಳ್=ಬೆನ್ನಟ್ಟು; ಕೆರಸಿ=ಅಗಲಾದ ಸಣ್ಣ ಬಿದಿರಬುಟ್ಟಿ; ಕಾವಲಿ=ಕಾವಡಿ. [೯೬] ಋತ=ಸತ್ಯ. [೯೭] ದೂಸಿಗ=ಬಟ್ಟೆವ್ಯಾಪಾರಿ; ಪಸರ(ಪ್ರಸಾರ)=ಬಯಲಂಗಡಿ; ನಿಚ್ಚಟ=ನಿತ್ಯ; ಜವಳ=ಯಮಳ, ಹಸಿಬೆ (?); [೯೮] ಕೃತಿ=ಕೃತ್ಯ; ಹೇಮಕಾಳಿಕೆ=ಬಂಗಾರದ ಕಿಲುಬು. [೯೯] ಬೆಸವರ=ಸೇವಕ; ಥಟ್ಟು=ಸಮೂಹ. [೧೦೦] ಕುಳಿಕ=ಒಂದು ಜಾತಿಯ ಹಾವು; ಲವಲವಿಕೆ=ಚಾಪಲ್ಯ; ಮಾರ್ಪೊಳೆ ಇದಿರುಹೊಳೆ. [೧೦] ಹೆಱತೆಗೆ=ಹಿಂದೆಸರಿ. [೧೦೩] ಡಾಮರ=ಕ್ಷೋಭೆ. [೧೦೪] ಬೋವ=ಗ್ರಾಮಾಧಿಕಾರಿ; ಸೊಧೆ=ಸುಣ್ಣ (ಗಚ್ಚು?). [೧೦೫] ಕಕ್ಕಡೆ=ಕೊಳ್ಳಿ(?); ಮೊನೆ=ಯುದ್ಧ. [೧೦೭] ಸತ್(ಸಜ್ಜನ)+ಆಳಿ, ಸದಾ+ಅಳಿ(ತುಂಬಿ); ದಾನ=ದಾನ, ಮದೋದಕ; ಸುಮನಸ್=ಸುರ, ಒಳ್ಳೆಮನಸ್ಸಿನ; ಅಣೆಯರಂ=ಬಹುವಾಗಿ; ಸವಸು=ಸಮೆ, ಮಾಡು; ಅಜ್ಜಱಿ=ಸಂಕಟ; ತಳ್ತು=ಚಿಗುರಿ; ಅಣ್ಣು=ಬಳಲು; ಪುಯ್ಯಲ್ಚು=ಗೋಳಿಡು. [೧೦೮] ಮೂಳಿಗೆ=ಮನೆ; ಗುಡಾಣ=ದೊಡ್ಡ ಹರವಿ (ಮಣ್ಣಿನ ಪಾತ್ರೆ). [೧೦೯] ಕರ=ಚೆನ್ನಾಗಿ; ರಯ್ಯ=ರಮ್ಯ; ಕೆಸಱುಗಲ್ಲು=ಅಡಿಗಲ್ಲು.

———

# ಒಪ್ಪೋಲೆ

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೧೭ | ೯ | ಬೂತುಗಱ್ಗೆ | ಬೂತುಗೞ್ಗೆ |
| ೧೮ | ೧೪ | ತ್ರೀಣೇತ್ರ | ತ್ರಿಣೇತ್ರ |
| ೧೯ | ೨೫ | ಇವುಗಳ್ನು | ಇವುಗಳನ್ನು |
| ೨೦ | ೪ | ನಿವಾರಿಸುವ | ನಿವಾರಿಸುವ) |
| ೩೨ | ೨೧ | ಮಂಡಣೇಶ್ವರ | ಮಂಡಳೇಶ್ವರ |
| ೪೦ | ೧೫ | ವೊಸ | ಪೊಸ |
| ೪೬ | ೭ | ಗುಣದೊಳಳವಿನೊಳಂ | ಗುಣದೊಳಮಳವಿನೊಳಂ |
| ೫೦ | ೨೭ | ಸನ್ಧಿ | ಸನ್ಧಿ |
| ೬೨ | ೭ | ಸುತ್ಯ | ಸ್ತುತ್ಯ |
| ,, | ೧೨ | ಬೂವಿಶ್ರುತ | ಭೂವಿಶ್ರುತ |
| ೬೩ | ೨೪ | ಕಟ್ಟೋವು | ಕೊಟ್ಟೋವು |
| ೮೭ | ೧೯ | ಶ್ಲೇಷೆ) | (ಶ್ಲೇಷೆ) |
| ೯೨ | ೧ | ಅೞಿನಱಿಂದು | ಅೞಿನೞಿಂದು |
| ೧೦೦ | ೧೯ | ತೀತ್ಥವಿದೆ | ತೀರ್ಥವಿದೆ |
| ೧೧೨ | ೪ | ಪಣ್ಣಿತ | ಪಣ್ಡಿತ |
| ೧೧೬ | ೨೫ | ಬೂಮಿಯನ್ನು | ಭೂಮಿಯನ್ನು |
| ೧೧೯ | ೧೫ | ಅಗಸ್ತೇಶ್ವರ | ಅಗಸ್ತ್ಯೇಶ್ವರ |
| ೧೨೨ | ೨೦ | ರವಣ | ರಮಣ |
| ೧೩೧ | ೧೩ | ಹಿರಿಯದಾಗಿದ್ದುದರ | ಹಿರಿಯದಾಗಿ, ಮನ್ನೆಯನು ಇರುತ್ತಿದ್ದುದರ |
| ೧೪೫ | ೨ | — ಗಾನಸೆಜ್ಜೆಯ | — ಗಾನೆಸೆಜ್ಜೆಯ |
| ೧೪೮ | ೧ | ಬಿಂಕುವಿಲ್ಲದ | ಬಿಂಕವಿಲ್ಲದ |
| ೧೪೯ | ೨೭ | ಪೊಗುಳ್ಗಂ | ಪೊಗಳ್ಗಂ |
| ೧೭೬ | ೨೦ | ಸಂಗಿತನಾಮಾಪುರಂ | ಸಂಗೀತನಾಮಾಪುರಂ |